# "ಗೌಡದೊನಿಗೆ" ಹಾರ್ದಿಕ ಶುಭಾಶಯ

## ಕೊಡಗು ಗೌಡ ವಿದ್ಯಾ ಸಂಘ. ಮಡಿಕೇರಿ

ಕೊಡಗು

(ಮೇನ್ಸ್ ಕಾಂಪೌಂಡ್ ಹತ್ರ)

ಸ್ಥಾಪನೆ : ೧೯೦೮

ಸ್ಥಾಪಕರ್ : ದಿ॥ ಕುಂಬುಗೌಡನ ಕುಶಾಲಪ್ಪ

ಸಂಘದ ಸದಸ್ಯರ ಸಂಖ್ಯೆ–೧೫೦೦

ನಮ್ಮ ಗೌಡ ವಿದ್ಯಾ ಸಂಘಂದ, ಎಸ್. ಎಸ್. ಎಲ್. ಸಿ., ಪಿ. ಯು. ಸಿ. ಮತ್ತೆ ಪದವಿ ಪರೀಕ್ಷೆಲಿ ಜಾಸ್ತಿ ಅಂಕ ತೆಗ್ದವಕೆ ಸ್ಕಾಲರ್ ಶಿಪ್ ಕೊಟ್ಟವೆ.

ಸ್ಕಾಲರ್ ಶಿಪ್ ನಿಧಿಗ ಹಿಂಗುಟ್ಟು :—

| | | ಅಸ್‌ಲ್ | | ಬಡ್ಡಿ |
|---|---|---|---|---|
| ೧) ಚೆರಿಯ ಮನೆ ಕುಶಾಲಪ್ಪ ಸ್ಮಾರಕ ನಿಧಿ | ರೂ. | ೧೦೦೦೦ | ರೂ. | ೧೦೦೦ |
| ೨) ಕೊಡಗು ಗೌಡ ವಿದ್ಯಾಸಂಘದ ಸ್ಕಾಲರ್ ಶಿಪ್ ನಿಧಿ | ,, | ೫೦೦೦ | ,, | ೫೦೦ |
| ೩) ಚೆರಿಯಮನೆ ಬೋಳ್ಳಮ್ಮ ಸ್ಮಾರಕ ನಿಧಿ | ,, | ೧೦೦೦ | ,, | ೧೦೦ |
| ೪) ಪಟ್ಟಡ ನೀಲಮ್ಮ ಸ್ಮಾರಕ ನಿಧಿ | ,, | ೧೦೦೦ | ,, | ೧೦೦ |
| ೫) ಕುದುಪಜೆ ಕೃಷ್ಣಪ್ಪ ಸ್ಕಾಲರ್ ಶಿಪ್ ನಿಧಿ | ,, | ೧೦೦೦ | ,, | ೧೦೦ |
| ೬) ಕಡ್ಯದ ಬಿದ್ದಪ್ಪ ಸ್ಕಾಲರ್ ಶಿಪ್ ನಿಧಿ | ,, | ೧೦೦೦ | ,, | ೧೦೦ |

ಸಾಲ್ಕರ್ ಶಿಪ್ ನಿಧಿಗೆ ದಾನ ಮಾಡಿ ನಿಮ್ಮ ಹೆಸ್‌ರ್‌ನ ಕಾಯಂ ಆಗಿ ಉಳ್ಸಿ.

ಮದುವೆ ಮತ್ತೆ ಇತರ ಎಲ್ಲ ಸಮಾರಂಭಗಳಿಗೆ ನಮ್ಮಲ್ಲಿ ವಿಚಾರಿಸಿ.

ಅಧ್ಯಕ್ಷರ್
**ಕುದುಪಜೆ ಬಿ. ಕೃಷ್ಣಪ್ಪ**
ಎಂ.ಎ., ಬಿ.ಎಲ್.,

# ಗೌಡ ದೊನಿ

(ಗೌಡ ಕನ್ನಡದ ಸುರೂನ ಸಂಚಿಕೆ)

ಪ್ರಧಾನ ಸಂಪಾದಕ

ಸೂದನ ಎಸ್. ಈರಪ್ಪ

೧೭-೨-೧೯೮೫

## ಅರ್ಪಣೆ

ಕೊಡಗ್ ಮತ್ತೆ ಅವುರ ಸುಳ್ಯದ ಸ್ವಾತಂತ್ರ್ಯ ಹೋರಾಟೆಲಿ ಬ್ರಿಟಿಸರ
ವಿರುದ್ಧ ಹೋರಾಡಿ ಸ್ವಾತಂತ್ರ್ಯಕ್ಕಾಗಿ ತಮ್ಮ
'ಜೀವ'ನೆ ತ್ಯಾಗ ಮಾಡ್ದ ವೀರರಾದ
ಗುಡ್ಡೆಮನೆ ಅಪ್ಪಯ್ಯ
ಮತ್ತೆ
ಕೆದಂಬಾಡಿ ರಾಮುಗೌಡ್ರ್‌ಗೆ

# ಸಂಪಾದಕ ಮಂಡಳಿ

ಪ್ರಧಾನ ಸಂಪಾದಕರ್ : ಸೂದನ ಎಸ್. ಈರಪ್ಪ

ಸದಸ್ಯರ್ : ಪಿ. ಜಿ. ಅಂಬೆಕಲ್

ಕುದುಕುಳಿ ಟಿ. ಸುಬ್ಬಯ್ಯ

ಎಡಕೇರಿ ಜಿ. ವಿಶ್ವನಾಥ್

ಚೆಟ್ಟಿಮಾಡ ಜಯಮ್ಮ ಬಸಪ್ಪ

ಮುಖಪುಟ ಚಿತ್ರ : ಮೋಂಟಡ್ಕ ಪುರುಷೋತ್ತಮ

ಪ್ರಕಾಶಕರ್ : ಗೌಡ ಕನ್ನಡ ಸಂಕಲನ ಸಮಿತಿ
ಕುಶಾಲನಗರ-ಕೊಡಗು.

ಮುದ್ರಕರ್ : ಸೂರ್ಯ ಪವರ್ ಪ್ರೆಸ್, ಕುಶಾಲನಗರ

ಕ್ರಯ : ಹದಿಮೂರು ರೂಪಾಯಿ



# ಸಂಪಾದಕೀಯ

ಈ ಬೂಮಿಲಿರ್‌ವ ವಿವಿದ ಜನಾಂಗದೊವು ಮಾತಾಡ್‌ವ ಬಾಸೆನ ಲೆಕ್ಕ ಹಾಕಿರೆ ಸುಮಾರ್ ಮೂರು ಸಾವಿರಂದೊಳು ಹೆಚ್ಚ್ಯಾದು. ಇತರ ಬಾಸೆಗಳಂಗೆ ನಮ್ಮ್‌ದ್‌ಕೂಡಾ ಒಂದು ಬಾಸೆ; ಅದೇ 'ಗೌಡ ಕನ್ನಡ'. ಮಹಾಪ್ರಾಣ ಸಬ್ದ್‌ಗಳ ಉಚ್ಚಾರ ಕಮ್ಮಿ ಇರ್ಪ ಈ ಬಾಸೆನ ಬರೆಹದ ರೂಪುಲಿ ತಾಕುತ್ತಾದರೆ ಹಂಜಾ ಕಸ್ಟ ಉಟ್ಟು. ಇಸ್ಟರೊರಗೆ ಬರೀ ಮಾತ್‌ನ ರೂಪುಲೇ ಇದ್ದ ಈ ಬಾಸೆನ ಒಂದು ಪುಸ್ತಕದ ರೂಪಲಿ ತರಕುಂತೇಳಿ ಬಾಳ ದಿನಂದ ಇದ್ದ ನಮ್ಮ ಪ್ರಯತ್ನ ಇಂದ್ ಕೈಗೂಡಿಟು. ನಮ್ಮ ಈ ಕಾರ್ಯ ಗೌಡ ಕನ್ನಡ ಬಾಸೆನ ಇತಿಹಾಸಲೇ ಸುರೂನ ಸಲದ್ದ್.

ಬಾಸೆ ನಿತ್ತ ನೀರಾಗದೆ ಹರಿವ ಹೊನಲಾಕು. ಒಂದು ಬಾಸೆ ಬೆಳಿಯುಕೆ ಅದ್ ನಮ್ಮ್‌ದ್‌ತೇಳುವ ಹಿರಿಮೆ ನಾವ್ಗೆ ಬೇಕು. ಹುಟ್ಟ್ನ ಬಾಸೆನ ಸುರೂಗೆ ಕಲ್ತ್; ಬೇರೆ ಎಸ್ಟ್ ಬಾಸೆಗಳ್ನ ಕಲಿಯುಕೆ ಯಾರಾ ಅಡ್ಡಿ ಇಲ್ಲೆ. ಯಾವುದೇ ಬಾಸೆಲಿ ಮೇಲ್-ಕೀಳ್‌ತೇಳ್ದ್ ಇಲ್ಲೆ. ನಮ್ಮ 'ದೊನಿ' ಎಲ್ಲಾ ರೀತಿಲೂ ಬಾರಿ ಕ್ಷಿಣ ಆಕಂಡ್ ಇನ್ನ್ 'ದೊನಿ'ಯೆ ಕೇಳ್ದಿಲೆಂತಾ ಹೇಳ್‌ವ ಕಾಲಲಿ ಈ 'ಗೌಡ ದೊನಿ' ಕಿಲಿಗುಟ್ಟಿದೆ. ಆದರೆ ಹೆಚ್ಚಿನ ಜೆನಗಳ್ಳಿ ನಮ್ಮದೆಲ್ಲಾ ಹಾಳ್-ಬೇರೆವರ್ದ್ ಪೊರ್ಲುಂತೇಳುವ ಕೀಳ್ ಮನ್ಸ್ ಬಾಳ. ಅದರ್ಲೂ ಮಕ್ಕಳ ಕಾನ್ವೆಂಟಿಗೆ ಕಳ್ಸಿ, ಅವು Daddy, Donkey, Mummy, Monkey – ಹಿಂಗೆ ನಾಕ್ ಇಂಗ್ಲಿಸ್ ಸಬ್ದ ಹೇಳ್ರೆ ಸಾಕ್; ಆ ಅಯ್ಯೆಪ್ಪಗಳಿಗೆ ಸೊರ್ಗಕ್ಕೆ ಮೂರೇ ಗೇಣ್ ಬಾಕಿ! ಹುಟ್ಟ್‌ನ ಬಾಸೆನೇ ಬೇಡ, ಮಕ್ಕ ಕನ್ನಡಲೇ ಮಾತಾಡ್ಲಿಂತ ಅರೆ ಬರೆ ಕನ್ನಡಲಿ ಮಕ್ಕಳೊಟ್ಟಿಗೆ ಮಾತಾಡ್ವ ಮೊಡಿಮಂಶಿಕೆ ಮತ್ತೆ ದೊಡ್ಡಸ್ತಿಗೆ ಬಾಳ ಜೆನಗಳ್ಳಿ ಬೆಳ್ದಿಟು. ಹಿಂಗೆ ಆದರೆ ನಮ್ಮ ಬಾಸೆನ ಹೆಸ್ರೇ ಇಲ್ಲದಾಗಿ ಕಣ್ಮರೆ ಆದೂ ಮಾತ್ರ ಕಂಡಿತಾ. ಇನ್ನ್ ಕೆಲೊವ್ಕೆ ಈ ಬಾಸೆನ ಮಾತಾಡಿಕೆ ನಾಚಿಕೆ ಆದೆಗಡ! ತನ್ನ ಹುಟ್ಟ್ ಬಾಸೆನ ಮಾತಾಡಿಕೆ ನಾಚಿಕೆ ಪಟ್ಟ್‌ಕಂಬೊದು ಬೇಜರದ ಸಂಗತಿ. ಜೊಚ್ಚಿಲ್ ಬಸಿರಿಲಿ ಹುಟ್ಟಿದ ನಮ್ಮ ಈ 'ಗೌಡದೊನಿ'ಶೇಳುವ ಕೂಸು ಈಗ ಮೆಲ್ಲಂಗೆ ಮರ್ಡಿಕೆ ಸುರು ಮಾಡಿಟು ಅಸ್ಟೆ. ಈ ನಮ್ಮ ಕೂಸಿಗೆ ಲಾಯಿಕ್ ಹಾಲ್ ಉಣ್ಸಿ, ಸಾಂಕಿ ಗಟ್ಟಿಮುಟ್ಟ್‌ನ ಹೈದನಂಗೆ ಮಾಡ್‌ವ ಜವಾಬ್ದಾರಿ ಪ್ರತಿಯೊಬ್ಬನ ಪಾಲಿಗೂ ಸೇರ್ದ್.

ಕಡೇದಾಗಿ ಈ ಸಂಚಿಕೆನ ಹೊರ ತರ್‌ವಲ್ಲಿ ನನ್ನೊಟ್ಟಿಗೆ ಸಹಕರ್ಸಿದ ಸಮಿತಿನ ಎಲ್ಲಾ ಸದಸ್ಯರಿಗೂ, ಬರಹಗಾರರಿಗೂ, ದಾನಿಗಳಿಗೂ, ಜಾಹೀರಾತ್ ಕೊಟ್ಟವುಕೂ, ಸರಿಯಾದ ಮಾರ್ಗದರ್ಸನ ಕೊಟ್ಟ ನನ್ನೆಲ್ಲಾ ಮಿತ್ರರಿಗೂ, ಕೊಡಗು ಗೌಡ ವಿದ್ಯಾ ಸಂಘದವುಕೂ ಮತ್ತೆ ಬಾಳ ಕೆಲ್ಸಕಾರ್ಯಗ ಇದ್ದರೂ ಸಾ ಸಯಿಸಿಕಂಡ್ ನಮ್ಮ್‌ದ್‌ಂತೇಳ್ವ ಪ್ರೀತಿ ಮತ್ತೆ ಅಬಿಮಾನಂದ ಈ ಸಂಚಿಕೆನ ಮುದ್ರಿಸಿಕೊಟ್ಟ ಕುಶಾಲನಗರದ ಸೂರ್ಯ ಪ್ರೆಸ್‌ನ ಮಾಲೀಕರಾದ ಶ್ರೀ ಕುದುಕುಳಿ ಟಿ. ಸುಬ್ಬಯ್ಯನವುಕೂ, ಪೊರ್ಲಾಗಿ ಮುಖಪುಟನ ಬುಡಿಸಿಕೊಟ್ಟ ಎಂ. ಪುರುಸೋತ್ತಮನವುಕೂ ನನ್ನ ತುಂಬು ಹೃದಯುದ ಕೃತಜ್ನತೆಗ.

ಇದ್ ನಮ್ಮ ಸುರೂನ ಒಂದು ಪ್ರಯತ್ನ ಮಾತ್ರ ಆಗಿದ್ದ್ – ಅಕ್ಷರಗಳ್ಲಿ ಕೆಲು ದೋಸ ಇರಿಕೂ ಸಾಕ್, ಯಾವ ತೊಪ್ಪು ಇದ್ದರೂ ಇನ್ನ್‌ಮುಂದಕೆ ನಾವು ತಿದ್ದಿಕಂಬಂಗೆ ಆಶೀರ್ವಾದ ಮಾಡಿ. ನಿಮ್ಮೆಲ್ಲಾ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ ಉಟ್ಟು.

(ಪ್ರಧಾನ ಸಂಪಾದಕ)

## ಸಂಕಲನ ಸಮಿತಿ ಸದಸ್ಯರ್ಗ

೧) ಕೆ. ಪದ್ಮನಾಭ, ಕಾರ್ಕಳ
೨) ತೀರ್ಥರಾಮ ನೆಡ್ಚಿಲು
೩) ಪಾಂಡನ ಸುಬ್ರಮಣ್ಯ
೪) ಎ. ಜಿ. ವಸಂತಕುಮಾರ್
೫) ಲೋಕಪ್ಪ ಶೀರಡ್ಕ
೬) ಮುಡಪ್ಪಾಡಿ ಶಿವರಾಮ
೭) ಭವಾನಿ ಶಂಕರ್ ಅಡ್ತಲೆ
೮) ಕೇವಳ ಶೀಲಾವತಿ ಚಿನ್ನಪ್ಪ
೯) ಮಾಧವ ಪದೇಲ
೧೦) ಪದ್ಮಯ್ಯ ಎ. ಆರ್.
೧೧) ಭವಾನಿ ಶಂಕರ್ ಪಿ.
೧೨) ಗಂಗಾಧರ ಮುಂಡೆಕೋಲು
೧೩) ಅನುರಾಧ ಬಾಲಕೃಷ್ಣ ಕಡ್ಯ
೧೪) ತುಮ್ತಜ್ಜಿರ ಎಸ್. ಸುರೇಶ್
೧೫) ಕು|| ಎಸ್. ಸುಶೀಲ
೧೬) ಕು|| ನಡುಬೆಟ್ಟು ಭಾರತಿ
೧೭) ಕೊಳಂಬೆ ವೀರಪ್ಪಗೌಡ

# ಕೊಡಗ್‌ನ ಕ್ರಾಂತಿವೀರ ಗುಡ್ಡೆಮನೆ ಅಪ್ಪಯ್ಯಗೌಡ್ರು

—ಸೂದನ ಎಸ್. ಈರಪ್ಪ, ಪಾಲೂರು

1837 ಅಕ್ಟೋಬರ್ 31ರ ದಿನ ಕೊಡಗ್‌ನ ಕ್ರಾಂತಿ ದೀಪ ಒಂದು ಆರಿ ಹೋದ ದಿನ. 19ನೇ ಶತಮಾನದ ಪೂರ್ವಲಿ ಕೊಡಗ್‌ನ ಮೇಲೆ ಬ್ರಿಟಿಸರ್ ಹೇರ್ದ ದಬ್ಬಾಳಿಕೆನ ವಿರೋಧಿಸಿ ನಡ್ಸಿದ ದಂಗೆನ ಕುರ್ತ್ ಇತಿಹಾಸಕಾರರ್ ಸೂಕ್ಷ್ಮ ರೀತಿಲಿ ಶೋಧನೆ ಮಾಡಿ ''ಅಮರ ಸುಳ್ಯ ಕಾಟಕಾಯಿ'' "ಕೊಡಗ್ ಕೆನರಾ ಬಂಡಾಯತ" ಹೆಸ್ರು ಕೊಟ್ಟೊಳೊ ಇಷ್ಟರೊರಗೆ ಈ ದಂಗೆನ ಕುರ್ತ್ ಲೇಖನ, ಕತೆ, ಪುಸ್ತಕ ಬರ್ದವು ಸ್ವಾಮಿ ಅಪರಂಪಾರ ಮತ್ತೆ ಕಲ್ಯಾಣ ಸ್ವಾಮಿಗೆ ಮುಖ್ಯ ಸ್ಥಾನ ಕೊಟ್ರು ಸಾ ಗುಡ್ಡೆ ಮನೆ ಅಪ್ಪಯ್ಯ ಗೌಡ್ರ ಪಾತ್ರ ಮಾತ್ರ ಬಾಳ ಮಹತ್ವದ್‌ಂತೇಳಿ ತಿಳ್ದ್ ಬಂದದೆ. ಈ ದಂಗೆನ ಮೂಲ ಯವಸ್ಥೆಗೆ ಅಪ್ಪಯ್ಯ ಗೌಡ್ರೆ ಮುಖ್ಯ ಕಾರಣಂತೇಳ್ದರ್ಲಿ ಯಾವ ಸೊಂಸಯನೆ ಇಲ್ಲೆ.

ಅಪ್ಪಯ್ಯ ಗೌಡ್ರು ತನ್ನ ಪ್ರಾಣನೇ ಸ್ವಾತಂತ್ರ್ಯಕ್ಕಾಗಿ ಅರ್ಪಿಸಿದ ಒಬ್ಬ ತ್ಯಾಗಿ ಜೀವಿ. ಅಪ್ಪಯ್ಯ ಗೌಡ್ರ ಹಿರಿಯೊವು ಸುಳ್ಯದ ಮಾಗಣೆಂದ ಬಂದ್ ಕೊಡಗ್‌ಲಿ ಜಮ್ಮ ಪಡ್ದ್ ನೆಲ್ಸಿದೊವು. (ಸುಳ್ಯದ ಮಾಗಣೆಂತೇಳ್ರೆ ಆಗನ ಮೇಲಣ ಕೊಡಗ್) ಅಪ್ಪಯ್ಯ ಗೌಡ್ರು ಚಿಕ್ಕ ವೀರರಾಜನ ಕಾಲಲಿ ಜಮೆದಾರರಾಗಿದ್ದೊ. ಕೊಡಗ್ ಬ್ರಿಟಿಸರ ಕೈಗೆ ಸೇರ್ದ ಮೇಲೆ ಇವು ಸುಳ್ಯದ ಸುಭೇದಾರ ಆಗಿ ಬ್ರಿಟಿಸ್‌ನವರ ಆಡಳ್ತನ ಕುಷಿ ಪಡದೆ ತನ್ನ ಸಂಗಡಿಗರೊಟ್ಟಿಗೆ ಬ್ರಿಟಿಸ್‌ನವರ ಮರಾಡಳ್ತನ ವಿರೋಧಿಸಿ ಹೋರಾಟ ಮಾಡಿಕೆ ಸುರುಮಾಡ್ದೊ. ಈ ಹೋರಾಟಲಿ ಅಪ್ಪಯ್ಯ ಗೌಡ್ರು, ಕೆದಂಬಾಡಿ ರಾಮಗೌಡ್ರು, ಮತ್ತೆ ಹುಲಿಕುಂದ ನಂಜಯ್ಯನವು 'ಅಡಿಪಾಯ'ಗಳಂಗೆ ಇದ್ದೊಂತೇಳಿ ಚರಿತ್ರೆಕಾರರ್‌ಂದ ಬ್ರಿಟಿಸ್ ವರದಿಗಳ್‌ಂದ ನಾವ್‌ಗೆ ಗೊತ್ತಾದೆ.

1834ರ್‌ಲಿ ಕೊಡಗ್‌ಲಿ ಬ್ರಿಟಿಸರ ಆಡಳ್ತ ಸುರು ಆದೆ. ಆ ಸಮೆಲಿ ಕೊಡಗ್‌ನ ಆಡಳ್ತ ನಡ್ಸ್‌ತಿದ್ದ ಚಿಕ್ಕ ವೀರರಾಜನ, ದಿವಾನ ಬೋಪಣ್ಣ ಮತ್ತೆ ಇನ್ನ್ ಕೆಲವರ ಕುತಂತ್ರಂದಾಗಿ ಬ್ರಿಟಿಸರ್ ಬಾಳ ಸುಲ್ಬಲಿ-ಹಿಡ್ದ್ ವೆ.ಕ್ಯಾ. ಟಿ. ಡಿ. ಕಾರ್‌ಪೆಂಟ್‌ನ ಮುಂದಾಳತ್ವಲಿ ರಾಜನ ಮಡಿಕೇರಿಂದ ವೆಲ್ಲೂರಿಗೆ ಕರ್ಕಂಡ್ ಹೋಗಿ ಅಲ್ಲಿ ರಾಜ ಬಂಧಿಯಾಗಿ ಇಟ್ಟವೆ. ಹಿಂಗೆ ತಾ|| 11-4-1834ರಂದ್ ನಮ್ಮ ಕೊಡಗ್ ಜಿಲ್ಲೆಲಿ ಬ್ರಿಟಿಸರ ಆಡಳ್ತ ಸುರು ಆತ್. ಜೆನಗಳ ಮೇಲೆ ಅವರ ದಬ್ಬಾಳಿಕೆನೂ ಕೂಡಾ ಹೆಚ್ಚ್‌ಕಂಡ್ ಬಾತ್. ಬ್ರಿಟಿಸರ್ ಕೆಲ ದಿವಾನರ್‌ಗಳ ಸ್ವಾರ್ಥ ಆಸೆನ ಕಂಡ್ ಅದರ ತಮ್ಮ ಸೊಂತ ಲಾಭಕ್ಕಾಗಿ ಬಳ್ಸಿಕಂಡ್ ಜೆನಗಳ ಸಕ್ತಿ ಮತ್ತೆ ಒಗ್ಗಟ್ಟ್‌ನ ಕಮ್ಮಿ ಮಾಡಿಕ್ಕಾಗಿ ಕೊಡಗ್‌ನ ಭಾಗನೆ ಆಗಿದ್ದ ಸುಳ್ಯ, ಪುತ್ತೂರು ಮತ್ತೆ ಜೆಳ್ವಾರೆ ಸೀಮೆಗಳ 1834ನೇ ಅಕ್ಟೋಬರ್ ತಿಂಗಲಿ ದಕ್ಷಿಣ ಕನ್ನಡ ಜಿಲ್ಲೆಗೆ ವರ್ಗಾವಣೆ ಮಾಡುವೆ. ಜೆನಗಳಿಗೆ ಬ್ರಿಟಿಸರ ಈ ಕೆಲ್‌ಸ ಸರಿ ಕಂಡತ್‌ಲೆ, ಪ್ರಜೆಗ ತಮ್ಮ ಅರಸನ ಮೇಲೆ ಬಾಳ ಪ್ರೀತಿ ಮತ್ತೆ ವಿಸ್ವಾಸ ಇಟ್ಟ್‌ಕಂಡಿದ್ದೊ, ದಂಗೆನ ಗಟನೆಗೆ ಮೂಲ ಕಾರಣ ಸಾ ಇದೆ ಆತ್. ತಮ್ಮ ರಾಜನ ಬದ್ಲಿಗೆ ಬೇರೆ ಯಾರೋ ಬಂದ್ ಆಡಳ್ತ ನಡ್ಸುದು ಜೆನಗಳಿಗೆ ತೃಪ್ತಿ ಆತ್‌ಲೆ.

ಚಿಕ್ಕ ವೀರರಾಜನ, ಬ್ರಿಟಿಸರ್ ರಾಜ ಪದ್ವಿಂದ ತೆಗ್ದ್ ಮೇಲೆ ಸ್ವಾಮಿ ಅಪರಂಪಾರ ಮತ್ತೆ ಕಲ್ಯಾಣ ಸ್ವಾಮಿ, ಈ ಇಬ್ರೊರು ಮುಖಂಡರ್‌ಗ ಹೋರಾಟ ಸುರು ಮಾಡಿಕೆ ಕಾರಣ ಹುಡ್ಕಿಕ್ಕಾಗಿ ಬ್ರಿಟಿಸ್‌ನವರೊಟ್ಟಿಗೆ ಸಿಂಹಾಸನದ ಹಕ್ಕ್‌ನ ಕೇಳವೆ. ಕೊಡಗ್‌ಲಿ ಕೆಲ ಪ್ರಮುಖರ್ ಬ್ರಿಟಿಸರ ಪರ ಇದ್ದ ಕಾರಣ ಈ ನಾಯಕರ್‌ಗ ದ. ಕನ್ನಡ ಜಿಲ್ಲೆನ ತಮ್ಮ ಕಾರ್ಯ ಸ್ಥಾನ ಆಗಿ ಮಾಡ್ಕಂಡೊ, ಇದರ ಗುಟ್ಟ್‌ಲಿ (ಗುಪ್ತಚಾರಿಕೆಂದ) ತಿಳ್ಕಂಡ ಬ್ರಿಟಿಸರ್ ಸ್ವಾಮಿ ಅಪರಂಪಾರ ಮತ್ತೆ ಕಲ್ಯಾಣ ಸ್ವಾಮಿನ 1837ರ್‌ಲಿ ದಸ್ತಗಿರಿ ಮಾಡಿವೆ. ಹಿಂಗೆ ಬಂಡಾಯದ ಮುಖ್ಯ ನಾಯಕರ್‌ಗ ಬಂಧನ

ಲಿದ್ದರೂ ಕೂಡಾ ಈ ದಂಗೆನ ಉತ್ತರೋತ್ತರ ಬೆಳವಣಿಗೆನ ಕೀರ್ತಿ ಗುಡ್ಡೆಮನೆ ಅಪ್ಪಯ್ಯ ಗೌಡ್ರು, ಸುಳ್ಯದ ರಾಮ ಗೌಡ್ರು, ಹುಲಿಕುಂದ ನಂಜಯ್ಯ ಮತ್ತೆ ಇನ್ನ್ ಕೆಲವುಕೆ ಸೇರ್ದಿ.

ನಾಯಕರ್‌ಗಳ ಬಂಧನಂದ ಬಂಡಾಯದ ಏರ್ಪಾಡ್‌ನ ಮೊಳ್ಕೆಲೇ ಜಿಂಟ ಹಾಕಿದಂಗ್ಗಾದೆ. ಇಂತ ಆಪತ್ತ್‌ನ ಸಮೆಲಿ ಹೆದ್‌ರಿ ಕುದ್ರದೆ ಅಪ್ಪಯ್ಯ ಗೌಡ್ರು, ರಾಮಗೌಡ್ರು, ಇನ್ ಬಾಕಿಯೊವೆಲ್ಲ ಬಂಡಾಯದ ಪೂರ್ತಿ ಹೊಣೆನ ಹೊತ್ಕಂಡೊ. ಶನಿವಾರ್‌ಸಂತೆ ಹಕ್ಕಲೆನ ಹೆಮ್ಮನಿ ಗ್ರಾಮದ ರೈತ ಪುಟ್ಟಬಸಪ್ಪನ ಕಲ್ಯಾಣ ಸ್ವಾಮಿನ್ಹಾಂಗೆ ನಟನೆ ಮಾಡಿಕೆ ಹೆಂಗಾರ್ ಮಾಡಿ ಒಪ್ಪಿಸಿ ಆತ್. ಜೆನ ಈ ಕೃತಕ 'ಕಲ್ಯಾಣ ಸ್ವಾಮಿ'ನ ಇವನೇ ಮುಂದೆ ಆವದೊರೆಂತ ನಂಬ್ಸವಂಗೆ "ಕೆಣಿ" (ಉಪಾಯ) ಮಾಡ್ದೊ. ಅಪ್ಪಯ್ಯ ಗೌಡ್ರು ಈ ಸಂದ್‌ರ್ಭಲಿ ಸುಭೇದಾರ ಆಗಿದ್ದೊ. ಕ್ರಾಂತಿ ದಳಲಿ ಶಿಸ್ತ್ ಮತ್ತೆ ನಿಯಮನ ಯುವಸ್ತೆ ಮಾಡ್ದೊ. ಬಾಳಸ್ಟ್ ಸರ್ಕಾರಿ ಚಾಕಿರಿಲಿದ್ದ ಜೆನಗಳ್‌ನ ಈ ಬಂಡಾಯಲಿ, ಕೂಡಿ ನಮ್ಮ ಜಿಲ್ಲೆನ ಕಾಪಾಡಕುಂತೇಳಿ ಮತ್ತಾಯ ಮಾಡಿ ಅವ್‌ಕೆಲ್ಲ ಧೈರ್ಯ ಕೊಟ್ಟ್ ದಂಗೆ ಎದ್ರಿಕೆ ಸೇರ್ಸಿದೊ. ಮತ್ತೆ ಬೇಕಸ್ಟ್ ಜೆನಗಳ ಬಂಡಾಯಲಿ ಒಟ್ಟ್ ಸೇರ್ಸಿದೊ. ನೆಲ್ಜಿನ ಮಂಡಿರ ಉತ್ತಯ್ಯ, ಶಾಂತಳ್ಳಿನ ಮಲ್ಲಯ್ಯ, ಕುಕ್ಕನೂರು ಚೆನ್ನಯ್ಯ, ಇಂತ ಮಹಾ ಶೂರಂಗಳ ಕ್ರಾಂತಿಲಿ ಸೇರ್‌ಸಿ ಬ್ರಿಟಿಸರ ಇರುದ್ಧ ಹೋರಾಟ ನಡ್ಸಿಕೆ ಒಪ್ಪಿಸಿವೆ. ಅಪ್ಪಯ್ಯ ಗೌಡ್ರು, ಚಿಕ್ಕವೀರರಾಜನ ಬ್ರಿಟಿಸರ್ ಜೈಲಿಗೆ ನೂಕಿದ್ದಂಗೆ ಕಾಡ್‌ಲಿ ಅಡ್‌ಗಿಕಂಡಿದ್ದ ರಾಜನ ಭಕ್ತಂಗ ಆಗಿದ್ದ ಚೆಟ್ಟಿ ಮತ್ತೆ ಕುರ್ತು ಕುಡ್ಯಂತೇಳ್ವ ಮಹಾನ್ ಶೂರ ಅಣ್ಣತಮ್ಮಂದ್‌ರ್ಬರ್‌ನ ಗುರ್ತ ಹಿಡ್ದ್ ಅವರ ಸಾ ಕ್ರಾಂತಿಲಿ ಸೇರ್ಸಿದೊ. ಬೇಂಗುನಾಡ್, ಎಡೆನಾಡ್, ತಾವುನಾಡ್, ನಾಲ್ಕ್‌ನಾಡ್ ಗ್ರಾಮಗಳಿಗೆ ಕುದ್ದಾಗಿ ಹೋದ ಅಪ್ಪಯ್ಯ ಗೌಡ್ರು ಅಲ್ಲಿನ ಜೆನಗಳಿಗೆ ಸ್ಥಿತಿಗತಿನ ಕೆಬಿಗೆ ನಾಟ್‌ವಂಗೆ ಲಾಯಿಕ್ ಹೇಳಿ ಅವರ್ಲಿ ಸ್ವಾತಂತ್ರ್ಯದ ಕಿಚ್ಚಿನ ಉರಿವಂಗೆ ಮಾಡ್ದೊ.

5-3-1837ರ ಶಿವರಾತ್ರಿ ದಿನದಂದ್ ದಂಗೆ ಎದ್ರುದುಂತೇಳಿ ನಿಶ್ಚಯ ಆತ್. ಆದರೆ ದುರಾದೃಷ್ಟಂದ ಈ ವರ್ತಮಾನ ದೇಶ ದ್ರೋಹಿ ಆಗಿದ್ದ ಸುಳ್ಯದ ಅಟ್ಲೂರು ರಾಮಪಯ್ಯಂಗೆ ಗೊತ್ತಾಗಿ ಅಂವ ಮಡಿಕೇರಿಲಿದ್ದ ಇವನ ಅಣ್ಣ ನಾರಾಯಣಂಗೆತಿಳ್ಸಿ ಬ್ರಿಟಿಸರ್ಗೆ ದಂಗೆ ಏಳ್‌ವ ಸುದ್ದಿ ಮುಟ್ಟಿಸಿದೆ. ಇದ್ ಗೊತ್ತಾದ ಕೂಡ್ಲೆ ಕ್ರಾಂತಿವೀರಂಗ ನಿಶ್ಚಯ ಮಾಡ್ದಸಮೆಕೆ ಮುಂದೆನೇ ದಂಗೆ ಎದ್ರಿಕೆ ಸುರು ಮಾಡಿ ಬುಟ್ಟವೆ. ಕೊಡಗ್‌ಲಿ ಗುಟ್ಟ್ ರಟ್ಟಾದರ್‌ಂದ ಕ್ರಾಂತಿವೀರಂಗ ದಕ್ಷಿಣದ ಕಡೆಗೆ ದಂಡೆತ್ತಿ ಹೋದವೆ. ಕ್ರಾಂತಿವೀರರ ಸೈನ್ಯದ ಮುಖಂಡತ್ವನ ಅಪ್ಪಯ್ಯ ಗೌಡ್ರೆ ವಯಿಸಿಕಂಡವೆ, ಬ್ರಿಟಿಸರ ಇರುದ್ಧ ದಂಗೆ ನಡ್ಸಿಕೆ ಹೊರ್ಟ ಕ್ರಾಂತಿವೀರರ ಸೈನ್ಯ ದೇಶ ದ್ರೋಹಿ ಅಟ್ಲೂರು ರಾಮಪ್ಪಯ್ಯನ ಕೊಂದ್ ಮುಂದೆ ಬೆಳ್ಳಾರೆ ಕೋಟೆನ ಹಿಡ್ದ್ ವೀರವೇಸಂದ ಹೋರಾಡಿ ಬಾರಿ ಬ್ರಿಟಿಸ್ ಸೈನ್ಯನ ಸೋಲ್ಸಿ ಬಾವುಟ ಗುಡ್ಡಲಿ ಬಾವುಟ ಹಾರ್ಸಿದೊ. ಬ್ರಿಟಿಸ್ ಸೈನ್ಯ ಇವರ ಸೈನ್ಯದ ಮುಂದೆ ಹೋರಾಡಿಕಾಗದೆ ಸೋತ್ ಹಿಮ್ಮೆಟ್ಟವೆ ಈ ಕ್ರಾಂತಿ ಸೈನ್ಯದ ಸಂಖ್ಯೆ ಸುಮಾರ್ 12,000 ಇತ್ತ್ಂತ ತಿಳ್ದ್ ಬಂದದೆ. ಮಂಗ್ಳೂರ್‌ಲಿ ಬ್ರಿಟಿಸ್ ಸೈನ್ಯನ ಸೋಲ್ಸಿದ ಮೇಲೆ ಕೊಡಗ್‌ನ ಮುತ್ತ್‌ವ ವಿಚಾರಲಿ ಯುವಸ್ತೆ ನಡ್ದದೆ. ಕೊಡಗ್‌ನ ಮುತ್ತ್‌ವ ಈ ಕ್ರಾಂತಿ ವೀರರ ಸೈನ್ಯಕ್ಕೆ ಅಪ್ಪಯ್ಯ ಗೌಡ್ರೆ ಮಹಾ ದಂಡನಾಯಕ ಆದವೆ. ಚೆಟ್ಟಿಕುಡ್ಯ ಮತ್ತೆ ಕುರ್ತು ಕುಡ್ಯ, ಮಂಡಿರ ಉತ್ತಯ್ಯ, ಕೂಜಿಗೋಡು ಮಲ್ಲಯ್ಯ ಗೌಡ್ರು ಈ ದಂಡ್‌ನ ಪ್ರಮುಖ ಸೇನಾನಿಗ ಆದವೆ.

ಅಪ್ಪಯ್ಯ ಗೌಡ್ರು ತನ್ನ ಸೈನ್ಯನ ಎರ್ಡ್ ಭಾಗ ಮಾಡಿ ಒಂದರ ಸಂಪಾಜೆ ಹಾದಿಲಿ ಕಳ್ಸಿ ತಾನ್ ಇನ್ನೊಂದ್ ವಿಭಾಗದೊಟ್ಟಿಗೆ ಬಿಸಿಲೇ ಘಾಟ್‌ನ ದಾಟಿ ಬಂದವೆ ಈ ಸಂಗತಿ ಲೀಹಾರ್ಡಿಗೆ ಗೊತ್ತಾಗಿ ಅಂವ ಹೆದ್‌ರಿ ಜಾಸ್ತಿ ಸೈನಿಕಂಗ ಇರ್ವ 19ನೇ ರೆಜಿಮೆಂಟ್‌ನ ಫ್ರೆಂಚ್ ರಾಕ್ಸ್‌ಂದ ತರ್ಸಿಕಣ್ದೆ. ಲೀಹಾರ್ಡಿ ಈ ಸೈನ್ಯನ ಎರ್ಡ್ ವಿಭಾಗ ಮಾಡಿ ಬ್ರಿಟಿಸರ ದಿವಾನಗ ಆದ ಬೋಪಣ್ಣ ಮತ್ತೆ ಪೊನ್ನಪ್ಪ ಇವರಿಬ್ಬರ್‌ನ ಆ ಗುಂಪುನೊಟ್ಟಿಗೆ ಕಳ್ಸಿದೆ ಬೋಪಣ್ಣ ದಿವಾನ ಸಂಪಾಜೆಗೆ ಹೋದೆ, ಪೊನ್ನಪ್ಪ ದಿವಾನ ಬಿಸಿಲೇ ಘಾಟಿಗೆ ಹೋದೆ, ಅಪ್ಪಯ್ಯಗೌಡ್ರ ಸೈನ್ಯ ಬ್ರಿಟಿಸರ ಸೈನ್ಯ ಬಾವಕ್ಕರ್‌ಲಿ ಬಿಸಿಲೆ ಘಾಟ್‌ನ ಸುಭೆದಾರ ಅಪ್ಪಚ್ಚನ ಸೋಲ್ಸಿ ಹದ್ದ್ ದಾಟಿ (ಗಡಿ) ಇಚೆಗೆ ಬಂದಿದ್ದದೆ. ಈ ದಂಗೆಲಿ ಉತ್ತರ ಕೊಡಗ್‌ನ ಸಾಕಸ್ಟ್ ಜೆನ ಕೂಡಿದ್ದವೆ. ಆದರೆ ಭಾರಿ ಭಾರಿ ಹೊಸಸ ಆಯಿಧಗಳ್‌ಂದ ಕೂಡಿದ್ದ ಬ್ರಿಟಿಸ್ ಸೈನ್ಯನ ನೋಡಿ ಬಾಳಸ್ಟ್ ರೈತಂಗ ಹೆದ್‌ರಿ ದಂಗೆನ ಬುಟ್ಟಿ ಹೋವ್ರುಟವೆ. ಕ್ರಾಂತಿ ಯೋಧಂಗ ಮಾತ್ರ ಕಡೆ ಉಸ್ರ್ ಇರ್ವವರೆಗೆ ಹೋರಾಡುವೆ ಭೂಮಿ ತಾಯಿಗೆ ರಕ್ತ ಸುರ್ಸಿವೆ, ಬ್ರಿಟಿಸರ ಭಾರಿ ಸೈನ್ಯದ ಮುಂದೆ ಕ್ರಾಂತಿ ವೀರರ ಸೈನ್ಯ ಸೋತೊವೆ. ಸಾಕಸ್ಟ್

ಕ್ರಾಂತಿ ವೀರರಂಗ ಬ್ರಿಟಿಸರ ಸೈನ್ಯಕ್ಕೆ ಸೆರೆ ಸಿಕ್ಕಿವೆ. ಸೈನ್ಯ ಸೋತಮೇಲೆ ದಿಕ್ಕ್ ಕಾಣದ ಅಪ್ಪಯ್ಯಗೌಡ್ರು ತೊಪ್ಪಿಸಿಕಂಡ್ ಸುಬ್ರಮಣ್ಯಕ್ಕೆ ಮುಟ್ಟಿ ಬಾವಸ್ರಲಿ ಇನ್ನೊಂದು ಬೀಕರ ಸುದ್ದಿ ಇವರ ದಿಕ್ಕ್ ಕೆಡಿಸಿದೆ. ಅಲ್ಲಿ ಸಾ ಬ್ರಿಟಿಸರ ದೊಡ್ಡ ಸೈನ್ಯ ಧಾರವಾಡ, ಕಲ್ಲಿಕೋಟೆ, ಬೊಂಬಾಯಿ ಕಡೆಗಳ್‌ಂದ ಎವರೆಸ್ಟ್ ಮತ್ತೆ ಗ್ರೀನ್‌ನ ನಾಯಕತ್ವಲಿ ಬಂದ್ (ಈ ಸೈನ್ಯಲಿ ಸುಮಾರ್ 3,000 ಜೆನ ಸೈನಿಕರ್ ಇದ್ದವೆ) ಮಂಗ್ಳೂರ್‌ನ ಆಕ್ರಮಿಸಿಕಂಡವೆ. ಸೈನ್ಯದ ಮುಖ್ಯ ಭಾಗನ ಕೊಡಗ್‌ಗೆ ಕಳ್ಸಿದರ್‌ಂದ ರಾಮಗೌಡ್ರ ಸೋಲು ಅನಿವಾರ್ಯ ಆತ್. ಮಡಿಕೇರಿ ಮೇಲೆ ದಾಳಿ ಮಾಡ್ದ ಅಪ್ಪಯ್ಯಗೌಡ್ರ ಸೈನ್ಯ ಮಡಿಕೇರಿಂದ ಬೆರಿ ಸಾರ್ ಮೈಲಿ ದೂರಲಿತ್ತ್. ಈ ಹೊರಾಟಲಿ ಸಾ ಸೋತ ಮೇಲೆ ಮುಖಂಡರ್ ತೊಪ್ಪಿಸಿ ಕಂಡವೆ. ಬ್ರಿಟಿಸರ್ ತೊಪ್ಪಿಸಿಕಂಡ ಮುಖಂಡರ್‌ಗಳ ಹಿಡ್ದ್ ಕೊಟ್ಟವುಕೆ 10,000 ರೂಪ್ಯಾ ಬೋಮಾನ ಕೊಟ್ಟವೇಂತ ಸಾರ್ದೊ, ಆಗಳೇ ಬ್ರಿಟಿಸರ್, ಮುಖಂಡರ್‌ಗಳ ಹಿಡ್ದ್ ಕೊಟ್ಟವುಕೆ 10,000 ರೂಪ್ಯಾ ಬೋಮಾನ ಸಾರ್ದ್ ನೋಡ್ರೆ ಈ ವೀರರ ಹೋರಾಟದ ಮಹತ್ವ ಏನ್‌ಂತೇಳ್ದು ಅರ್ತಾದೆ. ಈ ದಂಗೆಲಿ ಬೇಕಸ್ಟ್ ಜೆನ ಯೋಧರ ರಕ್ತ ಚೆಲ್ಲಿ ಭೂಮಿತಾಯಿಗೆ ಅಬಿಸೇಕ ಆತ್ ಸೈನ್ಯ ಸೋತಮೇಲೆ ನಾನ್ ಬ್ರಿಟಿಸರ್ಗೆ ಹೆದ್ರಿ ಅಂಡ್ಗುದು ಯಾಕೆ? ಕಡೆ ಉಸ್ರ್ ಇರ್ವವರೆಗೆ ನಾ, ಸ್ವಾತಂತ್ರ್ಯಕ್ಕಾಗಿ ಹೋರಾಡ್ನೆಂತೇಳಿ ತೀರ್ಮಾನ ಮಾಡ್ತ ಅಪ್ಪಯ್ಯಗೌಡ್ರು ತನ್ನ ಊರಿಗೆ ಬಂದ್ ಇನ್ನ ಒಂದೇ ಕೂಸುನ ಕಡೆಗೊಮ್ಮೆ ನೋಡಿ ಮುತ್ತು ಕೊಟ್ಟ್ ಹೆಣ್ಣ್‌ನ ಸಮಾದಾನ ಪಡ್ಸಿ ಅವರ ಮುಂದೆನ ಜೀವನಕ್ಕೆ ಯಾವ ಬಂಗ ಬಾರದಂಗೆ ನೋಡಿಕಂಬಕೆ ಮನೆವುಕೆ ವಯಿಸಿವೆ. ಹಿಂಗೆ ಮನೆ ಕಡೆ ಯವಸ್ತೆ ಮಾಡಿ ಬ್ರಿಟಿಸರ ಕೈಗೆ ಸಿಕ್ಕಿವೆ. (ಅಪ್ಪಯ್ಯಗೌಡ್ರುಗೆ ಇಬ್ಬರೂ ಹೆಣ್ಣ್ ಇದ್ದೊಂತೇಳಿ ಸಾ ಒಂದು ಮೂಲಂದ ತಿಳ್ದ್‌ಬಂದದೆ.)

ಆಮೇಲೆ ಸೆರೆ ಸಿಕ್ಕಿದ ವೀರ ಮುಖಂಡರ್‌ಗಳ ವಿಚಾರಣೆನ ಬ್ರಿಟಿಸ್ ಸೈನ್ಯದ ಕಾನೂನು ಅಧಿಕಾರಿಗಳೇ ನಡ್ಸಿವೆ. ಚೆಟ್ಟಿ ಕುಡ್ಯ ಮತ್ತೆ ಕುರ್ತ ಕುಡ್ಯಂಗಳಿಬ್ಬರಿಗೂ ಜೀವಾಧಿ ಶಿಕ್ಷೆ ವಿಧಿಸಿ ಸಿಂಗಾಪುರಕ್ಕೆ ಗಡಿಪಾರ್ ಮಾಡಿ ಮಾಡ್ದೊ. ಮಂಡಿರ ಉತ್ತಯ್ಯ, ಶಾಂತಳ್ಳಿ ಮಲ್ಲಯ್ಯ, ಪಾರ್ಪತ್ತೆಗಾರ ಕೃಷ್ಣಯ್ಯ ಇನ್ನ್ ಮುಂತಾದೊವ್ಕೆ 7ರ್‌ಂದ 14 ವರ್ಷ ಸೆರೆವಾಸನ ಬ್ರಿಟಿಸ್ ಸರ್ಕಾರ ವಿಧಿಸಿ ಜೈಲಿಗೆ ನೂಕಿತ್.

ಅಮರ ಸುಳ್ಯ ಮತ್ತೆ ಕೊಡಗ್‌ನ ಈ ದಂಗೆಲಿ ನಾಯಕತ್ವನ ವಯಿಸ್ಕಂಡ್ ಬಾಳಸ್ಟ್ ಹೋರಾಟ ನಡ್ಸಿ ಬ್ರಿಟೀಸರ ಓಡ್ಸಿ ಸ್ವಾತಂತ್ರ ತರೋಕುಂತೇಳಿ ಪ್ರಯತ್ನ ಪಟ್ಟ ನಮ್ಮ ನಾಡ್‌ನ ಹೆಮ್ಮೆನ ಮಜ ಗುಡ್ಡೆ ಮನೆ ಅಪ್ಪಯ್ಯ ಗೌಡ್ರುಗೆ ಮರಣ ದಂಡನೆ ಶಿಕ್ಷೆನ ಬ್ರಿಟಿಸ್ ಸರ್ಕಾರ ವಿಧಿಸಿದೆ. ಕ್ರಾಂತಿ ವೀರ ಗುಡ್ಡೆಮನೆ ಅಪ್ಪಯ್ಯ ಗೌಡ್ರುನ ಜೆನಗಳ ಎದ್ರ್‌ಲಿ ನೇಣ್ ಹಾಕಿಕೆ ತೀರ್ಮಾನ ಮಾಡ್ದ ಬ್ರಿಟಿಸರ್ 1837ನೇ ಇಸ್ವಿ ಅಕ್ಟೋಬರ್ 31ನೇ ತಾರೀಕ್‌ನಂದ್ ಹೊತಾರೆ 10 ಗಂಟೆ ಸಮೆಲಿ ಮಡಿಕೇರಿ ಕೋಟೆ ಮುಂದೆನ ಯತ್ತರದ ಜಾಗೆಲಿ ಗಲ್ಲ್ ಕಂಬಕ್ಕೆ ನೇಣ್ ಹಾಕಿವೆ. ಕರ್ಳ್ ಕತ್ರುಸು ವಂತ ಈ ಬೀಕರ ಚಿತ್ರನ ನಾಡ್‌ನವೆಲ್ಲ ನೋಡಕುಂತೇಳಿ ಕ್ಯಾ॥ ಲೀಹಾರ್ಡಿ ಜಿಲ್ಲೆನ ರೈತರ, ಎಲ್ಲಾ ಊರ್‌ನ ಪಟೇಲರ್‌ಗಳ ಕರ್ಸಿ ಅವರವರ ಕೈಲಿದ್ದ ಆಯಿಧಗಳ್ನೆಲ್ಲಾ ತನ್ನ ಕಾಲ್ಬುಡಲಿ ಇಸಿ ಶರಣಾಕೆ ಹೇಳಿ ನಿವೆಲ್ಲಾ ಇನ್ನ್‌ಮುಂದೆ ನಮ್ಮ ಅಡಿಯಾಳಾಗಿ ಜೀವನ ಮಾಡೋಕುಂತೇಳಿ ಅಪ್ಪಣೆ ಮಾಡ್ದೆ. ಗುಡ್ಡೆಮನೆ ಅಪ್ಪಯ್ಯಗೌಡ್ರ ನೇಣ್ ಗಂಬಕ್ಕೆ ಏರ್ಸುವ ಬೀಕರ ದೃಶ್ಯನ ನೋಡ್ದ ಜೆನಗಳ ಕಣ್ಣ್‌ಲಿ ತೊಟ್ಟು ತೊಟ್ಟು ನೀರ್ ಹಂಕಿತ್. ನಮ್ಮ ನಾಯಕನ ಕಳ್ಕಂಡೊಂತೇಳಿ ಬಾಳ ದುಃಖಪಟ್ಟವೆ. ಸುಳ್ಯದ ಕೆದಂಬಾಡಿ ರಾಮಗೌಡ್ರ ಮತ್ತೆ ಕ್ಷತಕ ಕಲ್ಯಾಣಸ್ವಾಮಿ ಪುಟ್ಟಬಸಪ್ಪನವರ ಸಾ ಮಂಗ್ಳೂರ್‌ನ ಬಿಕ್ರಣಕಟ್ಟೆ ಪಡುನ ಹತ್ರ ಗಲ್ಲ್ ಕಂಬಕ್ಕೆ ತೂಗ್ಹಾಕುವೆ.

ಸ್ವಾತಂತ್ರ್ಯನ ಉಳ್ಸಿಕೆ ಹೊರ್ಟ ಕ್ರಾಂತಿ ವೀರರ "ಹೋರಾಟ"ನ ನಡ್ಸದಂಗೆ ಬಂಗಮಾಡಿ ಕಡೆಗೂ ಬ್ರಿಟಿಸರ ಕೈಗೆ ಇವರ ಹಿಡ್ದ್ ಕೊಟ್ಟ್ ಅವ್ರುಕೆ ಸಾಯಮಾಡ್ದ ಬ್ರಿಟಿಸರ ಎಂಜ್‌ಲ್ ತಿಂದೇ ಬೊದ್ಕಿರಿ ಲಾಯಿಕ್‌ಂತೇಳಿ ಇಷ್ಟಪಟ್ಟಿದ್ದ ಕೆಲವು ದೇಶ ದ್ರೋಹಿಗಳಿಗೆ ಬ್ರಿಟಿಸ್ ಸರ್ಕಾರ ಬೇಕಸ್ಟ್ ಬೋಮಾನ ಮತ್ತೆ ಅವರ ತಲೆ ಮಾರ್‌ನವರೆಗೆ ಪಿಂಚಣಿ ಮತ್ತೆ ಉಂಬಳಿನ ಕೊಡ್ವುಂತೇಳಿ ಘೋಷಣೆ ಮಾಡ್ತ್. ಈ ದಂಗೆ ಇಲ್ಲಿಗೆ ಕೊನೆ ಆತ್‌ಂತ ಹೇಳಕ್.

ಸ್ವಾತಂತ್ರ್ಯಕ್ಕಾಗಿ ತಮ್ಮ ರಕ್ತನ ಹರ್ಸಿದ ಈ (ದಂಗೆನ) ದೇಶ ಪ್ರೇಮಿಗಳ ಹೋರಾಟನ ಕುರ್ತ್ ಸರಿಯಾಗಿ ಪರೀಕ್ಷೆ ಮಾಡಿ ವರದಿ ಮಾಡಕುಂತೇಳಿ ಬ್ರಿಟೀಶರಿ ಅನ್ಸ್ಕೆ ಮಾಡ ಕಾಟನ್‌ನ ವರದಿ ಪ್ರಕಾರ, ದಂಗೆಕಾರರ್‌ಗೆ ಕೊಡಗ್‌ಂದ ಬ್ರಿಟಿಷ್ ರಾಜಬಾರಿಕೆನ ಓಡ್ಸ್ಬಿಟ್ಟಿಸಿ ಹಿಂದೂ ಆಳ್ವಿಕೆನ ತರೋಕುಂತೇಳಿ ಉದ್ದೇಶ ಮಾತ್ರ ಇತ್‌ಂತ ತಿಳ್ಸಿದೆ.

ಹಿಂಗೆ ಈ ವಂದಿನ ಪುನಃ ಪರೀಕ್ಷೆ ಮಾಡ್ದ ಬ್ಲೇರ್ ಸಾ ಇದ್ ನಿಜಾವಾಗಿಯು ಸ್ವಾತಂತ್ರ್ಯಕ್ಕಾಗಿ ಮಾಡ್ದ ಕ್ರಾಂತಿಯಲ್ಲದೆ ಮತ್ತೆ ಯಾವ ಉದ್ದೇಶಂದ ಅಲ್ಲಾತ ತಿಳ್ಸಿದೆ. ಆಗ ಕೊಡಗ್‌ನ ಚೀಫ್ ಕಮೀಷನರ್ ಆಗಿದ್ದ ಕಬ್ಬನ್, ಇದ್ ಜನತಾ ಬಂಡಾಯ ಇದರ್‌ಲ್ಲಿ ಯಾವ ಸೊಂಸಯನೇ ಇಲ್ಲೆಂತೇಳ್ಡ್. ಕ್ರಾಂತಿವೀರ ಅಪ್ಪಯ್ಯಗೌಡ್ರು ಮೂರ್ನಾಡ್ ಹಕ್ಕಲೆನ ಬಲಮುರಿ ಗ್ರಾಮದ ಗುಡ್ಡೆಮನೆ ಸುಬ್ಬಪ್ಪಗೌಡ್ರ ಮಜ, ಅಪ್ಪಯ್ಯಗೌಡ್ರ ಮೂರ್ಜೆನ ತಮ್ಮಂದ್ರ ಪೈಕಿ ಪಾರ್ಪತ್ತೆಗಾರ ಆಗಿದ್ದ ತಮ್ಮಯ್ಯಗೌಡ್ರು ಸಾ ಅಣ್ಣನ್ಹಂಗೆ "ಅಮರ ಸುಳ್ಯ ಕಾಟಕಾಯಿ" ದಂಗೆಲಿ ಬ್ರಿಟಿಸರ ವಿರುದ್ಧ ಹೋರಾಡಿ ಶಿಕ್ಷೆ ಅನುಬೊವಿಸಿಯೊಳೊ. ಬಾಕಿ ಇಬ್ರೊರು ತಮ್ಮಂದರ್ ಆದ ಪೊನ್ನಪ್ಪ ಮತ್ತೆ ಸುಬ್ಬಪ್ಪನವರ ಸಂತತಿಯವೇ ಇಂದ್ ಗುಡ್ಡೆಮನೆವಾಗಿ ಒಳದ್. ಅಪ್ಪಯ್ಯಗೌಡ್ರ ಹೆಣ್ಣ್ ಅಕ್ಕಮ್ಮ ಮತ್ತೆ ಹೆಣ್ಣ್‌ಮಗ ಪ್ರೇಮ ಇವು ಪೊನ್ನಪ್ಪ ಮತ್ತೆ ಸುಬ್ಬಪ್ಪಗೌಡ್ರ ಒಟ್ಟಿಗೆ ಇದ್ದವೆ ಅಪ್ಪಯ್ಯಗೌಡ್ರ ಹೆಣ್ಣ್, ಗಂಡ ತೀರಿಹೋದಾ ಬೇಜಾರಲಿ ಹಾಸಿಗೆ ಹಿಡ್ದ ನಂತ್ರ ಹಂಞ ದಿನಲಿ ತೀರಿಹೋದೊಂತ ತಿಳ್ದ್ ಬಂದದೆ. ಮಗ ಪ್ರೇಮನ ಇವರ ಹತ್ರ ನೆಂಟ್ರೇ ಆಗಿದ್ದ ಚೀಯಪ್ಪನ ಮನೆಗೆ ಮೊದುವೆ ಮಾಡಿಕೊಟ್ಟೊ. ಅಪ್ಪಯ್ಯಗೌಡ್ರ ಸಂತತಿಯವು ಕಳ್ದ ಎರಡ್ನೆ ಮಹಾಯುದ್ಧಲಿ ಭಾಗವಯಿಸಿ ದೇಶಕ್ಕಾಗಿ ತಮ್ಮ ರಕ್ತನ ಸೊರ್ಸಿದ ತ್ಯಾಗ ಜೀವಿಗ ಸಾ ಹೌದು.

ಹಿಂಗೆ ಅಪ್ಪಯ್ಯಗೌಡ್ರು ಬ್ರಿಟಿಸರ್ಗೆ ಬೊಲಿಯಾಗಿ ಇಂದಿಗೆ 147 ವರ್ಸ ಕಳ್ತ್. 15-8-1947 ರಂದ್ ನಮ್ಮ ಭಾರತ ದೇಶ ಬ್ರಿಟಿಸರ್‌ಂದ ಮುಕ್ತಿ ಪಡ್ತ್. ಬೇರೆ ಬೇರೆ ಜಿಲ್ಲೆಗಳ್‌ಲಿ ಬ್ರಿಟಿಸರೊಟ್ಟಿಗೆ ಹೋರಾಡಿ ರಕ್ತ ಚೆಲ್ಲಿ ಸತ್ತ ಹುತಾತ್ಮರ ಸ್ಮಾರಕಗ ನಮಗೆ ಕಾಂಬಕೆ ಸಿಕ್ಕದೆ. ಬೀದಿಗಳಿಗೆ ಇಂತ ತ್ಯಾಗಿಗಳ ಹೆಸ್ರ್‌ನ ಹಾಕಿ ಅವುಕೆ ಗೌರವ ಮತ್ತೆ ಅವರ ಆತ್ಮಕ್ಕೆ ಶಾಂತಿ ಸಲ್ಲಿಸಿಯೋಳೊ. ಆದರೆ ನಮ್ಮ ಕೊಡಗ್ ಜಿಲ್ಲೆಲಿ ಮಾತ್ರ ಗುಡ್ಡೆಮನೆ ಅಪ್ಪಯ್ಯಗೌಡ್ರಂತ ತ್ಯಾಗಿ ಜೀವಿಗಳಿಗೆ ಗೌರವ ಸಿಕ್ಕದಿದ್ದುದು ನಮ್ಮ ದುರಾದೃಸ್ಟಂತ ಹೇಳಕ್. ಇನ್ನಾದರ್ ಕೂಡಾ ನಾವು ಗುಡ್ಡೆಮನೆ ಅಪ್ಪಯ್ಯಗೌಡ್ರ ನೆನಪುಗಾಗಿ ಅವರ ಪ್ರತಿಮೆನ ಸ್ಥಾಪನೆ ಮಾಡ್ಸುದೋ ಅಥವ ಕೊಡಗ್‌ನ ರಾಜಧಾನಿ ಆದ ಮಡಿಕೇರಿನ ಯಾವುದಾರ್ ಒಂದು ಬೀದಿಗೆ ಅವರ ಹೆಸ್ರ್ ಕೊಟ್ಟ್ ಅವರ ಹೆಸ್ರ್ ಇತಿಹಾಸದ ಪುಟಂದ ಅಳ್ದ್ ಹೋಗದಂಗೆ ಪ್ರಯತ್ನ ಮಾಡ್ದು ಸ್ವತಂತ್ರ ನಾಡ್‌ನ ಮಕ್ಕ ಆದ ನಮ್ಮೆಲ್ಲವರ ಕರ್ತವ್ಯ ಬ್ರಿಟಿಸರ ಕೊಡಗ್‌ಂದ ಓಡ್ಸಿಕೆ ಹೆಬ್ಬುಲಿನಂಗೆ ಹೋರಾಟ ನಡ್ಸಿ ವೀರ ಮರಣನ ಸ್ವೀಕರಿಸಿದ ಗುಡ್ಡೆಮನೆ ಅಪ್ಪಯ್ಯಗೌಡ್ರುಗೆ ಅವರ ಮರಣ ಕಾಲಲಿ ಸುಮಾರ್ 40-45 ವರ್ಸ ಪ್ರಾಯ ಆಗಿತ್ತ್‌ಗಡ.



---

## ಸಂಪ್ರದಾಯ

ಹದ್ದ್ ಮೀರಿ
ಹರ್ದ್ ಡ್‌ವ
ಮನಸ್ಸ್‌ನ,
ಹಂತಲಿ ಇಸಿಕಂಬಕೆ
ಹಾಕಿದ ಗೆರೆಗಾ!

—ಮಾಧವ ಪದೇಲ.

## ಬರಹಗಾರ

ಬರಹಗಾರನ ಬದ್‌ಕ್ ದುಃಖದ ಹಾದಿಲಿ
ಬದ್ಕಿದೆ ಅಂವ ಬರ್ದ್ ಬರ್ದ್ ಸವ್‌ದ್
ಬದ್ಕೀತಂವ ಜೀವನಲಿ ಹಂಗ್‌ನೇ ತೊರ್ದ್
ಬದಿಕಿದೇ ದೊಡ್ಡದಂವ ಬರ್ಪದ್‌ಕೆ ಪೆಟ್ಟ್ ತಿಂದ್

—ಆಜಡ್ಕ ಕೃಷ್ಣಪ್ಪ.

---

ಸುಭಾಷಿತ

ಕಪ್ಪೆಗ ವಟಗುಟ್ಟುತಿದ್ರೂ ದನಗ ನೀರ್ ಕುಡಿಯದೆ ಹೋದುಲೆ

## ಅಮರ ಸುಳ್ಯದ ಸ್ವಾತಂತ್ರ್ಯ ಹೋರಾಟಗಾರ

# ಕೆದಂಬಾಡಿ ರಾಮಗೌಡ್ರು

---

**ಪುರುಷೋತ್ತಮ ಬಿಳಿಮಲೆ.**

**ಗೌಡ ಕನ್ನಡಕ್ಕೆ– ಪಿ. ಜಿ. ಅಂಬೆಕಲ್, ಚೆಟ್ಟಳ್ಳಿ.**

ಕ್ರಿ. ಸ. 1857ರ್ಲಿ ನಡ್ದ ಸಿಪಾಯಿ ದಂಗೆನ ನಾವು 'ಪ್ರಥಮ ಸ್ವಾತಂತ್ರ್ಯ ಹೋರಾಟ'ಂತ ಕರ್ದ್ ಕೊಂಡಾಡ್‌ವೆ. ಆದರೆ ಅದ್‌ಕ್ಕೂ ಪೂರ್ವಲಿ ಬ್ರಿಟಿಸರ ಎದ್‌ರ್ 'ದೇಶೀ ರಾಜಂಗ' ಹೋರಾಟ ನಡ್‌ಸಿಯೊಳೊ. ಅದರ್ಲಿ ಅವು ಒಸಿಯೊಸಿಯು ಗೆದ್ದದೂ ಉಟ್ಟು. 1857ರ ಸ್ವಾತಂತ್ರ್ಯ ಹೋರಾಟದ ಪೂರ್ವಲಿ ನಡ್ದ ಇಂತ ದಂಗೆಗಳ ಪೂರಾ ಚಿತ್ರ ಇಂದ್ ನಾವ್‌ಗೆ ಸಿಕ್ಕುದ್ಲೆ. ಈ ಲೇಖನಲಿ ಕ್ರಿ. ಸ. 1834 ರ್‌ಂದ 1837ಕ್ಕೆ ಮುಟ್ಟ ಸುಳ್ಯ ಸೀಮೆನ ಜೆನ ನಮ್ಮ ಕೆದಂಬಾಡಿ ರಾಮಗೌಡ್ರ ಮುಂದಾಳ್ತನಲಿ ಬ್ರಿಟಿಸರ ಎದ್‌ರ್ ಹೋರಾಡ್ದರ ಮೇಲೆ ಮೇಲೆನ ಚಿತ್ರ ಮಾತ್ರ ಉಟ್ಟು.

1834 ಏಪ್ರಿಲ್ 11 ರಂದ್ ಫ್ರೆಸರ್‌ಂತ ಹೇಳ್‌ಂವವ ಕೊಡಗ್‌ನ ಬ್ರಿಟಿಸರ ಅಧಿಕಾರಕ್ಕೆ ಸೇರ್‌ಸಿತ್. ಕೊಡಗ್‌ನ ದೊರೆಗಳ ಕಾಲಲಿ ಅಮರ ಮಾಗಣೆ ಮತ್ತೆ ಸುಳ್ಯ ಮಾಗಣೆ (ಈಗನ ಸುಳ್ಯ ತಾಲ್ಲೂಕು) ಕೊಡಗ್‌ಗೆ ಸೇರಿತ್ತ್. ಆಡಳ್ತದ ಅನ್‌ಕೂಲಕ್ಕೆಂತ ಬ್ರಿಟಿಸರ್ ಗಟ್ಟದ ಕಾಗಡೆನ ಈ ಸೀಮೆನ ಅವರ ವ್ಯವಹಾರಕ್ಕೆ ಸೇರಿಯಾಗಿ ಮಂಗ್ಳೂರಿಗೆ ಸೇರ್‌ಸಿದೊ ಕೊಡಗ್‌ನ ಹಾಲೇರಿ ಮನೆತನಕ್ಕೆ ನಂಬಿಕೆನವ್ ಆಗಿದ್ದ ಸುಳ್ಯದ ಗೌಡ ಜನಾಂಗದವುಕ್ಕೆ ಇವರ್‌ಂದ ಬೇಜಾರಾತ್.

ಇದ್‌ಕ್ಕೆ ಸೇರಿಯಾಗಿ ಬ್ರಿಟಿಸರ ಎದ್‌ರ್ ಸುಳ್ಯ ಮಾಗಣೆ ಜೆನ ದಂಗೆ ಎದ್ರ್‌ಕೆ ಮತ್ತೊಂದು ಕಾರಣನೂ ಉಟ್ಟು. ಅದ್‌ವರೆಗೆ ಅಲ್ಲಿನ ಜೆನ ತಮ್ಮ ಕಂದಾಯನ ಧಾನ್ಯದ ರೂಪಲಿ ಕೊಡ್‌ತ್ತಿದ್ದೊ. ಎತ್ತ್‌ಗಳ ಮೇಲೆ ಹೊರ್ಸಿಕಂಡ್ ಮಡಿಕೇರಿ ದೊರೆನ ಉಗ್ರಾಣಕ್ಕೆ ದಾನ್ಯ ಸಾಗ್‌ಸದು ಅವ್‌ಕ್ಕೊಂದು ಸಮಸ್ಯೆನೇ ಆತಿತ್ತ್‌ಲೆ. ಆದರೆ ಬ್ರಿಟಿಸರ್ಗೆ ಮಾತ್ರ ದುಡ್ಡ್‌ನ ರೂಪಲಿ ಕಂದಾಯ ಸಂದಾಯ ಮಾಡೊಕಾತ್. ಈ ದುಡ್ಡ್‌ನ ಕೂಡ್ಸಿಕೆ ಬೇಸಾಯಗಾರ್ರ್ ಅವು ಬೆಳ್ಸದ ದಾನ್ಯಗಳ ಯಾಪಾರಿಗಳ್ಗೆ ಮಾರೊಕಾಗಿತ್ತ್. ಇದರ್‌ಂದ ಬೇಸಾಯಗಾರ್ರ್‌ಗೆ ನಷ್ಟ; ಯಾಪಾರಿಗಳ್ಗೆ ಕುದ್ಲಲ್ಲೇ ಲಾಭ, ಇದ್ರ್‌ಂದೊಳು ಬೇಸಾಯಗಾರ್ರ್‌ಗೆ ಬಾರಿ ಬೇಜಾರಾತ್.

ಸುಳ್ಯದ ಆಸ್‌ಪಾಸ್‌ಲಿದ್ದ ಹೆಚ್ಚಿನ ಸಂಕೆಲಿರ್‌ವ ಗೌಡುಗಳ ಬದ್ದ ವೈರಿ ಆದ ಅಟ್ಲೂರು ರಾಮಪ್ಪಯ ಬ್ರಿಟಿಸರ ಜಾಳ ದೋಸ್ತಿ. ಕಾಂತ್‌ಮಂಗಲಲಿ ಪಯಸ್ವಿನಿ ಹಳ್ಳದ ಕರೆಲಿ ಅಂವ 'ದೊರೆ'ನ ಹಾಂಗೆ ಮೆರೇತ್ತಿತ್ತ್. ಜೆನ ಅಂವನ 'ಅಟ್ಲೂರು ದೊರೆ'ಂತೇಳಿಯೇ ಕರಿಯಕಾಗಿತ್. ಮೋಸಂದ ಬೇಸಾಯಗಾರ್ರ ಬೂಮಿನ ಒಳೆಗೆ ಹಾಕಿಕೊಂಬೊದರ್ಲಿ ಇಂವ ಬಾರೀ ಸೂರ. ಇಂತವನ ದೋಸ್ತಿಗ ಆಗಿದ್ದ ಬ್ರಿಟಿಸರ ಮೇಲೆ ದ್ವೇಷ ಹುಟ್ಟುದು ಸಾಜ ಅಪ್ಪೇ.

ಇದರೊಟ್ಟಿಗೆ ಕರ್ನಲ್ ಫ್ರೇಸರ್‌ಂತೇಳ್‌ವಂವ ಹಿಂದೂಗಳ್ನ ಪುರ್ಬುಗಳ ಜಾತಿಗೆ ಸೇರ್ಸಿದೆಂತೇಳ್‌ವ ಮೊದ್ಲ ಸುದ್ದಿ ಹಬ್ಬಿತ್ತ್. ಇದಂತ್ತ ಹಿಂದುಗ ಹೆದ್ರಿದೊ. ಮೇಲೆ ಹೇಳ್ದ ಕಾರಣಗಳ್‌ಂದಾಗಿ ಸುಳ್ಯದ ಆಸ್‌ಪಾಸ್‌ನ ಜೆನ ಬ್ರಿಟಿಸರ ಎದ್‌ರ್ ಹೋರಾಡ್ದುಂತ ನಿಶ್ಚಯಮಾಡಿದೊ.

ಇದೇ ಸಂಧ್ರ್ಸಲಿ ಸುಳ್ಯದ ಆಸ್ ಪಾಸ್‌ನ ಜೆನ ಬ್ರಿಟಿಸರ ಎದ್‌ರ್ ದೊಂಬಿ ಎದ್ರುವ ತಯಾರ್‌ಲಿ ಇರ್ಕನ ಸುಬ್ರಮಣ್ಯದ ಹಕ್ಕಲೆ ಕೂಜುಗೋಡ್‌ಲಿ ಲಿಂಗರಾಜೇಂದ್ರನ ಅಣ್ಣ ಅಪ್ಪಾಜಿ ದೊರೆನ ದೊಡ್ಡ ಮಜತ ಹೇಳಿಕಂಡ ಅಪರಂಪಾರ ಪ್ರತ್ಯಕ್ಷ ಆತ್. ಕೂಜುಗೋಡ್‌ನ ಅಪ್ಪಯ್ಯಗೌಡ್ರ ಕುಟುಂಬದೊವು ಕೊಡಗ್ ದೊರೆಗೆ ಬೇಕಾದಂವ ಆಗಿದ್ದರ್‌ಂದ ಅಪರಂಪಾರ ಅಲ್ಲಿ ಒಳ್‌ಕಂಡತ್. ಅಪ್ಪಯ್ಯಗೌಡ್ರ ಮುಕಾಂತ್ರ ಸುಳ್ಯದ ಜೆನಂಗಳ ಸಂಪರ್ಕ ಮಾಡ್ತ್. ಸುಳ್ಯದ ಆಸ್ ಪಾಸ್‌ಲಿ ಗೌಡ ಕನ್ನಡ ಮಾತಾಡ್‌ವ ಗೌಡ್ರುಗಳಿಗೆ ಈ ಕೂಜುಗೋಡು 'ಕಟ್ಟೆಮನೆ' ಆದರ್‌ಂದ ಕೆಲ್‌ಸ ಸುಲ್‌ಬಾತ್. ಅಪ್ಪಯ್ಯಗೌಡ್ರು ಅವರ ತಮ್ಮ ಮಲ್ಲಯ್ಯಗೌಡ್ರು ಅಪರಂಪಾರಂಗೆ ಬೆಂಬಲ ಕೊಟ್ಟೊ. ಇದೇ ಹೊತ್ತಿಗೆ ಸುಳ್ಯದ ಹಕ್ಕಲೆ ಇದ್ದ ಕೆದಂಬಾಡಿ ರಾಮಗೌಡ್ರ (ಅವು ಊರ್‍ನ ಗೌಡ ಆಗಿದ್ದೊ) ಕಟ್ಟೆಮನೆವರೊಟ್ಟಿಗೆ ಸೇರ್‍ಕಂಡ್‌ಬುಟ್ಟೊ. ಇದೇ ನಾವ್‌ಗೆ ಕೆದಂಬಾಡಿ ರಾಮಗೌಡ್ರ ಬಗ್ಗೆ ಸುರೂಲಿ ತಿಳಿವ ಸಂಗ್ತಿ, ಅವರ ಪೂರ್ವ ವಿಚಾರಗ ಏನೂ ನಾವ್‌ಗೆ ತಿಳಿಯೊದ್ಲೆ.

ರಾಮಗೌಡ್ರು, ಅಪ್ಪಯ್ಯಗೌಡ್ರು, ಮಲ್ಲಯ್ಯನವರ ಪಿತೂರಿ ನಡಿಯುತ್ತಿದ್ದಾಂಗೆ ಅಪರಂಪಾರ ಸೆರೆಸಿಕ್ಕಿತ್. ಸೋಮವಾರ್‌ಪೇಟೆಂದ ಕೂಡುರಸ್ತೆಗಾಗಿ ಸುಬ್ರಮಣ್ಯಕ್ಕೆ ಬಾವ ದಾರಿಲಿ ಕ್ಯಾ। ಲೀಹಾರ್ಡಿನ ಸೈನಿಕರ್ ಅವರ ಸೆರೆಹಿಡ್ದ್ ಜೈಲಿಗೆ ನೂಕಿದೊ. ಅಪರಂಪಾರನ ಕತೆ ಹೀಂಗೆ ಮುಗ್ದರೂ ಸುಳ್ಯದ ಆಸ್‌ಪಾಸ್‌ಲಿ ಅಂವ ಹೊತ್ತ್‌ಸಿದ ಸ್ವಾತಂತ್ರ್ಯದ ಕಿಡಿ ಮಾತ್ರ ಹೊತ್ತದೆ ನಿತ್ತತ್‌ಲೆ. ಕೂಜುಗೋಡು ಮನೆವುಕ್ಕೂ ಅಪರಂಪಾರಂಗೂ ಬಾರೀ ಹಕ್ಕಲೆನ ಸಮ್ಮಂದ ಉಟ್ಟೂತ ತಿಳ್ದ ಲೀಹಾರ್ಡಿ ಅಪರಂಪಾರನ ಬಂಧನ ಆದ ಮೇಲೆ ಈ ಕಟ್ಟೆಮನೆ ಮೇಲೆ ಕಣ್ಣ್ ಇಸಿತ್. "ಕೊಪ್ಪಡ್ಕ" ಪಿತೂರಿನ ಜಾಗೆ ಆದರ್‌ಂದ ಅಲ್ಲಿಗೂ ಪಾರ ಇಸಿತ್. ಆಯಕಟ್‌ನ ಜಾಗೆಲಿದ್ದ ಕೂಜುಗೋಡು ಮತ್ತೆ ಕೊಪ್ಪಡ್ಕಲಿ ಪಿತೂರಿ ಕೆಲ್‌ಸ ನಡಿಯದಂಗಾತ್.

ಈ ಸಂದ್ರ್‌ಪಲಿ ಸುಳ್ಯ ಸೀಮೆನ ರಾಮಗೌಡ್ರು ಪಿತೂರಿ ಕೆಲ್ಸನ ತಾನೆ ಕೈಗೆ ತಕಂಡೊ. ರಾಮಗೌಡ್ರು ಈಗನ ಉಬರಡ್ಕ ಮಿತ್ತೂರ್‌ನ ಕೆದಂಬಾಡಿಲಿ ಇದ್ದ ದೊಡ್ಡ ಮೊಯಿಂಸ ತುಂಬಾ ಬುದ್ಧಿವಂತ. ಕೊಡಗ್ ದೊರೆಗಳ ಹೆಸ್ರ್ ಹೇಳದೆ ಬೇಸಾಯಗಾರ್‍ರ ಬ್ರಿಟಿಸರ ಎದ್‌ರ್ ಎತ್ತಿ ಕಟ್ಟ್ವದು ಕಷ್ಟಂತೇಳ್ದರ ಅವು ಲಾಯಿಕ್ ತಿಳ್ದಿದ್ದೊ. ಅದ್‌ಕ್ಕೆ ಅವು ಒಂದು ಒಳ್ಳೆ ಪಿಲೇನ್ ಮಾಡ್ದೊ.

ಸೆರೆ ಸಿಕ್ಕಿದ ಅಪರಂಪಾರನ ಬಾರೀ ದೋಸ್ತಿ ಆದ ಪುಟ್ಟಬಸಪ್ಪಂತೇಳ್‌ವವನ ಕರ್‍ಕಂಡ್ ಬಂದ್ ಅಂವ ಅಪ್ಪಾಜಿ ದೊರೆನ ಎರಡ್ನೇ ಮಜ ನಂಜುಂಡಾಂತ ಬೇಸಾಯಗಾರ್‍ರ ಹೇಳಿಕೆ ಕೊಟ್ಟೊ. ಅಪರಂಪಾರ ಬ್ರಿಟಿಸರ ಸೆರೆಸಿಕ್ಕಿದರ್‌ಂದ ಆಮೇಲೆ ನ್ಯಾಯಲಿ ಈ ಕಲ್ಯಾಣಪ್ಪಂಗೇ ಪಟ್ಟ ಸಿಕ್ಕೊಕೂಂತ ಅಂವ ಜೆನರ ನಂಬಿಸಿತ್. ಶನಿವಾರಸಂತೆ ಹಕ್ಕಲೆನ ಹೆಮ್ಮನಿ ಗ್ರಾಮಲಿ ವ್ಯವಸಾಯ ಮಾಡ್‌ತ್ತಿದ್ದ ಪುಟ್ಟಬಸಪ್ಪ, ಕಲ್ಯಾಣಸ್ವಾಮಿನ ಹಾಂಗೆ ನಟನೆ ಮಾಡಿಕೆ ಸುರುಲಿ ಒಪ್ಪದ್ರೂ ಕೆದಂಬಾಡಿ ರಾಮಗೌಡ್ರ ಒತ್ತಾಯಕ್ಕೆ ಒಪ್ಪಿತ್. ಈ ವಿಸಯನ ಅಂವನೇ 1837ನೇ ಮೇ ತಿಂಗಳ 15ರ ವಿಚಾರಣೆಲಿ ಲೀಹಾರ್ಡಿಗೆ ತಿಳಿಸಿದಕ್ಕೆ ದಾಕ್ಲೆಗ ಉಟ್ಟು) ಕೆದಂಬಾಡಿ ರಾಮಗೌಡ್ರ ಕಿಡಿಗ (ಉಪಾಯ) ಪಲ್ಸಿತ್. ಈ ಕಪಟ ದೊರೆನ ನಿಜಕ್ಕೂ ಇಂವನೇ ಮುಂದೆ ನಮ್ಮ ದೊರೆ ಆಂವಾಂತ ಜೆನ ನಂಬಿದೊ.

ಬರೀ ಸುಳ್ಯದ ಜೆನ ದಂಗೆಯೆದ್ದರೆ ಬ್ರಿಟಿಸರ ಓಡ್ಸ್ವದು ಸಾದ್ಯ ಇಲ್ಲೆ. ಅದ್ಕೆ ಕೊಡಗ್‌ನ ಜೆನಂಗಳ ಸಹಾಯವೂ ಬೇಕೂಂತೇಳಿ ಕೆದಂಬಾಡಿ ರಾಮಗೌಡ್ರು ಈ ದೊರೆನ ಬಗ್ಗೆ ಕೊಡಗ್‌ನ ಬಾಗಮಂಡ್ಲಕ್ಕೆ ಸುದ್ದಿ ಕಳ್ಸಿದೊ. ಸುಳ್ಯದ ಆಸ್ ಪಾಸ್‌ಂದ 92 ಕುಟುಂಬಗ ಬಾಗಮಂಡ್ಲಕ್ಕೆ ಒಕ್ಕಲ್ ಹೋಗಿದ್ದೊ. ಆ 92 ಮನೆತನದವೂ ಸುಳ್ಯಲಿದ್ದ ಅವರ ಮನೆತನದ ಹೆಸ್‌ರ್ನೇ ಇಸಿಕಂಡಿದ್ದೊ. ಹಾಂಗಾಗಿ ತಮ್ಮ 'ತೌರು ಮನೆನ ದಂಗೆ'ನ ಬಗ್ಗೆ ಬಾಗಮಂಡ್ಲದ ಜೆನ ಕೂತೂಹಲಿಗ ಆದೊ ಅಲ್ಲಿನ ಮುಕ್ಯಸ್ತ ಗುಡ್ಡೆಮನೆ ಅಪ್ಪಯ್ಯಗೌಡ್ರು ಬ್ರಿಟಿಸರ ಎದ್‌ರ್ ಜೆನಂಗಳ ಒಟ್ಟು ಸೇರ್‍ಸಿದೊ.

ಕೊಡಗ್‌ಲಿ ಗುಡ್ಡೆಮನೆ ಅಪ್ಪಯ್ಯ, ಸುಳ್ಯಲಿ ಕೆದಂಬಾಡಿ ರಾಮಗೌಡ್ರು ಜೆನಂಗಳ ಒಟ್ಟು ಸೇರ್‍ಸ್ವದು ಲೀಹಾರ್ಡಿಗೆ ಗೊತ್ತಾಗದೆ ಇತ್ತ್‌ಲೆ. ಕೊಡಗ್‌ಲಿ ಆಗ ದಿವಾನ ಆಗಿದ್ದ ಚೆಪ್ಪುಡೀರ ಪೊನ್ನಪ್ಪ ಬ್ರಿಟಿಸರ್ಗೆ ಬೇಕಾದಂವ ಆಗಿತ್ತ್. ಅಪ್ಪಾರಂಡ ಬೋಪು, ಪೊನ್ನಪ್ಪನ ಒಟ್ಟಿಗೆ ಸೇರಿ ದಂಗೆನ ಹುಟ್ಟ್ ಅಡ್‌ಗಿಸಿಕೆ ಸಿದ್ದಾಗಿತ್ತ್. 1835ರ ಜೂನ್ 23 ರಂದ್ ಕೆ। ಫ್ರೇಸರ್ ಕೊಡಗ್‌ನ ರಾಜವಂಸದ ರಾಜ ಕುಮಾರಂಗ ಯಾರಾರ್ ಇದ್ದರೆ ಮುಂದೆ ಬಂದ್

ಜೀವನಾಂಸನ ತಕಣೊಕುಂತ ಕರೆ ಕೊಡ್‌ಕನ ಯಾಂವನೂ ಬಾರದ್ದರ ನೋಡ್ದ ಈ ಇಬ್ಬೊರ್ ದಿವಾನಂಗ ಕಲ್ಯಾಣಪ್ಪ ವಂಚಕಂತ ಲೀ ಹಾರ್ಡಿಗೆ ತಿಳ್ಸಿಕೊಟ್ಟೊ. ಜಾತಿಲಿ ಕೊಡ್ಗಂಗ ಆದ ಪೊನ್ನಪ್ಪ ಮತ್ತೆ ಬೋಪು ಗೌಡಂಗಳ ಎದ್‌ರ್ ಕೆಲ್‌ಸ ಮಾಡ್ವು ಲೀ ಹಾರ್ಡಿಗೆ ಬೇಕಾಗಿತ್ತ್. ಅದ್‌ಕ್ಕಾಗಿ ಅಂವ ಈ ಕೊಡ್ಗರ, ದಂಗೆಲಿ ಗೌಡಂಗಳೇ ಮಾತ್ರ ಒಳದ್‌ಂತ್ತೇಳಿ ಅವರ ಎದ್‌ರ್ ಎತ್ತಿ ಕಟ್ಟಿತ್. ಇವಿಬ್ಬರೊಟ್ಟಿಗೆ ಹೆಚ್ಚಿನ ಕೊಡ್ಗರ್ ಗೌಡಂಗಳ ದಂಗೆನ ಮುರಿಯಕೆ ಹೊರ್‌ಟೊ. ಲೀ ಹಾರ್ಡಿಗೆ ಇದೇ ಬೇಕಾಗಿತ್ತ್.

ಕೆದಂಬಾಡಿ ರಾಮುಗೌಡ್ರು ಮಾತ್ರ ಸುಳ್ಯದ ಮಟ್ಟಿಗೆ ದಂಗೆಲಿ ಜಾತಿ ಸೇರದಾಂಗೆ ಜಾಗ್ರತೆಲಿದ್ದೊ. ಒಳಗೆಂದೊಳಗೆ ಅದ್ ಗೌಡಂಗಳ ಸಂಘಟನೆ ಆಗಿದ್ರೂ ಹೊರೆಗೆ ಹಾಂಗಿತ್ಲೆ. ಪೆರ್ಜದ ಬೀರಣ್ಣರೈಯೂ ಈ ಸಂಘಟನೆಲಿ ಬೇಕಷ್ಟ್ ಕೆಲ್‌ಸ ಮಾಡಿತ್ತ್. ಕಳ್ಗಿ ಅಣ್ಣಿಗೌಡ್ರು, ಅಡ್ಕಾರ್ ಸುಬ್ರಾಯಗೌಡ್ರು, ಉಳುವಾರ್ ರಾಮಯ್ಯಗೌಡ್ರು ಕುಡೆಕಲ್ಲ್ ಗೌಡಜ್ಜ, ಕುಂಚಡ್ಕ ಕೆಂಚಗೌಡ್ರು, ಪರಿವಾರ ದೇವಪ್ಪಗೌಡ್ರು, ಸುಳ್ಯಕೋಡಿ ಕೃಷ್ಣಪ್ಪ, ಜೊಕ್ಕಾಡಿ ಮಾಲಿಂಗ, ಮುಳ್ಯ ಈಶ್ವರ ಸೋಮಯಾಜಿ ಇವೆಲ್ಲವು ಸುಳ್ಯದ ದಂಗೆಲಿ ಇದ್ದದರ ದಾಕ್ಲೆಗ ತಿಳ್‌ಸುವೆ.

ಹೆಸ್‌ರ್‌ಗೆ ಕಲ್ಯಾಣಸ್ವಾಮಿ ದೊರೆ ಆಗಿತ್ತ್. ರಾಮುಗೌಡ್ರು ಅವರ ಮನೆ ಹಕ್ಕಲೆ ಇದ್ದ ಪೂಮಲೆ ಗುಡ್ಡೆಲಿ ಅವಂಗೆ ಒಂದು ಆಶ್ರಯ ಕಟ್ಟಿಕೊಟ್ಟದ್ದೊ. (ಅದರ ಈಗೊಳು ಸಾ ನೋಡಕ್) ಈ ಎಲ್ಲಾ ವಿಸಯಗಳ ಅಟ್ಲೂರ್‌ನ 'ದೊರೆ' ರಾಮಪ್ಪಯ್ಯ ಬ್ರಿಟಿಸರ್ಗೆ ವರದಿ ಒಪ್ಪಿಸ್‌ತ್ತಿತ್ತ್. ಅಟ್ಲೂರ್‌ನ ಈ ದೊರೆನ ಅಣ್ಣ ಲಕ್ಷ್ಮೀನಾರಾಯಣ ದಿವಾನ ಆಗಿದ್ದದರ್‌ಂದ ಈ ಕೆಲ್‌ಸ ಸುಲ್‌ಬ ಆಗಿತ್ತ್. ಇದ್ ರಾಮುಗೌಡ್ರುಗೆ ತಲೆಬೇನೆ ತಾವ ವಿಚಾರ ಆದ್ರ್‌ಂದ ಅವು ರಾಮಪ್ಪಯ್ಯನ್ನೇ ಮುಗ್ಸಿಬುಡಿಕೆ ಉಪಾಯ ಮಾಡ್ದೊ. ಹಾಂಗೆ ರಾಮುಗೌಡ್ರ ಕಡೆವು ಮಾರ್ಚ್ 28, 1837ಲ್ಲಿ ಕುದ್ರೆ ಮೇಲೆ ಬಾತಿದ್ದ ರಾಮಪ್ಪಯ್ಯನ ಕೊಲೆ ಮಾಡಿಬುಟ್ಟೊ.

ರಾಮಪ್ಪಯ್ಯನ ಕೊಲೆ ಸಿಜಾಗಿ ದಂಗೆ ಸುರು ಆವಾಂಗೆ ಮಾಡ್ತ್. ಸುಳ್ಯದ ಜೆನ ಬ್ರಿಟಿಶಳ ಅರ್ಧ ಗೆದ್ದಷ್ಟ್ ಸಂತೋಸಪಟ್ಟೊ. ಜೆಂಬು, ಪೆರ್ಜ, ಜೊಕ್ಕಾಡಿ, ಅಡ್ಕಾರ್, ಮಂಡೆಕೋಲು, ಕೂಜುಗೋಡು, ಕೊಪ್ಪಡ್ಕ, ಪಂಜ ಇಂತಾ ಕಡೆಗಳ್‌ಂದ ಜೆನ ಹಿಂಡ್ ಹಿಂಡಾಗಿ ಬಂದ್ ರಾಮುಗೌಡ್ರೊಟ್ಟಿಗೆ ಸೇರಿಕಂಡೊ. ಒಂದೊಂದ್ ಮನೆಂದ ಒಬ್ಬಾರ್ ದಂಡಿಗೆ ಬಂದೇ ತಿರೋಕುಂತ ರಾಮುಗೌಡ್ರ ಅಪ್ಪಣೆನೂ ಆಗಿತ್ತ್. ಬ್ರಿಟಿಸರ ವರದಿ ಪ್ರಕಾರ ಮಾರ್ಚ್ 28ರ ಆ ದಿನ ಕೆದಂಬಾಡಿ ರಾಮುಗೌಡ್ರ ಮನೆಲಿ ಕಮ್ಮಿಂತೇಳ್ರೆ ಮೂರ್‌ವರೆ ಸಾವ್ರ ಜೆನ ಸೇರಿದ್ದೊ. ಮಡಿಕೇರಿ ಹಕ್ಕಲೆನ ಗಾಳಿಬೀಡ್‌ಂದ ಚೆಟ್ಟಿ ಕುಡ್ಯ ಮತ್ತೆ ಕುರ್ತು ಕುಡ್ಯಂತೇಳ್ವ ಇಬ್ಬೊರು ಮಲೆ ಕುಡ್ಯ ವೀರಂಗ ಬಂದ್ ರಾಮುಗೌಡ್ರ ಅಂಗರಕ್ಷಕಂಗಾದೊ. ಇವರ ದಂಡ್ ಸುಳ್ಯಂದ ಖಜಾನೆನ ವಸಪಡ್ಸಿಕಂಡ್ ಕನಕಮಜಲ್-ಐವರ್ನಾಡ್ ಮಾರ್ಗಕ್ಕಾಗಿ ಬೆಳ್ಳಾರೆಗೆ ಮುಟ್ಟಿತ್. (ಕೆಲವು ಮೂಲದ ಪ್ರಕಾರ ಪೈಚಾರ್ ಸೋಣಂಗೇರಿ ಬೇಂಗಮಲೆ ಮಾರ್ಗಲಿ ಬೆಳ್ಳಾರೆಗೆ ಹೋದೊಂತೇಳಿ) ಅಂದೇ ಹಿಂಬೊತು ಬೆಳ್ಳಾರೆ ಕೋಟೆನ ದಂಗೆವು ವಸಪಡ್ಸಿಕಂಡೊ. ಅಲ್ಲಿದ್ದ ಬ್ರಿಟಿಸರ ಬಂಧ್ಸಿ ರಾಮುಗೌಡ್ರು ಬೆಳ್ಳಾರೆಲಿ ಕಲ್ಯಾಣಪ್ಪನ ದೊರೇಂತ್ತೇಳಿ ಬಹಿರಂಗಲಿ ಘೋಸಿಸಿದೊ. (ಮಾರ್ಚ್ 28-1837) ದೊರೆ ಆದ ಕೂಡ್ಲೇ ಈ ಕಪಟ ದೊರೆ ಕುಕ್ಕುನೂರು ಚೆನ್ನಯ್ಯನ ಕೈ ಬರಲಿ 'ನಿರೂಪನ' ಬೇರೆ ಬೇರೆ ಕಡೆಗೆ ಕಳ್ಸಿತ್.

ನಾ ದೊರೆ ಆಗಿ ಒಳ್‌ದರೆ ಇನ್ನ್ ಮೂರು ವರ್ಸ ಕಂದಾಯ ವಸೂಲು ಮಾಡ್ದುಲ್ಲೇಂತ ಸುಳ್ಯ ಸೀಮೆನ ಬೇಸಾಯಗಾರ್‌ರ್‌ಗೆ ಬಾಸೆ ಕೊಟತ್. ಇದ್ ಬೇಸಾಯಗಾರ್‌ರ್‌ನ ಮತ್ತಷ್ಟ್ ಆಕರ್ಸಿಸಿತ್.

ಕಲ್ಯಾಣಪ್ಪನ ದೊರೇಂತ ಸಾರ್‌ದ ಮೇಲೆ ರಾಮುಗೌಡ್ರು ಎಲ್ಲಾ ಕೆಲ್‌ಸನ ದೊರೇನ ಹೆಸ್‌ರ್‌ಲೇ ಮಾಡಿರೊಕು. ಯಾಕೇಂತೇಳ್ರೆ ಆ ಮೇಲಿನ ಘಟನೆಗಳ್ಲಿ ರಾಮುಗೌಡ್ರ ಹೆಸ್ರ್ ದೊಡ್ಡದಾಗಿ ಕಂಡ್ ಬಾವ್ದುದ್‌ಲ್ಲೆ. ದಂಗೆಕೋರರ್ ಪುತ್ತೂರು-ಪಾಣೆ ಮಂಗ್ಳೂರುನ ವಸಪಡಿಸಿಕಣೆಕನ ರಾಮುಗೌಡ್ರ ಕೆಲ್‌ಸ ಏನಿತ್ತ್ಂತ ಗೊತ್ತ್ಲೆ. 1837ರ ಏಪ್ರಿಲ್ ಎರಡ್ನೇ ವಾರಲಿ ಈ ವೀರರ್ ಮಂಗ್ಳೂರ್‌ನ ವಸಪಡಿಸಿಕಂಡ್ ಮಂಗ್ಳೂರ್‌ಲಿದ್ದ ಬ್ರಿಟಿಸರ 2ನೇ ನಂಬ್ರದ ರೆಜಿಮೆಂಟ್‌ನ ಸೋಲ್ಸಿ ಬುಟ್ಟಿದ್ದೊ. 13 ದಿನಗಳ ಮೇಲೆ ಮಂಗ್ಳೂರು ಮತ್ತೆ ಬ್ರಿಟಿಸರ ವಸ ಆಕನ ಕಪಟ ಕಲ್ಯಾಣಸ್ವಾಮಿ, ಕೆದಂಬಾಡಿ ರಾಮುಗೌಡ್ರ ಮುಂತಾದವ್ ತಪ್ಪಿಸಿಕಂಡ್ ಓಡಿ ಹೋಗಿದ್ದೊ. ಕುಡ್ಯ ವೀರಬ್ಬಾರ್, ಮಲ್ಲಯ್ಯ

ಲಕ್ಷ್ಮಪ್ಪ ಸುಬ್ರಾಯ ಮುಂತಾದವ್ ಸೆರೆಸಿಕ್ಕಿದೊ. ಕಲ್ಯಾಣ ಸ್ವಾಮಿನ ಹಿಡ್ದ್‌ಕೊಟ್ಟೊವ್‌ಕೆ ಹತ್ತ್ ಸಾವ್ರ ರಾಮು ಗೌಡ್ರ ತಲೆಗೆ ಐದ್ ಸಾವ್ರ ರೂಪಾಯಿನ ಕೊಟ್ಟವೇಂತ ಸಾರ್‌ದೊ. 1837ರ್ಲಿ ಐದ್ ಸಾವ್ರ ರೂಪಾಯಿ ಕೊಡಿಕೆ ಬ್ರಿಟಿಸರ್ ತಯಾರಿದ್ದೊಂತೇಳ್ರೆ ರಾಮುಗೌಡ್ರ ಮಹತ್ವ ಏನ್‌ಂತೇಳ್ದು ಅರ್ಥಾದು.

ರಾಮುಗೌಡ್ರು ಯಾರ್‌ಂದ ಹೇಂಗೆ ಸಿರೆಸಿಕ್ಕಿದೊಂತೇಳ್ದು ಗೊತ್ತಿಲ್ಲೆ. 1837ರ ಮೇ 2ನೇ ವಾರಲಿ ಅವು ಬ್ರಿಟಿಸರ ಕೈಸೆರೆಯಾಗಿದ್ದೊಂತೇಳ್ದು ವರದಿಗಳಿಳಿಸ್ಸಿವೆ. ಅಂದ್ರೆ ಮಂಗ್ಳೂರು ಅವರ ಕೈಬುಟ್ಟ್ ಹೋದ ಮೇಲೆ ಕಡ್ಮೆಂತೇಳ್ರೆ ಒಂದು ತಿಂಗಳಾರೂ ತಲೆ ತಪ್ಪಿಸ್ಕಂಡ್ ಇದ್ದಿರೊಕು. ಮೇ 15ರಂದ್ ಕ್ಯಾ। ಲೀ ಹಾರ್ಡಿ ಅವರ ಹೇಳಿಕೆನ ದಾಕ್ಲೆ ಮಾಡಿಕಂಡ್‌ಟು

ಎಲ್ಲ ಸ್ವಾತಂತ್ರ್ಯ ವೀರರ್‌ಗೆ ಆದ ಗತಿನೇ ರಾಮುಗೌಡ್ರಿಗೆ ಆಗುಟ್ಟು. ಅವರ ಮಂಗ್ಳೂರ್‌ನ ಬಿಕರ್ನಕಟ್ಟೆ ಹಕ್ಕಲೆ ಊರ್‍ನ ಜೆನಗಳ ಎದ್ರ್‌ಲೇ ಗಲ್ಲಿಗೇರ್ಸಿದೊ. ಕೆಲವ್‌ಕೆ ಜೀವಾದಿ ಸಿಕ್ಸೆ ಆತ್. ಪುಟ್ಟಬಸಪ್ಪನ ಮಂಗ್ಳೂರ್‌ಲಿ ಗಲ್ಲಿಗೇರ್ಸಿರೆ, ಗುಡ್ಡೆಮನೆ ಅಪ್ಪಯ್ಯನವರ ಅಕ್ಟೋಬರ್ 31ರಂದ್ ಮಡಿಕೇರಿಲಿ ಗಲ್ಲಿಗೇರ್ಸಿದೊ ಈ ವೀರರ ಸಾವು ನೊಟ್ಟಿಗೆ ಅಮರ ಸುಳ್ಯದ ಸ್ವಾತಂತ್ರ್ಯ ಹೋರಾಟವು ಮುಗ್ತ್.

ಈ ಮಣ್ಣಿನ ಮೇಲಿನ ಅಭಿಮಾನಂದ ರಾಮುಗೌಡ್ರು ಪ್ರಾಣಾರ್ಪಣೆ ಮಾಡಿಕಂಡೊ. ಜೋಡ್ಪಾಲದ ಹಕ್ಕಲೆ ಇರ್‍ವ ಸೇತುವೆನ ಪಕ್ಕಲಿ ಅವು ಇದ್ದ ಮನೇನ ಅವ್‌ಸೇಸ ಮಾತ್ರ ಇಂದ್ ಉಟ್ಟು. ಕೆದಂಬಾಡಿನ ಮನೆ ಪೂರ ನಾಸ ಆಗುಟ್ಟು. ರಾಮುಗೌಡ್ರ ಮುಂದಾಳ್ತನಲಿ ನಡ್ದ ಈ ಹೋರಾಟ ನಿಜಕ್ಕೂ ಸ್ವಾತಂತ್ರ್ಯ ಹೋರಾಟಾಂತೇಳ್ದರ ಆ ಕಾಲಲಿ ಈ ದಂಗೆನ ಬಗ್ಗೆ ಪೂರ ಅನ್ವೇಸಣೆ ಮಾಡ್ದ ಕಾಟನ್ ಸ್ಪಷ್ಟಪಡ್ಸಿಟ್ಟು.

'ಗೆರಿಲ್ಲಾ' ಹೋರಾಟದ ರೀತಿಲಿ ರಾಮುಗೌಡ್ರು ತನ್ನ ಹೋರಾಟನ ನಡ್ಸಿದ್ದೊ. ಬೆದ್‌ರ್‍ನ ಗುತ್ತಿಗಳ ನೆಲಲಿ ಹುಗ್ದಿಸಿ ದರ್‌ಗ್‌ಲಿ ಅದರ ಮುಚ್ಚಿಸುದು, ಕುದ್ರೆ ಮೇಲೆ ಕುದ್ದ್‌ಕಂಡ್ ಬಾವ ಬ್ರಿಟಿಸರ ಸೈನಿಕನ ಕುದ್ರೆನ ಕಾಲ್‌ಗೆ ಈ ಬೆದ್ರ್ ಗುತ್ತಿಲಿ ಸಿಕ್ಕ ಹಾಕ್ಯಣ್‌ಕನ ಸತ್ರುನ ಕೊಲ್ಲುದು. ತೊಡಿಕಾನ ಮಾರ್ಗಲಿ ಬಾವ ಬ್ರಿಟಿಸರ ಅರ್ಥದಾರಿಲಿ ತುಂಡ್ ಮಾಡ್ದು ಸುಲ್ಬದ ಕೆಲ್‌ಸ ಆಗಿತ್ತ್ ಇವ್‌ಕ್ಕೆ ಕಾಡ್ಲೇ ನಾಸ ಅಲ್ಲಿಂದಲೇ ಮುತ್ತಿಗೆ ಹಾಕ್ದು.

ಹೀಂಗೆ ಮೂರ್ ವರ್ಸಗಳ ದೊಡ್ಡ ತಯಾರಿ ಮಾಡ್ದ ಮೇಲೆ ಮೂರ್ ತಿಂಗಳ ಹೋರಾಟ ನಡ್ಸಿ ಈ ವೀರಂಗ ಪ್ರಾಣ ಕೊಟ್ಟ್ ಸ್ವರ್ಗ ಸೇರ್‍ದೊ.



---

## ರಾಟೆ ಮತ್ತೆ ಸೂಟೆ

ಅಂಣ ತಮ್ಮಂದರೊಳಗೆ ನಡ್ದುಟು ಕಾಳಗ  
ಯಾಕೆಂತ ಕೇಳ್ರೆಯಾ ಹೇಳ್ನೆ ನಾ  
ಅಂಣನ ಹೆಣ್ಣ್ ದೊಡ್ಡ ಸೂಟೆ  
ಹಾಂಗೆತ ಹೇಳ್ತ್ ತಮ್ಮನ ಹೆಣ್ಣ್ ರಾಟೆ

—ಎನ್. ಕೆ. ದಯಾನಂದ

## ಲಂಚ

ಬೊಗ್ಳಿಕಂಡ್ ಕಚ್ಚಿಕೆ ಬಂದ  
ನಾಯಿಗೆ ಅದರ ಸಿಟ್ಟ್‌ನ ತಣ್ಸಿ  
ಹೇಳ್ದಂಗೆ ಕುಣ್ಸಿಕೆ  
ಉಪಯೋಗಿಸ್‌ವ ರೊಟ್ಟಿ ಚೂರ್

— ಮು. ಸುಬ್ರಾಯಗೌಡ

---

ದುಡ್ಡು ಮನೆಲೇ ನಿತ್ತ್‌ದೆ, ನೆಂಟ್‌ರಿಸ್ಟರ್ ಸುಡುಕಳೆವರೇಗೆ ಬಂದವೆ. ಆದರೆ ಪಾಪ ಮತ್ತೆ ಪುಣ್ಯ ಮಾತ್ರ ಸತ್ತವನ ಹಿಂದೇ ಬಂದದೆ.

# ನಮ್ಮ ಬಾಸೆ

—ಪ್ರೊ. ಕೆ. ಕುಶಾಲಪ್ಪಗೌಡ,
ಮದ್ರಾಸು ವಿಶ್ವವಿದ್ಯಾನಿಲಯ, ಮದ್ರಾಸು.

ಮೊಯಿಂಸಂಗೆ ಮಾತಾಡುವ ಸಕ್ತಿ ಕೊಟ್ಟೊಳದ್ ದೇವ್ರು. ಸಕ್ತಿನ ಮಾತ್ರ ಕೊಟ್ಟುದ್ ಹೊರ್ತು ಮಾತ್‌ನ ಕೊಟ್ಟುದಲ್ಲ. ಅದ್ ಮೊಯಿಂಸನೇ ಮಾಡಿಕೊಂಡೊದ್. ದೇವ್ರೇ ಬಾಸೆನೂ ಕೊಟ್ಟುದಾಗಿದ್ದರೆ ಈ ಬೂಮಿಲಿರುವ ಎಲ್ಲ ಮೊಯಿಂಸರೂ ಒಂದೇ ತರ ಮಾತಾಡಕಯ್ತ್. ಪ್ರಾಣಿಗೊಳಿಗೂ ಮಾತ್ ಬರಕಯ್ತ್, ಹಾಂಗಿಲ್ಲೆ. ಹುಟ್ಟಿದ ಕೂಸು ಸುತ್ತಮುತ್ತ ಇರುವ ತನ್ನ ಅಯ್ಯಪ್ಪ, ಅಣ್ಣ ತಮ್ಮಂದಿರ್, ಅಕ್ಕ ತಂಗೆಕಳ್‌ಂದ ಎಷ್ಟೊ ಪ್ರಯತ್ತನ ಮಾಡಿ, ಮಾಡಿ, ಒಂದೊಂದೇ ಮಾತ್‌ನ ಕೊಲ್ತ್ ಕೊಲ್ತ್ ಒಟ್ಟು ತನ್ನ ಜೆನ ಮಾತಾಡುವ ಬಾಸೆನ ತನಿಗೆ ಬೇಕಾದ ಹಾಂಗೆ ಉಪಯೋಗ ಮಾಡಿಕಂಬ ಸಾಮರ್ತ್ಯ ಪಡ್ದದೆ. ಅನಾದಿ ಕಾಲೊಲಿ ಹುಟ್ಟಿದ ಮೊಯಿಂಸನೂ ಸುರು ಸುರುಗೆ ಕೊಯಿ, ಬಾಯಿ ಸನ್ನೆ ಮಾಡಿ, ಬೇಕಾದ ಕೆಲ್‌ಸ ಮಾಡಿಕೊಂಡೊತ್. ಆದರೆ ಅದ್‌ಕೆ ಮಿತಿ ಉಟ್ಟು. ಅಂವ ಯಾರಿಗೆ ಸನ್ನೆ ಮಾಡಿ ತನ್ನ ಅಬಿಪ್ರಾಯ ತಿಳುಸೊಕೋ, ಅಂವ ಇಂವನ ಕೊಣ್ಣ್‌ದ್‌ರಿಗೇ ಇರೊಕು. ಇಲ್ಲದಿದ್ದರೆ ಕೆಲ್‌ಸ ಆಕಿಲ್ಲೆ. ಬಾಯಿಂದ ಬಾವ ಸದ್ದ್‌ನ ಮೂಲಕ ಮಾತ್‌ನ ಸನ್ನೆ ಮಾಡಿರೆ, ಯಾರವನ ಉದ್ದೇಸಿಸಿ ತನ್ನ ಅಬಿಪ್ರಾಯನ ಹೇಳೊಕೋ ಅಂವ ಎದ್‌ರಿಗೇ ಇರೋಕುಂತಿಲ್ಲೆ. ಮೇಲೆ ಹೇಳ್ದ ಸನ್ನೆಂದ ಇದ್ ಒಂದು ಹಜ್ಜೆ ಮುಂದೆ ಹೋದಾಂಗಾತ್. ಆದರೆ ಇದರ್ಲೂ ಒಂದು ಮಿತಿ ಉಟ್ಟು. ಮಾತ್ ಹೇಳುವ ಮತ್ತೆ ಅದರ ಕೇಳುವ ಇಬ್ರೂ ಸದ್ದ್ ಕೇಳುವಷ್ಟ್ ದೂರೊಲಿ ಇದ್ದೇ ತೀರೊಕು. ಅಲ್ಲದಿದ್ದರೆ ಮಾತ್ ಪ್ರಯಜನಕೆ ಬಾರದ್. ಈ ತೊಂದರೆನೂ ಮೀರಿಕೆ ಮೊಯಿಂಸ ಪ್ರಯತ್ತನ ಮಾಡಿಕೊಂಡೇ ಇತ್ತ್. ಅದಿಕೆ ಬಾರಿ ಹಿಂದೆನೇ ಬರವಣಿಗೆನ ಕಂಡ್ ಹಿಡ್ತ್. ಇವರ್ಲೂ ಪ್ರಯತ್ತನ ಮಾಡ್‌ದ ಕಾರ್ಣ ಈಗ ಮಾತ್‌ಗಳ ಬರಾದ ರೂಪುಲಿ ಕಾಣ್ಸಕೆ ಸುರುಮಾಡ್ತ್. ಹಿಂದೆ ಹೇಳ್ದ ಎರ್ಡ್ ತರಮೊವುಗಳ್‌ಂದ ಇದ್ ಇನ್ನೊಂದು ಹಜ್ಜೆ ಮುಂದೆ ಇಸಿತ್. ಇದ್ನೆ ಮುಂದೆ ಇಂತಿಂತ ಬರ್ದ ಚಿನ್ನೆಗೆ ಇಂತಿಂತೊದೇ ದೊನಿಂತ ಆ ಮಾತಾಡೊವು ಎಲ್ಲ ಒಂದು ಒಪ್ಪಂದ ಮಾಡಿಕೊಂಡಾಂಗೆ ಆತ್. ಹಾಂಗಾಗಿ ಎಲ್ಲ್ರೂ ಒಂದು ಬಗ್ಗ ಇಸಯನ ಓದಿ ತಿಳ್ಕಂಬಕೆ ಅನುಕೂಲ ಆತ್. ಈಗ ಕನ್ನಡ ಅಕ್ಷರಗಳ್ನೇ ನೈಸ್ಸಿಕೊಂಡರೆ, ಅ, ಇ, ಕ, ರ-ಹೀಂಗೆಲ್ಲ ಬರ್ದವಲೆ, ಆ ಚಿನ್ನೆಗೊಳಿಗೆ ಯಾವ ದೊನೀಂತ ಕನ್ನಡ ಕೊಲ್ತೊವುಕೆಲ್ಲ ಗೊತ್ತೇ ಉಟ್ಟು. ಇದ್ ಒಂದು ರೀತಿಂದ ಕನ್ನಡದೊವ್‌ಕೇ ಒಳಗೊಳಗೇ ಆದ ಒಂದು ಒಪ್ಪಂದದ ಹಾಂಗೆ. ಇದ್ ಗೊತ್ತಾದ ಎಲ್ಲ ಜೆನಂಗಳೂ, ಇದರ್ಲಿ ಏನ್ ಬೇಕರೂ ಮಾಡೊಕ್. ಕತೆ, ಕವಿತೆ, ಕಾದಂಬರಿ, ನಾಟಕ, ಅರ್ಜಿ, ದಾವೆ, ಕಾಗದ ಎಂತೊದ್ ಬೇಕರೂ ಬರಿಯೊಕ್ ಯಾರ್ ಬೇಕರೂ ಅದರ ಓದಿ ಅರ್ತ ಮಾಡಿಕೊಣೊಕ್. ಹೀಂಗೆ ಮುಂದೆ ಕೈಸನ್ನೆ, ಆ ಮೇಲೆ ಬಾಯಿಸನ್ನೆ, ಮತ್ತೆ ಬರಾದ ಸನ್ನೇಂತ ಮೊಯಿಂಸನ ಬುದ್ದಿ ಮೂರು ಮೆಟ್ಟ್‌ಕೊಲ್ಲ ಮೊಲೇರ್ದಾಂಗಾತ್. ಇದಿಷ್ಟ್ ಉಪಕರಣ ನಮ್ಮ ಕೊಯಿಗೆ ಬಂದ ಮೇಲೆ ನಾವುಗೆ ಬೇರೆ ಎಲ್ಲ ರಂಗಗೊಳ್ಲೂ ಮುಂದೆ ಬಾದು ಬಾರಿ ಸುಲಬ ಆದಾಂಗಾತ್. ಈಗ ಮೊಯಿಂಸೊರ್ ತಮ್ಮ ಬುದ್ದಿಂದಲೇ ತಮ್ಮ ಬುದ್ದಿಗೂ ಎಷ್ಟೋ ಪೋಲಾದ ಯಂತ್ರಂಗಳ ತಯಾರ್ ಮಾಡಿಯೊಳೊ. ಚಂದ್ರ ಲೋಕಕೂ ಹೋಗಿ ಬಂದೊಳೊ.

ಈ ಯಂತ್ರಂಗಳ ನಾವು ಮಾಡ್ವೆ; ನಾವೇ ಬುದ್ದಿವಂತೊರ್‌ಂತ ಬಾಯಿ ಬೊಡ್ಕಂಡರೂ—ಅನಾದಿ ಕಾಲಂದೊಳೇ ಮಾತ್‌ನ ಸೃಷ್ಟಿಮಾಡ್ವ, ಆ ನಮ್ಮ ಹಿರಿಯರ ಸಾದನೆ ನಿಜಕ್ಕೂ ನಮ್ಮದರ್‌ಂದ ಕೊಮ್ಮಿಯೇನೂ ಅಲ್ಲಾಂತ ಹೇಳುದರ್ಲಿ ಸೊಂಸಯನೇ ಇಲ್ಲೆ. ಅವ್ರು ತಯಾರ್ಸಿದ ಈ ಮಾತ್ ಅತವಾ ಬಾಸೇಂತೇಳುವ ಯಂತ್ರ — ಎಲ್ಲ ಯಂತ್ರಂಗೊಳ್‌ಂದೊಳೂ ಮೇಲ್. ಅದಿಲ್ಲದಿದ್ದರೆ ನಾವುಗೆ ಊಟ ಸೀರ್ ಸಿಕ್ಕಿಕಿಲ್ಲೆ. ಅದೇ ಸಿಗ್ತಿಲ್ಲರೆ ನಾವು ಬೊದ್ಕುದು ಹೇಂಗೆ ? ಬೊದ್ಕಿಕೆ ಬೊತ್ತ್ತಿಲರೆ ಬೇರೆ ಯಾವ ಯಂತ್ರಂಗಳ್‌ಂದ ಯಾ ಪ್ರೇಯಜನ ?

ಇಂದ್ ನಮ್ಮ ಲೋಕೊಲಿ ಮೊಯಿಂಸೊರ್ ಮಾತ್ರ ಮಾತಾಡುವ ಪ್ರಾಣಿಗ. ಮೊಯಿಂಸೊರ್ ಮಾತ್ರ ಎಲ್ಲ ಪ್ರಾಣಿಗಳ್‌ಂದೊಳೂ ನಾಗರಿಕತೆಲಿ ಮೇಲಾಗಿ ಇರೋವು.

ಈ ಬೂಮಿಲಿರುವ ಬೇರೆ ಬೇರೆ ಜಾತಿ ಜನಾಂಗದೊವುಕೆ, ನಾವುಗೆ ಕನ್ನಡ ಹೇಂಗೋ ಹಾಂಗೆ ಬೇರೆ ಬೇರೆ ಬಾಸೆಗೆ ಒಳೊ. ಅದರೆಲ್ಲ ಲೆಕ್ಕ ಹಾಕಿರೆ ಮೂರು ಸಾವಿರಂದೊಳು ಹೆಚ್ಚಾದು. ಈ ಎಲ್ಲ ಬಾಸೆಗಳ್ಗೂ ಬರ್ದ ರೂಪುಲಿ ಇನ್ನೂ ತಾಕೆ ಅತ್‌ಲೆ. ಬೇಲಿ ಮಾತ್‌ನ ರೂಪುಲೇ ಇನ್ನೂ ಎಷ್ಟೊ ಬಾಸೆಗ ಒಳ್ಕೆಂಡೊಳೊ.

ನಮ್ಮ ಕನ್ನಡ ಬಾಸೆ ಹಿಂದೆ ಬೇಲಿ ಮಾತ್‌ನ ರೂಪುಲೇ ಇತ್ತ್. ಆ ಮೇಲೆ ಬರ್ದ್ ತೋರ್ಸಿಕೆ ಸುರಾತ್. ಹೀಂಗೆ ಆಗಿ ಈಗ ಸಾವಿರದ ಐನೂರು ವೊರ್ಸಂದ ಮೇಲಾತ್. ಕನ್ನಡುಲಿ, ಬೇಲಿ ಮಾತ್‌ನ ರೂಪುಲೇ ಇರುವ ಎಷ್ಟೋ ಮಾತ್‌ಗ ಇನ್ನೂ ಒಳೊ. ಆದರ ಎಲ್ಲ ಬರ್ದ್ ತೋರ್ಸಿಕೆ ಆದೂ ಇಲ್ಲೆ. ಏಕೇಂತೇಳಿರೆ ಕನ್ನಡ ಲಿಪಿಲಿ ಇರುವ ಅಕ್ಷರಂಗ ಅದಿಕೆ ಸಾಲುದ್‌ಲೆ ಕೊಡ್‌ಗ್, ದಕ್ಷಿಣ ಕನ್ನಡ ಜಿಲ್ಲೆಲೂ ಇರುವ ಗೌಡ ಜನಾಂಗದೊವು ಮಾತಾಡುವ ಮನೆಮಾತ್ ಉಟ್ಟೊಲೆ, ಅದ್ ಕೂಡಾ ಇಂತ ಕನ್ನಡದ ಒಂದು ಮಾತ್. ಇದ್ಕೆ ಅರೆಕನ್ನಡಂತ ಕೆಲೆವು ಜೆನ ಕರ್ದವೆ. ಹಿಂದೆ ಮದ್ರಾಸ್ ಯೂನಿವರ್ಸಿಟಿಲಿ ಕನ್ನಡ ಪ್ರೊಫೆಸರ್ ಆಗಿದ್ದ ನನ್ನ ಗುರುಗ ಮರಿಯಪ್ಪಬಟ್ರ ಇದ್ಕೆ 'ಗೌಡ ಕನ್ನಡ'ಂತ ಹೆಸ್‌ರ್ ಕೊಟ್ಟೊ. ನಾನೂ ಅದೇ ಹೆಸ್‌ರ್‌ಲಿ ನಮ್ಮ ಬಾಸೆಗೆ ಒಂದು ವ್ಯಾಕರಣ ಬರ್ದೊಳೆ. ಆದರೆ ಅದ್ ಇಂಗ್ಲಿಸ್ ಬಾಸೆಲಿ ಉಟ್ಟು. ಅದರ್‌ಂದಾಗಿ ನಮ್ಮ ಜೆನಕೆ ಆ ಪುಸ್ತಕದ ಪಂಚಯ ಇರಿಕೆ ಸಾದ್ಯ ಕೆಮ್ಮಿ.

ಯಾವ ಬಾಸೆಲಿ ಮಾತಾಡಿಕೂ ಯಾರೂ ನಾಚೊಕುಂತೇಳಿ ಇಲ್ಲೆ. ಏಕೇಂತೇಳಿರೆ ಆ ಬಾಸೆ ನಾವುಗೆ ನಮ್ಮ ಹಿರಿಯೆರ್‌ಂದ ಬಳುವಳಿ ಬಂದ ಸೊತ್ತ್. ಹೊಸ ಕಾಲೆಲಿ ಹೊಸ ಹೊಸ ಫೇಸನ್‌ಗ ಬಂದವೆ. ಹೀಂಗೆ ಬಂದ್ ನಾವು ನಮ್ಮ ಹಿಂದೆನ ಸಂಪೊತ್ತ್‌ಗಳ ಮರ್ತೆಬುಟ್ಟವೆ. ನಮ್ಮ ಕೆಲೆವು ಜೆನ ನಮ್ಮ ಮನೆ ಮಾತ್‌ಲಿ ಬೇರೆವರಿದ್‌ರಿಗೆ ಮಾತಾಡುದು ಅಪಮಾನಾಂತ ಗ್ರೈಸ್ಯೊಳೊ. ಮಕ್ಕಳೊಟ್ಟಿಗೆ, ಮನೆಲಿ ಸಾ, ಇದರ ಬುಟ್ಟ್ ಸುದ್ದ ಕನ್ನಡುಲಿ ಮಾತಾಡಿಕೆ ನೋಡುವೆ. ನಾವು ಬೇರೆವರ್‌ಂದ ಕೀಳ್‌ಂತ ಯೋಚನೆ ಇದ್ದುವು ಹಾಂಗೆ ಮಾಡುದು. ನಾವು ಎಷ್ಟ್ ಬುದ್ದಿವಂತೆರಾದರೂ, ನೋಡೊ ಒಂದೇ ಒಂದು ಹೊಸ ಶಬ್ದನ ಉಂಟುಮಾಡಿ ಜಾರಿಗೆ ತಾಕೆ ನೋಡೊನೊ. ಅದ್‌ಲೆ ಹಾಂಗಿರ್ಕನ ಇಂತ ಒಂದು ಬಾಸೆನ ಎಷ್ಟೊ ತಲೆಮಾರ್‌ಗಳ ಹಿಂದೆಂದೇಳೇ ನಮ್ಮ ಹಿರಿಯೊವು ಮಾಡಿ ಇಸಿಯೊಳೊಲೆ ಅವರ ಸಾದನೆ ಎಷ್ ದೊಡ್ಡದ್ – ಅದರ ನ್ಯೆನ್ಸಿರೆ ಆಶ್ಚರ್ಯ ಉಂಟಾದ್ದೆ. ಮಾತ್ ಬಾರದೆ ಬಾಯಿ ಕೆಟ್ಟದೆ.

ನಮ್ಮ ಗೌಡ ಕನ್ನಡುಲಿ ನಾ, ನೀ, ಅಂವ, ಅದ್ ಇಂವ, ಇದ್, ನಾವು. ನೀವು, ಅವು, ಇವು ಇಷ್ಟ್ ಸರ್ವನಾಮ ರೂಪುಗ ಕಂಡ್‌ಬಂದವೆ ಸುದ್ದ ಕನ್ನಡುಲಿ ನಾನು, ನೀನು, ಅವನು, ಅವಳು, ಅದು, ಇವನು, ಇವಳು, ಇದು, ನಾವು, ನೀವು, ಅವರು, ಅವುಗಳು, ಇವರು, ಇವುಗಳು–ಹೀಂಗೆ ಉಟ್ಟು ಹೋಗುತ್ತೇನೆ,

ಯಾವ ಬಾಸೆಲಿ ಮಾತಾಡಿಕೂ ಯಾರೂ ನಾಚೊಕುಂತೇಳಿ ಇಲ್ಲೆ. ಏಕೇಂತೇಳಿರೆ ಆ ಬಾಸೆ ನಾವುಗೆ ನಮ್ಮ ಹಿರಿಯೆರ್‌ಂದ ಬಳುವಳಿ ಬಂದ ಸೊತ್ತ್. ಹೊಸ ಕಾಲೆಲಿ ಹೊಸ ಹೊಸ ಫೇಸನ್‌ಗ ಬಂದವೆ. ಹೀಂಗೆ ಬಂದ್ ನಾವು ನಮ್ಮ ಹಿಂದೆನ ಸಂಪೊತ್ತ್‌ಗಳ ಮರ್ತೆಬುಟ್ಟವೆ. ನಮ್ಮ ಕೆಲೆವು ಜೆನ ನಮ್ಮ ಮನೆ ಮಾತ್‌ಲಿ ಬೇರೆವರಿದ್‌ರಿಗೆ ಮಾತಾಡುದು ಅಪಮಾನಾಂತ ಗ್ರೈಸ್ಯೊಳೊ. ಮಕ್ಕಳೊಟ್ಟಿಗೆ, ಮನೆಲಿ ಸಾ, ಇದರ ಬುಟ್ಟ್ ಸುದ್ದ ಕನ್ನಡುಲಿ ಮಾತಾಡಿಕೆ ನೋಡುವೆ. ನಾವು ಬೇರೆವರ್‌ಂದ ಕೀಳ್‌ಂತ ಯೋಚನೆ ಇದ್ದುವು ಹಾಂಗೆ ಮಾಡುದು. ನಾವು ಎಷ್ಟ್ ಬುದ್ದಿವಂತೆರಾದರೂ, ನೋಡೊ ಒಂದೇ ಒಂದು ಹೊಸ ಸಬ್ದನ ಉಂಟುಮಾಡಿ ಜಾರಗೆ ತಾಕೆ ನೋಡೊನೊ, ಅದ್‌ಲೆ ಹಾಂಗಿರ್ಕನ ಇಂತ ಒಂದು ಬಾಸೆನ ಎಷ್ಟೊ ತಲೆಮಾರ್‌ಗಳ ಹಿಂದ್‌ಂದೇಳೇ ನಮ ಹಿರಿಯೊವು ಮಾಡಿ ಇಸಿಯೊಳೊಲೇ–ಅವರ ಸಾದನೆ ಎಷ್ಟ್ ದೊಡ್ಡದ್–ಇದರ ನ್ಯೆನ್ಸಿರೆ ಆಶ್ಚರ್ಯ ಉಂಟಾದ್ದೆ. ಮಾತ್ ಬಾರದೆ ಬಾಯಿ ಕೆಟ್ಟದೆ.

ಬರುತ್ತೇನೆಂತ ಸುದ್ದ ಕನ್ನಡೊಲಿ ಹೇಳಿರೆ ಹೋನೆ, ಬನ್ನೆಂತ ಸಣ್ಣದ್ ಮಾಡಿ ಗೌಡ ಕನ್ನಡೊಲಿ ಹೇಳಿರೆ ಸಾಕಾದೆ. ನಾನು ಬಂದೆ, ನಾವು ಬಂದೆವುಂತ ಹೇಳುವ ಬದ್‌ಲಿಗೆ ನಾ ಬಂದೆ ನಾವು ಬಂದೆಂತೇಳಿರೆ ಸಾಕ್. ಅವನು ಬಂದನು ಅವಳು ಬಂದಳು, ಅದು ಬಂದಿತುಂತ ಹೇಳುವ ಬದ್‌ಲಿಗೆ ಅಂವ ಬಾತ್, ಅದ್ ಬಾತ್‌ಂತ ಒಂದೇ ರೂಪುನ ಕ್ರಿಯಾಪದ ಸಾಕಾದೆ. ನೋಡಿರೆ ಇದೆಲ್ಲ ಬಾಸೆಲಿ ಇರುವ ಸುಲಬ ಉಪಾಯ ಈ ಉಪಾಯ ಕಂಡ್‌ಹಿಡ್ದುದ್ ನಾನೂ ಅಲ್ಲ, ನೀವೂ ಅಲ್ಲ. ನಮ್ಮ ಹಿಂದೆನೊವು ಹಾಂಗೆ ಮಾಡಿ ಇಸ್ಯೊಳೊ. ಅದಿಕೆ ಅವರ ಮೆಚ್ಚೊಕೋ ಬೇಡೋ? ಹೀಂಗೆ ಸುದ್ದ ಕನ್ನಡಂದ ಬೇರೆ ತರ ಇರುವ ಎಷ್ಟೊ ರೂಪುಗ ಬೇಕಾದಷ್ಟು ಸಿಕ್ಕುವೆ ಅದೂ ಅಲ್ಲದೆ ಹಳಿಗನ್ನಡ ಬಾಸೆನ ಹೋಲ್ಸಿ ನೋಡಿರೆ ಅಪ್ರೂಪದ ಕೆಲೊವು ಮಾತ್‌ಗ ಇಂದ್‌ನ ಸುದ್ದ ಕನ್ನಡೊಲಿ ಇಲ್ಲದೆ ಇರೊವೂ ಕಂಡ್‌ಬಂದವೆ. ಹೀಂಗಾಗಿ ಗೌಡ ಕನ್ನಡದನ ಮಾತಾಡೊವು ಕೆಮ್ಮಿ ಜೆನ ಆದರೂ ಅದರ್ಲಿ ಎಷ್ಟೋ ಸತ್ವ ಇರುವ ಅಂಸ ಉಟ್ಟು. ಇದ್ ನಮ್ಮ ಸಂಸ್ಕೃತಿ ಮತ್ತೆ ಪರಂಪರೆಗೆ ಇರುವ ಕನ್ನೆಟಿನಾಂಗೆ. ಈ ಕನ್ನೆಟಗೆ ದೂಳು ಕುದ್ದರದಾಂಗೆ ಒರ್ಸಿರೆ, ನಮ್ಮ ಮೋರೆನ ಪೂರ್ಲ್ಲ ಅದರ್ಲಿ ನೋಡೊಕ್. ಇದರ ನಾವು ಮರ್ತರೆ ನಮ್ಮ ಮೋರೆ ನೋಡುವ ಕನ್ನೆಟಿನ ನಾವೇ ಒಡ್ದ್ ಹಾಕಿದಾಂಗೆ. ಈ ಕಾಲೊಲಿ ನಿಮ್ಮ ಮೋರೆ ನೋಡುವ ಕನ್ನೆಟ ನೀವ್ಗೆ ಬೇಕೊ ಬೇಡೋ? ಆಲೋಚನೆ ಮಾಡಿ.



---

## ಎಸ್ಟ್ ಹೊತ್ತಿಗೆ ಉಂಬೊದು?

**ನೆಂಟ:** ಎ, ಕೂಸು ನಿಮ್ಮ ಮನೆಲಿ ಎಸ್ಟ್ ಹೊತ್ತಿಗೆ ಉಂಬೊದು......(ಹಸ್ತುಟು ಪಾಪ)

**ಹೈದ:** ನೀವು ಹೋದ ಮೇಲೆತಾ ಅವ್ವ ಹೇಳಟು

—ಬಿ. ಸೂರ್ಯಕಾಂತ.

## ಕಾಚ ಹಾಕ್ಯೊಕಾತ್!

ಒಮ್ಮೆ ನಾನ್ ಮತ್ತೆ ನನ್ನ ಅಕ್ಕನ ಮಗ ಐದ್ ವರ್ಷದ ಸ್ಮಿತಾ ತಿರ್‌ಗಾಡಿಕ್ಕೆಂತ ಗದ್ದೆ ಕಡೆ ಹೋಗ್ತಾ ಇದ್ದೊ. ಅಪ್ಪೊತ್ತಿಗೆ ದಾರಿಲಿ ಒಂದು ಎಮ್ಮೆ ಸಗ್‌ಣಿ ಹಾಕಿ ಉಚ್ಚೆ ಹೊಯ್ಯಿತಿತ್. ಆಗ ಸ್ಮಿತಾ "ಚಿಕ್ಕಮ್ಮ ಯಮ್ಮೆಗೆ ಕಾಚ ಹಾಕ್ಯೊಕ್"ಂತ ಹೇಳ್ತ್, ನಂಗೆ ಅವ್ನ ಮಾತ್ ಕೇಳಿ ಜೋರ್ ನೆಗೆ ಬಾತ್, ನೆಗಾಡ್ದೆ. "ಮತ್ತೆ ನಾವೆಲ್ಲ ಹಾಕುವೆ.... ಅದಿಕೆ ಹಾಕಿಕೆ ಏನ್"ಂತ ಪುನಃ ಕೇಳ್ತ್ ಸ್ಮಿತಾ. ನಂಗೆ ನೆಗೆ ತಡಿಯಕೆ ಆಗದೆ, ಮನೆಗೆ ಹೋಗಿ ಎಲ್ಲವರೊಟ್ಟಿಗೆ ಹೇಳ್ದೆ, ಎಲ್ಲರೂ ಬಿದ್ದು ಬಿದ್ದ್ ನೆಗಾಡ್ದೊ.

—ಶಾರದಾ ಮುಂಡೋಡಿ.

## ಒಳ್ಳೆ ಮಕ್ಕ

ಅಪ್ಪ ಹೇಳ್ತ್ ಈಚೆಂವ ಕಣ್ಣ್ ಮುಚ್ಚೋಕು<br>
ಆಗ ಗೊತ್ತಾದೆತ;

ಅವ್ವ ಹೇಳ್ತ್ ಈಚವ್ಳ ಕಣ್ಣ್ ಮುಚ್ಚೋಕು<br>
ಆಗ ಗೊತ್ತಾದೆತ;

ಇಬ್ಬೊರೂ ಕಣ್ಣ್ ಮುಚ್ಚಿದೊ.<br>
ಮಕ್ಕ ಹೆಣನ ಬುಟ್ಟೊ,<br>
ಹಣನ ಹೊತ್ತೊ!

—ಬಿ. ಆರ್ ಜೋಯಪ್ಪ.

---

● ಕಷ್ಟ ಕಾಲಲಿ ಯಾರ್ ನಿಮ್ಮೊಟ್ಟಿಗೆ ಒಂದವೆ? ಕತ್ತಲೆಲಿ ನೆರ್ಳ ಕೂಡಾ ನಿಮ್ಮನಾ ಬುಟ್ಟು ಹೋದವೆನಾ?

# ಗೌಡ ಬಂಟರ ಸತ್ತು-ಗುತ್ತು

–ಕೆದಂಬಾಡಿ ಜತ್ತಪ್ಪರೈ, ಪಾಣಾಜೆ        ಗೌಡ ಕನ್ನಡಕ್ಕೆ: ಜ. ಬ. ಚೆಟ್ಟಿಮಾಡ, ಸುಳ್ಯ

## ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ–ಪ್ರಶಸ್ತಿ ವಿಜೇತರ್

ದಕ್ಷಿಣ ಕನ್ನಡ ತುಳುನಾಡ್‌ನ ಮಲೆನಾಡ್‌ಲಿ ಮೂಡು ಪ್ರಾಂತ್ಯಲಿ ಬಂಟ್‌ರೂ, ಗೌಡ್ರೂ ಹೆಚ್ಚ್. ಬ್ರಾಮಂಡ್‌ರೂ, ಜೈನರೂ, ಬೇರೆ ಹಿಂದುಳ್‌ದ ಜಾತಿಯವರ ಮನೆಗೆ ಬೆರ್‌ಳ್‌ಲಿ ಲೆಕ್ಕ ಹಾಕ್‌ವಷ್ಟ್. ಹೆಚ್ಚ್‌ನ ಭೂಮಿ ಕಾಣಿ ಎಲ್ಲೊವು ಬಂಟ್ರು ಮತ್ತೆ ಗೌಡ್ರುಗಳ್‌ದ್ ಜೆನ ಲೆಕ್ಕ ಮಾಡಿ ನೋಡ್ರೆ ಸಾ ಇವರ್‌ದೇ ಮೇಲ್ಗೈ. ಆದರೆ ಅಂದ್ ಗೌಡ್ರುಗಳ್‌ಲಿ ಕಲ್ತವು ಬಾರಿ ಕಮ್ಮಿ. ಅವು ಕಷ್ಟ ಸಹಿಷ್ಣುಗ. ಆಡಂಬರ ಇಲ್ಲದೊವು ನೆಂಟ್‌ರ್‌ಗಳ ಸತ್ಕಾರ ಮಾಡುದರ್‌ಲಿ ಮಿಸ್ಟರ್. ಅವು ಬಂಟ್ರುಗಳಿಗೆ ಗುತ್ತಿನೊವುಂತ ಮನ್ನಣೆನ ಮಣೆ ಕೊಟ್ಟಿದ್ದರೆ, ಬ್ರಾಮಂಡ್ರು ಭೂದೇವುರೂಂತ, ಜೈನರ ಅರಸು ಮನೆತನದೊವ್‌ಂತ ಮರ್ಯಾದೆಲಿ ಕಾಂಬೊತ್ತಿದ್ದೊ. ಆ ಕಾಲದ ಜಮೀನ್‌ದಾರ್ರು ಆಡಂಬರದೊವು. ಕೋಟು, ಕಚ್ಚೆ, ಜೀಕಿನ ಮೆಟ್ಟ್, ಪಟ್ಟೆ ಶಾಲಿಲ್ಲದೆ ಮನೆಂದ ಹೊರ್ಡೊವಲ್ಲ! ಆದರೆ ಗೌಡ ಒಬ್ಬ ಎಷ್ಟೇ ದೊಡ್ಡ ಆಸ್ತಿ ಇದ್ದಂವ ಆಗಿದ್ದರೂ ಎರ್ಡ್ ಮರೆ ಮೊಳ ಅಗಲದ ಮುಂಡು ಉಟ್ಟ್, ಅರೆ ಕೈನ ಚೌಕುಳಿ ಅಂಗಿ ಹಾಕಿ ಬೈರಾಸೊಂದರ ತಲೆಗೆ ಸುತ್ತಿರೆ ಆತ್-ಅವನ ದುಸ್ತಿನ ಆಡಂಬರ. ಕಟ್ಟಾಣಿ ಚೀಲಲಿ ಥೈಲಿ ಥೈಲಿ ದುಡ್ಡ್ ಇಸ್ದ್ ಇವನ ಹಕ್ಕಲೆ ಮಾತ್ರ ಉಳ್‌ದೊವ್ ಬರಿಗೈ ಬಂಟ್ರುಗ. ಗೌಡನ ಗೌಡತೆಕನ ಆ ಕಾಲಲಿ ಅಳೆವ ಒಂದೇ ಒಂದ್ ಅಳತೆ ಅಂದ್ರೆ ವಿಭೂತಿ ಹಚ್ಚಿದ ಗಂಭೀರ ಮುಖ ಗಿರಿಜಾ ಮೀಸೆ, ಕೆಬಿಲಿ ಗಾಲೊಂಟೆ. ಈ ಗಿರಿಜಾ ಮೀಸೆ, ಅಂವ ಬೇಟೆ ಕೂಟಲಿ ತನ್ನ ಗೌಡ್ತಿಗೆ ಮುರ್ತ್‌ಸಿ ಹಾಲಿ ಮೊದುವೆಗೆ ಬಾಸಿಂಗ ಕಟ್ಟಿಸಿ ಸೇಸೆ ಹಾಕಿಸಿಕಂಡ ಗುರ್ತ್. ಅಂದರೂ ನಮು ವಿನಮು ಸಂಪನ್ನ ವಿನಮುಂದ ಕೈ ಜೋಡ್ಸುವ ಇಸಂಗೆ ಉಳ್‌ದೊವು ಕೊಟ್ಟ ಬಿರ್‌ದ್ 'ಅಂಜೆಲಿ ಗೌಡ'ಂತ ತಾವು ಅಡಿಗೆ ಬಿದ್ದರೂ ಮೂಂಕುಗೆ ಮೊಣ್ಣ್ ತ್‌ಲೆಂತ ಹೇಳ್‌ವ ಬಿರ್‌ಸರ್‌ಗ.

ಸುಮಾರ್ ಐವತ್ತ್ ವರ್ಷ ಹಿಂದೆನ ನೆಂಪು. ನನ್ನ ಅಪ್ಪ ನಮ್ಮೂರ್‌ಲಿ ಗುತ್ತು ಮನೆತನದ ಯೆಜ್‌ಮಾನ. ನನ್ನ ಹಿರಿಯೊವ್ಕೆ ವಂಶ ಪಾರಂಪರ್ಯಲಿ ಬಂದ ಮೇಟಿ ವಿದ್ಯೆನ ಬುಟ್ಟ್ ಯೂಪಾರ ಮಾಡ್‌ವ ಗೀಳ್ ಅಂಟಿಕೊಂಡತ್. ಇದ್ಕೆ ಮೊದ್ಲೇ ಕಟ್ಟ್‌ವ ಕೋಳಿ, ಓಟದ ಕೋಣಗಳ ಸಾಂಕಿ ಮನೆಲಿದ್ದ ಮೂಲಧನ ಕರ್‌ಗಿತ್ತ್. ಯಾಪಾರಕ್ಕೆ ಎಲ್ಲಿಂದಲೋ ಹೆಂಗೋ ಬಂಡ್ವಾಳ ಹೂಡಿ ಅದ್ದೂರಿಲಿ ನಮ್ಮ ಹಕ್ಕಲೆನ ಪೇಟೆಲಿ ಶೆಟ್ಟಿ ಮತ್ತೆ ರೈ ಕಂಪ್ನಿ ಯಾಪಾರ ಸುರು ಮಾಡ್‌ತ್. ಒಂದೆರಡ್ ಯಾಪಾರ ಏನಲ್ಲ. ಜೌಳಿ, ಜೀನ್ಸ್, ಕಟ್ಲೇರಿ ಎಲ್ಲಾ. ಬೆಳ್ಮೈರೆ, ಪಂಜ, ಕಡಬ, ಮರ್ದಾಳ ಇವೆಲ್ಲಾ ಒಳ್ಳೆ ಯಾಪಾರ ಜಾಗೆಗ. ಕಾಡ್‌ಂದ ಬಾವ ಒಳ್ಳೆಮೆಣಸ್, ದಾಲ್ಚೀನಿ, ರಾಂಪತ್ರೆ, ಗೇರ್‌ಬೀಜಂದ ಹಿಡ್ದ್ ಅಡ್‌ಕೆ ಕಾಯಿನವರೆಗೆ ಎಲ್ಲಾ ರಖಂ ಯಾಪಾರ್ನೇ ಎರ್ಡ್ ಮೂರು ವರ್ಷ ಒಳ್ಳೆ ಲಾಯಿಕ್‌ಲಿ ನಡ್‌ತ್. ತುಂಬ ಲಾಭ ಸಾ ಇತ್ತ್‌ಂತ ಹಿರಿಯೊವು ಹೇಳ್‌ತ್ತಿದ್ದೊ. ಅಷ್ಟೊತ್ತಿಗೆ ಇನ್ನೊಬ್ಬ ಪಾಲ್ದಾರ ಶೆಟ್ರು, ಬಂದ ಹಣನೆಲ್ಲ ಅವ್ರ ಹೆಸ್‌ರ್‌ಗೆ ಸೇರ್ಸಿ ಕರ್ಚ್‌ನ್ನೆಲ್ಲ ನನ್ನಪ್ಪನ ಹೆಸ್ರಿಗೆ ಮಾಡ್ದೊ. ಈಗ ನನ್ನಪ್ಪಂಗೆ ಉಳ್‌ದದ್ದ್ ಸಾಲ! ದಿವಾಳಿ ತೆಗ್ಯದೆ ಉಪಾಯ ಇಲ್ಲೆ. ದಿವಾಳಿ ತೆಗ್ಯಕೆನ್ ಆಗ ಆನೆ ಕುದ್ರೆನ ಅಗತ್ಯ ಇಲ್ಲದ ಕಾಲ. ಅದ್‌ಕ್ಕೆ ಕರ್ಚ್ ಬೇಗ ಹದ್ನಾಲ್ಕ್ ಆಣೆ. ಆದರೆ ಈ ಹದ್ನಾಲ್ಕಾಣೆ ಕರ್ಚ್ ಮಾಡ್ರೆ ನಮ್ಮ ಮನೆದ್ ಮರ್ಯಾದೆ ಮಾರಿಹೋದಂಗೆ. ಮನೆತನಕ್ಕೆ ಮಾಸದ ಕಲೆ. ಅಂದ್‌ನ ಕಾನೂನು ಕೃಪಿಯತ್ತ್ ದಾಖ್ಲೆಗೆ ಮೊದ್ಲ್ ಪ್ರತಿವಾದಿನ ಕೈದ್ ಮಾಡ್ಸಿ ಅಂವ ಸರ್ಯಾದ ಜಾಮೀನ್ ಕೊಡದಿದ್ದರೆ ಜೈಲ್ ಸೇರ್‌ಸಕ್‌ಂತ ಜಾರಿಲಿ ಇದ್ದ ಕಾಲ. ಇಷ್ಟ್ ಮಾಡಿಕೆ ನನ್ನ ಅಪ್ಪಂಗೆ ರಖಂ ಜೌಳಿ ಅಂಗ್‌ಡಿ ಸಾಮಾನ್ ಸಾಲಕೊಟ್ಟ ಮಂಗ್ಳೂರ್ನ ಸಾಹುಕಾರ್ರು ಜಿ. ಮಾಧವ ಅವು ತೆಯ್ಯಾರೊಳೊಂತ ತಿಳ್‌ದ ನನ್ನ ಅಪ್ಪ ಕಂಗಾಲ್. ಆ ಕಾಲಲೇ ವಿದ್ಯೆ ಕಲ್ತಿದ್ದ ಅವು ಅವರ ಸದ್ಗುಣ, ದೈವಭಕ್ತಿ, ಪರೋಪಕಾರಂದ ನೆರೆಕರೆಯೊವ್ಕೆಲ್ಲಾ ಬೇಕಾದೊವಾಗಿದ್ದೊ. ದೊಡ್ಡ ಮನೆತನಂದ ಕೆಲೊವ್ ವರ್ಷದ ಹಿಂದೆ ನಮ್ಮ ಮನೆಗೆ ಸೊಸೆಯಾಗಿ ಬಂದೊವು. ಈಗ ತನ್ನ ಗಂಡಂಗೆ ಬಂದ ಗಂಡಾಂತ್ರನ ಅವಮಾನನ, ನನ್ನ ಕೈ

ಹಿಡ್ದೋವ್ ದಿವಾಳಿಂತ್ಹೇಳ್‌ವ ಕೆಟ್ಟ ಹೆಸ್ರ್‌ನ ಕಂಡಿತ ತಡೆಯೊವವಲ್ಲ. ಕೌರ್‌ಂದ ಕಂದ ಎಲ್ಲಾ ನಗನಟ್ಟ್‌ನ ಮಾರ್ರೂ ಗಂಡನ ಸಾಲ ತೀರದ್. ಜಾತಿ ಮಕ್ಕ ಯಾರೂ ಸಾಲ ತೀರ್ಸಿಕೆ ಒಪ್ಪುವಂತೊವು ಅಲ್ಲ. ಹಾಂಗೆಂತಿದ್ದರೆ ನನ್ನ ಅಪ್ಪನ ಉಳ್‌ಸೋಕೊಂತಾಗಿದ್ದರೆ ಶೆಟ್ಟಿ ಮತ್ತೆ ರೈ ಕಂಪ್ನಿನ ಪಾಲ್ದಾರ ನಮ್ಮ ಹಕ್ಕಲೆನ ನೆಂಟ್ರ ಈ ತರ ಹಣ ನುಂಗಿ ಈ ಪೇಚ್ ತಂದ್ ಹಾಕ್‌ತಿತ್‌ಲೆ. ನಮ್ಮ ಮನೆತನದ ಆಸ್ತಿಗೆಲ್ಲಾ ನನ್ನಪ್ಪ ಒಬ್ಬನೇ ಹಕ್ಕ್‌ದಾರ ಆಗಿದ್ದೊ. ಆದರೆ ಇದ್‌ಕ್ಕೆ ಸುರುಲೇ ಯಾಪಾರಕ್ಕೆ ಹಣ ಒದ್‌ಗಿಸಿಕೇಂತ ಇಡೀ ಆಸ್ತಿನ ಭೋಗ್ಯಕ್ಕೆ ಕೊಟ್ಟದ್ದೊ. ನನ್ನ ಅವ್ವನ ಮರ್ಯಾದೆ ಉಳ್‌ಸುವ ದಾರಿ ಸಾಯೋದು ಒಂದೇ. ಆದರೆ ತಿಳುವಳಿಕಸ್ತೆ ಆದ ನನ್ನ ಅವ್ವ ಅಂತಾ ಪಾಪಕೆಲ್‌ಸನ ಮಾಡ್‌ವೊಂತವೇ ಅಲ್ಲ “ಅಯ್ಯನಬಂಡೆ! ಹೀಂಗಾತಲೇ? ಈಗೆಂತ ಮಾಡ್ದುಂ”ತ ಆಲೋಚನೆ ಮಾಡ್ದ ನನ್ನ ಅವ್ವ ಏನೋ ಸೆನ್ಬ್ ನಮ್ಮ ಮನೆಂದ ಒಸಿ ದೂರ ಇದ್ದ ತುಂಬಿ ಮನೆ ಕಡೆ ಹೊರ್ಟೊ. ಹೆಸ್‌ರ್‌ಸಂಗೆ ತುಂಬಿ ಮನೆ ತುಂಬಿದ ಮನೇನೆ. ಮಕ್ಕಳ ಬೊಳ್ಳ್‌ನ ತಣಿನ ಮೊಸ್ರ್‌ನ ಊಟಕ್ಕೆ ಆ ಮನೆ ಹುಗ್ಗವ್ವನ (ಹುಗ್ಗಿ ಕೊಡ್‌ವ ಅವ್ವ) ಮುಂದೆ ಇಸ್‌ವ ಪಲ್ಲಯಿ ಗದ್ಬಗಗ ನಲ್ವತ್ತು ಐವತ್ತು. ಅದ್ ಅಂದ್ ನೂರಾರ್ ಜೆನಂದ ತುಂಬಿದ್ದ ಗೌಡ್ರ ಕೂಡು ಕುಟುಂಬ. ಹೆಳ್ಮಕ್ಕಳಿಗೆಲ್ಲ ಸರ್ತಿಲಿ ಅಡಿಗೆ. ಅಡಿಗೆ ಕೆಲ್ಸ ಇಲ್ಲದೊವು ಮನೆ ಗಂಡಸರೊಟ್ಟಿಗೆ ಗದ್ದೆ ಕೆಲ್ಸಕ್ಕೆ ಹೋವ ಕ್ರಮ. ಹಟ್ಟಿ ತುಂಬ ಎಮ್ಮೆ ದನಗ ಸಾಲ್ ಸಾಲ್, ಮನೆ ಕೊಟಗೆನ ಜಗ್‌ಲಿನ ಮೂಲೆ ಮೂಲೆಲಿ ಕಂಚಿಲ್ ತುಂಬಾ ಅಂಬೇಂತ ಹೇಳ್‌ವ ಕರ್‌ಗ. ಹೂಡುವ ಹೂಡಿಕಿರುವ ಎತ್ತ್-ಕೋಣಗ ಮುಂದೆ-ಮುಂದೆ. ಮನೆನ ಮುತ್ತೈದೆಗ ಹತ್ತ್-ಹದ್ನೈದ್ ಜೆನ ಕೋಳಿ ಕೂಂಗಿಕನ ಎದ್ದ್ ಎಮ್ಮೆ-ಹಸ್‌ಗಳ ಹಾಲ್ ಕರಿಯಕೆ ಸುರುಮಾಡ್ರೆ ಒಂದು ಬೊಳ್ಪು ಮುಟ್ಟ ಕರ್ದರೂ ಮುಗ್ಯದೆ ದೊಡ್ಡ ಕರ್‌ಗಳ ಹಂಗೆ ಮಲೆ ತಿಂಬಕೆ ಬುಟ್ಟ್ರೆ ಬಾದು ದೊಡ್ಡ ಸಂಗತಿನೇ ಅಲ್ಲ. ಅಂದ್‌ನ ಕಾಲಲಿ ಹಾಲ್ ಮಾರ್ದು ಪಾಪ. ಈ ಬಿಂದಿಗೆ-ಬಿಂದಿಗೆ ಹಾಲ್‌ನ ಹಂಡೆಗೆ ಹಾಕಿ ಕಾಸಿ, ಕೊಳದಪ್ಪಲೆಗೆ ಹುಗ್ಗವ್ವ ಬಸ್ದ್ ಹೆಪ್ಪ್ ಹಾಕಿ, ಮಾರ್ನೇ ದಿನ ಮಕ್ಕಳಿಗೆಲ್ಲಾ ಗಟ್ಟಿ ಮೊಸ್ರು ತಣಿನ ಉಂಬಕೆ ಕೊಟ್ಟರೆ ಮತ್ತೆ ಮಕ್ಕಳ ಸದ್ದೇ ಇಲ್ಲೆ. ಉಳ್‌ದ ಮೊಸ್ರ್‌ನ ಏಳೆಂಟ್ ಮಂದಿ ಮನೆಗೆ ಹೊಸ್ದಾಗಿ ಬಂದ ಸೊಸೆಗ ಮಂತ್ ಹಿಡ್ದ್ ಕಡ್ಯಕೆ ಕುದ್ದರೆ ಮನೆಯುಡೀ ಸದ್ದ್. “ದಾರ್ ಬೋರ್ ಬೊಮ್ಮಕ್ಕ-ದಾರ್ ಬೋರ್ ಬೊಮ್ಮಕ್ಕ-ಬೊಮ್ಮಕ್ಕ ಹೊಟ್ಟೆಲಿ ಕೆನೆ ಮೊಸ್ರ್ ಮೊಸ್ರ್ ಮೇಗಡೆ ಕನ್ನೊಡಿ. ಕನ್ನೊಡಿ ಎಡೇಲಿ ಬೊಮ್ಮಕ್ಕ ದೇವಿನ ತಂಗೆಕ್ಕ” ಅಂತ ಒಗಟ್ ರೂಪದ ದೊನಿನ ಹಾಡ್. ಮನೆಯೊವ್ಕೆ ನೆಂಟ್ರಗೆ ಇಕ್ಕಿ ಉಳ್‌ದ ಬೆಣ್ಣೆನ ಕಾಸಿ ತುಪ್ಪನ ತಿಂಗಳಿಗೊಮ್ಮೆ ಹಕ್ಕಲೆನ ಕಡಬಕೊಕ್ಕೇ,ಉಪ್ಪಿನಂಗಡಿಗೋ ತೆಕೊಂಡ್ಹೋಗಿ ಪೇಟೆಲಿ ಮಾರ್ರೆ ಆ ಕಾಲಲೇ ಮನೆಗೆ ಬಾತಿದ್ದ ರೂಪಾಯಿ ಐವತ್ತು ಐವತ್ತೈದ್. ಇಂದ್ ಅದರ ಬೆಲೆ ಸಾವ್ರದೈನೂರ್ ರೂಪ್ಯ. ಇದ್‌ಕ್ಕೆ ಮನೆಯೆಜ್‌ಮಾಂತಿ ಹುಗ್ಗವ್ವ ಬೇಂಕ್. ಬೆತ್ತದ ಪೆಟ್ಟಗೆಲಿ ಜಮೆ. ಮನೆಯೆಜ್‌ಮಾನ ಮೋಂಟಗೌಡ್ರು ಆ ಹಣ ಏನಾತ್‌ಂತ ಹೆಣ್ಣ್‌ನ ಕೇಳ್ದವೇ ಅಲ್ಲ ಹಿಂದೆನ ಜಮೆ ಎಷ್ಟ್ ಉಟ್ಟೊಂತ ನೋಡ್ದವೂ ಅಲ್ಲ. ಆದರೆ ಹಿಂದೈಂದಲೇ ತಿಂಗ-ತಿಂಗ ಇಷ್ಟೇ ಹಣ ಜಮೆ ಆಗುಟೊಂತ ಗೊತ್ತ್ ಅವ್ಕೆ. ಅದ್ ಆಪದ್ಧನ-ಕಷ್ಟ ಕಾಲಕ್ಕೆ ಬೇಕಾದೆಂತ ಮಡ್‌ಕಂಡ ತಿಳುವಳಿಕಸ್ತೆ. “ಮನೆಯೊವ್ ದಿವಾಳಿ ಹೋದೊ. ಮರ್ಯಾದೆ ಹೋತು”ತ ಮೂರ್ದಿನಂದ ಉಪಾಸ ಕುದ್ದ್ ಜಾಗರ್ಣೆ ಮಾಡಿ ಕಡೆಗೆ ಇದೊಂದೇ ದಾರೀಂತ ನನ್ನವ್ವ ಹೊರ್ಟದ್ದ್ ಇದೇ ತುಂಬಿ ಮನೆಗೆ. ಕಾಲ್ ಎಳ್ಕಂಡ್ ಹೆಂಗೊ ಬಂದ ನನ್ನವ್ವಂಗೆ ತುಂಬಿ ಮನೆ ಮೋಂಟಗೌಡ್ರ ಸಂಪತ್ತ್ ಎಷ್ಟ್ಂತ ಗೊತ್ತಿತ್ತ್. ಗೌಡ್ರ ಒಳ್ಳೆ ಗುಣಕ್ಕೆ ಊರ ಹಿರಿಯೊವೂಂತ ತಲೆತಗ್ಗಿಸ್‌ವೊವು ನನ್ನ ಅವ್ವ. ಗೌಡ್ರಿಗೂ ನನ್ನವ್ವನ ಮೇಲೆ ಹೆತ್ತ ಮಗಳ್‌ಲಿದ್ದಷ್ಟೆ ಪ್ರೀತಿ-ವಾತ್ಸಲ್ಯ. ಅದ್‌ಕ್ಕೇ ಗುತ್ತಿನ ಮನೆನ ಮುತ್ತೈದನ, ಸೀತಮ್ಮಾಂತ ಗೌರವದ ಬಹುವಚನಂದ ಕರೆವ ಬದಲ್ ಮಗಳ ಕರೆವ್ಹಂಗೆ ಸೀತೂಂತನೇ ಕರಿಯುತ್ತಿದ್ದೊ. ಆ ಕರೆಗೆ ನನ್ನ ಅವ್ವ ಓಕೊಡ್‌ತ್ತಿದ್ದೊ. ಎಂಬತ್ತ್ ವರ್ಷದ ಈ ಗೌಡಜ್ಜನ ದಿಟ್ಟತನನ ನಮ್ಮೊವು ಕೆಲೊವು ಕಡೆಗಣಿಸ್‌ತ್ತಿದ್ದೊ. ಗೌಡ್ರಿಗೂ ಇದ್ ಗೊತ್ತಿತ್ತ್. ಆದರೆ ಅವ್ವಂಗೆ, ಅಪ್ಪನ್ಹಂಗೆ ಇದ್ದ ಗೌಡ್ರಿಗೆ ಅವ್ವನ ಬಹುವಚನಂದ ಕರ್ಯಕೆ ಮನಸ್ ಬಾರದ್. ಅಂತ ಗೌಡ್ರಲ್ಲಿ ನನ್ನ ಸಂಕಟನ ಹೇಳಿ ಹೆಂಗಾರ್ ಪಾರ್‌ಮಾಡೋಕುಂತ ಕೇಳಕೇ ಅವ್ವ ತುಂಬಿ ಮನೆಗೆ ಬಂದದ್.

ಗೌಡ್ರು ಮೊಗಸಾಲೆಲಿ ಎಲಡಿಕೆ ಗುದ್ದುವ ಸದ್ದ್ ಕೇಳ್ತಿತ್ತ್. ಗಂಜಿ ಉಂಬ ಹೊತ್ತ್. ಮನೆ ಹೆಳ್ಮಕ್ಕ ಗಂಡಸರ್ ಎಲ್ಲೊವು ಗದ್ದೆ ಕೆಲ್ಸಕ್ಕೆ ಹೋಗಿದ್ದೊ. ಮನೇಲಿ ಇರುವೊವು ಮೊದುವೆ ಆಗಿ ಬಂದ ಹೊಸ್‌ಬಿ ಸೊಸೆಗ ಮಕ್ಕ ಮತ್ತೆ ಯೆಜ್‌ಮಾಂತಿ ಹುಗ್ಗವ್ವ. ಈ ಮನೆಯೊವ್ಕೆ ಎಲ್ಲಾ ನನ್ನ ಅವ್ವನ ಮೇಲೆ ಎಷ್ಟ್‌ಂತ ಹೇಳಕಾಗದ ಪ್ರೀತಿ ಇವ್ಕೆಲ್ಲಾ ನಯ-ನಾಜೋಕು, ಒಪ್ಪ-ಓರಣ ಕಲ್ಸಿದೊವ್ ನನ್ನ ಅವ್ವ. ಅವ್ವ ಇವ್ಕೆಲ್ಲಾ ಹಿರಿಯಕ್ಕ ಇದ್ದ ಹಾಂಗೆ. ಆದರೆ ನಮ್ಮ ಅವ್ವ ಇಲ್ಲಿಗೆ ಬಾದು ಇಲ್ಲೇ

ನಾರ್ ವಿಶೇಷ ಇದ್ದರೆ ಮಾತ್ರ. ಈ ಮನೇಲಿ ಯಾರಾರ್ ಹೆತ್ತರೆ ಒಮ್ಮೆ ಕೂಸುನ ನೋಡಿಕೆ, ಮತ್ತೊಮ್ಮೆ ತೊಟಗಿಲಿಗೆ ಹಾಕ್‌ಕನ ಜೋಗುಳ ಹೇಳಿಕೆ. ಅಲ್ಲಿ ಇಲ್ಲಿ ಗೂಡೆಗ ದೊಡ್ಡಿತಾಕನ ಅವ್ಕೆ ಮಡಕೆ ಹಿಡ್‌ಸುವ ದಿನ ಸೀರೆ ಸುತ್ತಿಸಿ-ತನ್ನ ಎಲ್ಲಾ ನಯ ನಾಜೋಕಿನ ಒಡವೆಗಳ ತಂದ್ ತೊಡ್ಸಿ ಗೂಡೆಗಳ ಸಿರಿ ಮೋರೆನ ಪೊರ್ಲರ್ ನೋಡಿಕೆ. ಈಗೀಗ ಗೌಡ್ರ ಮನೆಗೆ ವರ್ಷಕ್ಕೊಮ್ಮೆ ತಾವ ಇಡೀ ಕುಟುಂಬದ ಹೆಳ್ಮಕ್ಕಳ ಬಟ್ಟೆ ಬರೆಗಳ ಸೂಚಿಸುವವೂ ನನ್ನವ್ವನೇ. ಇಲ್ಲರೆ ಆ ಕಾಲದ ಗೌಡ್ರ ಮನೆ ಹೆಳ್ಮಕ್ಕಳಿಗೆ ಗುಳಿಗ ಸೀರೆ-ಗೂಡೆಗಳಿಗೆ ಕಿರಿಗೆ.

ಬೇಜಾರ್ಲೇ ಎದ್ದ್ ಬದ್ದಂಗೆ ಮನೆ ಮೆಟ್ಲ್ ಹತ್ತ್‌ವ ಅವ್ವನ ನೋಡಿ ಗೌಡ್ರು ಗುದ್ದಿ ಸಜ್ಜಾಗಿದ್ದ ಎಲಡಿಕೆ ಮುದ್ದೆನ ಬಾಯಿಗೆ ಹಾಕಿ ಹೇಳ್ದೊ “ಓ ಸೀತು...ಭಾಗ್ಯಲಕ್ಷ್ಮಿ-ಇದೇನ್ ಇಂದ್ ಅಪುರೂಪ ದರ್ಶನ”! ಗೌಡ್ರು ಸುರೂಗೆ ಅವ್ವನ ನೋಡ್ದ ದಿನನೇ ಅವು ಭಾಗ್ಯಲಕ್ಷ್ಮಿಂತ ಗುರ್ತಸಿದ್ದೊ. ಆದರೆ ಇ:ದ್‌ನ ಈ ಕಂಗಾಲ್ ಲಕ್ಷ್ಮಿ-ಸಾವು ಬದ್‌ಕ್‌ನ ಇಬ್ಬಂದಿಯಾಗಿ ಬಂದ ಅವ್ವ, ಗೌಡ್ರಿಗೆ ನನ್ನ ಸ್ಥಿತಿ ಗೊತ್ತಾಗಿ ಹಿಂಗೆ ಹಂಗ್‌ಸ್ತ ಒಳೊನೊ ಹೆಂಗೆಂತಾಗಿ ಜಗ್‌ಲಿ ಹತ್ತಿ ಬಿಕ್ಕಿ ಬಿಕ್ಕಿ ಮರ್ಡ್ತಾ ಮೂರ್ ನಾಕ್ ದಿನದ ಉಪಾಸ-ಜಾಗರಣೆಂದ ಇಸಯ ಹೇಳಿಕೆ ಮುಂದೆನೆ ಕಣ್‌ಕತ್ತಲೆ ಬಂದ್ ಗೋಡೆಗೊರ್‌ಗಿ ನಿಂತವು ಅಲ್ಲೆ ಕುಸ್ದ್ ಬಿದ್ದೊ. ಇದರ ಕಂಡ್ ಗೌಡ್ರು ಹೌಹಾರಿ ಬಾಗ್ಲ್ ಹಕ್ಕಲೆ ಓಡಿ ಹೆಣ್ಣ್‌ನ ಕರ್ದ್ “ಯೇನೆ ಯಿತ್ತ ಬಾ-ಬೇಗ ಬಾ-ಯಂತದೊ ಕೆಲ್ಸಕ್ಕೆ ಬಂದ ಸೀತು ತಲೆತಿರ್‌ಗಿ ಬಿದ್ದ್‌ಬುಟ್ಟ್‌ಟು. ನೀರ್ ತಾಂಬ ಎಲ್ಲ್ಯೊಳ ಬೇಗ ಬಾ” ಅಂತ ಗಡಬಡಿಸಿದೊ. ಅವ್ವನ ಅಯ್ಯೆ ನಂಗೆ ಕಾಂಬೊತಿದ್ದ ಹುಗ್ಗವ್ವ ನೀರ್ ತಂದ್ ಮೋರೆಗೆ ತಕ್‌ಳಿಸಿದೊ. ಎಚ್ಚರಾದ ನನ್ನವ್ವಂಗೆ ಅವಿಬ್ಬರ್ ಅಯ್ಯೆಪ್ಪನ್ನಂಗೆ ಕಂಡ್ ತನ್ನ ಸಂಕಟನ ಹೇಳಿಕೆ ಮಾತ್ ಬರದೇಗೊಳೋಂತ ಮರ್ಡ್‌ಕನ ಮನೆವರೆಲ್ಲಾ ದುಃಖಕ್ಕೆ ನೂಕಿದ್ದಂಗಾಗಿ ಮನೆ ಮಕ್ಕ ಸಂಗತಿ ಎಂತಾತ ಗೊತ್ತಿಲ್ಲದ್ದರೂ ಮರ್ಡಿಕೆ ಸುರುಮಾಡ್ದೊ. ಕೂಡು ಕುಟುಂಬದ ಹೊರೆ ಹೊತ್ತ ಬದ್‌ಕ್‌ಲಿ ಬಾವ ಸುಖ ದುಃಖಗಳ ಅನುಭವಸ್ಥ ಆ ತಿಳುವಳಿಕಸ್ಥ ಗೌಡ ಗೌಡ್ತಿಗೆ “ಗೂಡೆಗೆ ನಿವಾರ್ಣೆ ಆಗದ ಏನೋ ಕಷ್ಟ ಬಂದುಟುಂ”ತ ಅರ್ಥ ಆಗಿ ಸಮ್‌ದಾನ ಮಾಡ್‌ಕತ ಸೋ:ತ ಅವ್ವಂಗೆ “ನಿನ್ನನ ಸೋ:ಲಿಕೆ ಬುಡಿಕಿಲ್ಲೆಂ”ತ ನಂಬಿಕೆ ಬರುವಂಗೆ ಗೌಡ್ರು, “ಯಾರ್ ಸತ್ತೊಳೊಂತ ನೀ ಮರ್ಡ್‌ದು? ನಿಮ್ಮಲ್ಲಿ ಇರುವೊವು ನೀವಿಬ್ಬರ್. ನಿನ್ನ ಗಂಡನ ನಿನ್ನೆ ನಾ ಪೇಟೆಲಿ ಕಂಡೆ, ಕಲ್ಲಿಗೆ ಸಂದ್ ಹಾಕ್‌ವಂಗಿತ್ತ್. ಇಲ್ಲಿ ನಾ ಏನ್ ಸತ್ತತಿಲೆಲೆ. ಬಂಡೆ ಹಂಗೆ ಒಳೆ. ಇಸಯ ಎನ್ ಹೇಳ್”ಂತ ಕೇಳ್‌ಕಾಕನ ಗೌಡ್ರು “ನಾ ಏನ್ ಸತ್ತತಿಲೆಲೆ”ಂತ ಹೇಳ್ದ ಮಾತ್” “ಈಗ ಈ ಊರ್‌ಲಿ ನಿಂಗೆ ಏನ್ ಕಷ್ಟ ಬಂದರೂ ಅದರ್‌ಂದ ಪಾರ್ ಮಾಡ್ವ ಸಕ್ತಿ ನನ್ನಲ್ಲಿ ಉಟ್ಟು”ಂತ ಹೇಳ್ವ ಧಾಟಿ-ಗೌಡ್ರು ನುಡ್ದಂಗೆ ನಡೆವ ಗಟ್ಟಿಗನೇಂತ ಗೊತ್ತಿದ್ದ ಅವ್ವ ಅವ್ರ ಕಾಲಿಗ ಬೀಳಿಕೆ ಮುಂದೆ ಬಾಕನ ಗೌಡ್ರು “ಬೇಡವ್ವ, ಇದ್ ನಂಗೆ ಶಾಪ-ನೀ ನಾವುಗೆಲ್ಲೊವುಕು ಭಾಗ್ಯಲಕ್ಷ್ಮಿ ಇದ್ದಂಗೆಂತ ನಾವು ತಿಳ್‌ಕಂಡೊವು. ನಿಂಗೆ ಈಗ ಎಂತಾಕು ಹೇಳ್-ನಾ ಅದನ್ನ ಮಾಡಿಕೊಟ್ನೆ”ಂತ ಹೇಳ್‌ಕನ ಅವ್ವ ಇಸಯನ ಎಲ್ಲ ವಿವರಿಸ್ದೊ. ವಾರಂಟ್ ತನಿಕೆಗೆ ಇನ್ ಇರ್ದು ಒಂದೇ ದಿನ. ನಾಳ್‌ದ್ ಅವರ ಸಾಲಕ್ಕೆ ತಕ್ಕ ಜಾಮೀನ್ ಜವಾಬ್‌ದಾರಿ ಕೊಡದ್ದರೆ ಅವ್ಕೆ ರಿಮಾಂಡ್‌ಂತ ಹೇಳ್‌ದ್ ಕೇಳಿ ಇಸಯದ ಗಾಢತೆನ ತಿಳ್‌ದ್ ಒಮ್ಮೆ ತಲೆನ ಆಡ್‌ಸಿ ಹೇಳ್ದೊ. ಎರ್ಡ್ ಸಾವ್ರ ರೂಪಾಯಿ ಯವಹಾರ, ಅಷ್ಟ್ ಹಣ ತುಂಬಿ ಮನೆಲಿ ಇರ್ದು. ಆದರೆ ಅದ್ ಇಡೀ ಕೂಡು ಕುಟುಂಬದ ಬದ್‌ಕ್. ನಿನ್ನ ಗಂಡನ ಹಕ್ಕಲೆ ಸೆರಿ ಇಲ್ಲದೊವು ನಮ್ಮ ಮನೆಲಿ ಇರಿಕೆ ಸಾಕ್. ಕೋಳಿ ಕಟ್ಟಲೋ, ಕಂಬಳಲೋ ನಮ್ಮೊವ್ವ ಅನ್ಯಾಯ ಮಾಡಿಟ್ಟುಂತ ಆ ಹಣನ ತೆಗ್‌ದರೆ ಅಂತೊವು ಹಿಂದೆಂದಾರೂ ನಾನ ಪಿರಿ ಪಿರಿ ಹೇಳದಿರ್ಕಿಲ್ಲೆ. ನೀ ಯೇನ್ ಹೆದ್‌ರ್‌ಬಡಾ. ಅಷ್ಟ್ ಹಣಕ್ಕೆ ನಾ ನಿನ್ನ ಗಂಡಂಗೆ ಕೋರ್ಟ್‌ಲಿ ಜಾಮೀನ್ ನಿಂತ್ ಬುಡ್ಸಿತಾವೆ. ಇಲ್ಲರೆ ಹಣಾರೂ ಕಟ್ಟಿ ಬಾವೆ. ನೀ ಒಳಗೆ ಹೋಗಿ ನಿನ್ನ ಅವ್ವ ಇಕ್ಕ್‌ವ ಹುಗ್ಗಿ ಉಂಡ್ ಕುಷಿಲಿ ಇಲ್ಲಿಂದ ಹೋಗುಬಲಾ”ಂತ ಹೇಳ್ದೇ ಸರಿ ತುಂಬಿ ಮನೆ ಹೆಳ್ಮಕ್ಕಳ ಮುಗುಳ್ನಗೆಂದ ತುಂಬಿಹೊತ್. ಮರ್ಕಂಡ್ ಬಂದ ಅವ್ವ ಧೈರ್ಯ ಸಂತೋಸಂದ ತುಂಬಿ ಮನೆಂದ ಹೊರ್‌ಟೊ.

ಮಾರ್ನೇದಿನ ಗೌಡ್ರು ನಮ್ಮೂರ ನಂಬುಗೆನ ರಾಮು ಮೊಡಿವಾಳನ ಕರ್ಕಂಡ್ ಪುತ್ತೂರಿಗೆ ಹೋದೊಂತ ಆತ್. ಅವ್ವ ಧೈರ್ಯ ಸಂತೋಸಂದ ಮನೆಗೆ ಬಂದಿದ್ದರೆ “ವಾರೆಂಟ್ ತಂದ ಪೇದೆನ ಕಣ್ಣಿಗೆ ಬಿದ್ದರೆ ನಂಗೇ ಜೈಲೇ ಗತಿ”ಂತ ಗೊತ್ತಿದ್ದ ನನ್ನ ಅಪ್ಪನ ಪತ್ತೆನೇ ಇಲ್ಲೆ. ಪುತ್ತೂರಿಗೆ ಹೊರ್ಟ ಗೌಡ್ರು ಅವರ ತಮ್ಮನೊಟ್ಟಿಗೆ ನಮ್ಮ ಮನೆಗೆ ಬಾಕನ ಅವರ ಮೊಳ ಉದ್ದ ಅಗಲದ ಕಟ್ಟಾಣಿ ಚೀಲ-ಅದರ ಹೊತ್ತ ತಮ್ಮನ ಹೆಗ್ಲೇ ಮುರ್‌ದ್ ಹೋದಷ್ಟ್ ಭಾರ. ಅದೇನ್‌ಂತ ಕೇಳ್‌ವ ಧೈರ್ಯ ಯಾರಿಗುಟ್ಟು? ಆ ಕಟ್ಟಾಳ್ ಗಿರಿಜಾ ಮೀಸೆನ ಕಂಬ್ ಕಟ್ಟಿದ ಆಳುದ್ದದ ಜೆತ್ತ ಹಿಡ್‌ದ್ ನಡೆವ ಊರ ಗೌಡನೊಟ್ಟಿಗೆ! ಅದರ

ಪುತ್ತೂರ್‌ವರೆಗೆ ಹೊತ್ತ್‌ಕಂಡ್ ನಡ್ಕಂಡ್ ಹೋಕ
ಲ್ಲಾಂತ ಇದ್ದ ರಾಮು ನೊಡಿವಾಳನ ಮೋರೆ ನೋಡಿಯೆ
ಅದರ್ಲ್ಲಿ ಇದ್ದು ಏನ್‌ಂತ ಗ್ರಹಿಸೋಕ್ ಅಪ್ಪೇ! ಗೌಡ್ರು
ನನ್ನ ಅವ್ವನ ಕರ್ದ್ದ "ಅವನ ಕರ್ಕಂಡ್ ಬನ್ನೆ. ಇನ್ನ್
ಮುಂದೆ ಇಂತ ಪೀಕಲಾಟಲಿ ಆಂವ ಸಿಕ್ಕಬಿದ್ದರೆ ನಂದೇ
ನೂ ಬತ್ತ್. ಈ ಜಾಮೀನ್ ಹಣಾನ ಸಮೆಕ್ಕೆ ಸರ್ರ್ಯಾಗಿ
ತೀರ್‌ಸುವ ಭಾರ ನಿಂದ್. ಗೇನ ಇಟ್ಕ್ಕಾ"ಂತ ಮನೆ
ದೇವ್ರಿಗೆ ಕೈ ಮುಗ್‌ದ್ ಕಟ್ಟಾಣಿ ಚೀಲ ಹೊತ್ತ ಕೆಲ್ಸದ
ಹೈದನೊಟ್ಟಿಗೆ ಪುತ್ತೂರತ್ತ ಹಜ್ಜೆ ಹಾಕಿದೊ.

ಮಾರ್ನೆ ದಿನ ತುಂಬಿದ ಚೀಲದೊಟ್ಟಿಗೆ ಗೌಡ್ರು
ಆಳ್ ಮಂಜನೊಟ್ಟಿಗೆ ಬೊಳ್ಪ್ಪ ಹನ್ನೊಂದು ಗಂಟೆಗೆ
ಕೋರ್ಟ್‌ಲಿ ಹಾಜರಾಗಿ ಅಪ್ಪನ ವಕೀಲರತ್ತ ನಾನ್
ಜಾಮೀನ್ ನಿಲ್ಲಿಕೆ ಬಂದದ್‌ಂತ ಹೇಳಿ ಕೋರ್ಟ್‌ನ ಮೂ
ಲೆಲಿ ಕುಕ್ಕರ ಕುದ್ದೊ. ಆದರೆ ಪ್ರತಿವಾದಿ ನಮ್ಮ ಅಪ್ಪ
ಎಲ್ಲ್ಯೋಳೊಂತೆನೇ ಗೊತ್ತಿಲ್ಲೆ. ಕೋರ್ಟ್ ಸುರು ಆತ್.
ನ್ಯಾಯವೇದಿಕೆಲಿ ಕುದ್ದ ನ್ಯಾಯಮೂರ್ತಿಗ ಧವಾಲಿ
ಧರಿಸಿದ್ದ ಪೇದೆಗೆ ಪ್ರತಿವಾದಿನ ಹೆಸ್ರ್ ಹಿಡ್ದ್ ಕೂಗಿ
ಕರ್ರ್ಯಕೆ ಹೇಳ್ದೊ. ಪೇದೆನ ಕೂಗಿಗೆ ಪ್ರತಿವಾದಿನ ಉತ್ತರ
ಇಲ್ಲೆ. ವಕೀಲರ್ ಈ ಸಲ ವ್ಯಾದೆ ಕೊಡೋಕುಂತ ಕೇಳಿ
ಕೊಂಡೊ. ಆಂಗ್ಲ ಕಾನೂನ್‌ನ ಕಟ್ಟಾಪಾಲಕ ನ್ಯಾಯ
ಮೂರ್ತಿ ಒಪ್ಪಿತ್ಲೆ. ಸರ್ರ್ಯಾದ ಜಾಮೀನ್‌ನ ಅಲ್ಲರೆ ವ್ಯಾದೆಗೆ
ತಾನ್ ಹೇಳ್ದ ಐವೇಜ್‌ನ ಕಟ್ಟೋಕ್‌ಂತ ಹೇಳ್‌ದ್
ಕೇಳಿ, ಅಲ್ಲೇ ಇದ್ದ ಗೌಡ್ರು ನಾ ಜಾಮೀನ್ ನಿಲ್ಲಿಕೆ
ಬಂದದ್‌ಂತ ಮುಂದೆ ಬಂದೊ. ಇವರ ಬೋರ ವೇಷನ
ನೋಡಿ ಕೋರ್ಟ್‌ನ ಮೆಜಿಸ್ಟ್ರೇಟರ ಹತ್ತ್ರದ ಗುಮಾಸ್ತ
'ನ್ಯಾಯಮೂರ್ತಿಯೇ, ಇದೊಂದ್ ಹಳ್ಳಿ ಪೆದ್ದ ಗೌ
ಡನ ಯಾರೋ ಪುಸ್‌ಲಾಯ್ಸಿ ಜಾಮೀನ್‌ಗೆ ಕಳ್‌ಸಿದ್.
ಇದ್ ಮುದ್ದಿಗೂ ಆಗದ ಶುದ್ಧ ಕ್ಯಾ ಬೇಡದ ಹಸ್‌ಕರ್‌ನ
ಸಗಣಿ"ಂತ ಸಸಾರಂದ ಹೇಳ್ತ್. ಒಳಗೆ ಬಂದ ಗೌಡ್ರುನ,
ಪೇದೆ ಕಟಕಟೆಗೆ ಹತ್ತಿಸಿ ಪ್ರಮಾಣ ವಚನಾಗಿ ಹೇಳ್ ಈ
ಮೊಕದ್ದಮೆಗೆ ಜಾಮೀನ್ ನಿಲ್ಲ್ಪೂವನ ಯೋಗ್ಯತೆ
ಎಂತದ್, ಆಂವ ಎಷ್ಟ್ ತೀರ್ವೆ ಕಟ್ಟುಕುಂತ ನಿಂಗೆ
ಗೊತ್ತ್ಯುಟ್ಟ್ಯಂತ ಗುಮಾಸ್ತ ಕೇಳಿಕನ ಇಷ್ಟರೊಳಗೆ
ಮೂಲೆಲಿ ಮುದ್ರ್ ಕೊಕ್ಕರ ಕುದ್ದಿದ್ದ ಗೌಡ್ರು ಎದ್ದ್
ನಿಂತ್ ಕೆಲ್‌ಸ ಇಲ್ಲದ ಹೊತ್ತ್‌ನ ಅಬ್ಬೆ ಸ
ಪ್ಪಂಗೆ ಅವರ ಗಿರಿಜಾ ಮೀಸೆನೊಮ್ಮೆ ತೀಡಿ ಮಾತಾ
ಡಿಕೆ ಬಾಯಿ ತೆರೆಯುಕನ ಸಿಟ್ಟ್‌ಂದ ಗುಮಾಸ್ತ ಗು
ಡ್‌ಗಿತ್. 'ಕ್ರಮ ಗೊತ್ತಿಲ್ಲನ ಹಳ್ಳಿ ಹುಂಬ ನ್ಯಾ
ಯಾಲಯದಲಿ ಮೀಸೆಗೆ ಕೈ ಹಾಕಿ ಮಾತಾಡಿಕಾಗ
ದ್'ಂತ ನಿಂಗೆ ಗೊತ್ತಿಲ್ಲೆನಾಂತ? ಗೌಡ್ರು
ಹೇಳ್ದೊ. 'ನಾ ಬೇರೆ ಯಾರ ಮೀಸೆಗೂ ಕೈ ಹಾ
ಕಿತ್ಲೆ. ಕಟಕಟೆಲಿ ನಿಂತವನೊಟ್ಟಿಗೆ ನೀವ್ ಪ್ರಶ್ನೆ
ಕೇಳ್ತರಿ. ಅದ್ಕೆ ಉತ್ತರ್ಸಿಕೆ ಹೊರ್ಡಿಕನ ನನ್ನ ಮುಕದ
ಮೀಸೆಗೆ ಕೈ ಹಾಕಿರುವೆ. ಇದ್ ಕಾನೂನಿಗೆ ಇ
ರೋದಾಂತ ನಂಗೆ ಗೊತ್ತಿಲ್ಲಾಗಿತ್ತ್. ನಂಗೆ ಮೀಸೆನ
ಮೇಲೆ ಕೈ ಹಾಕದೆ ಮಾತಾಡಿಕೆ ಆದುಲ್ಲೆ. ಹಂಗೆ
ಮಾತಾಡಿಕಾಗದ್‌ಂತ ಯಾವ ಕಾನೂನು ಹೇಳ್ದ್?
ಅಂತ ಇನ್ನೊನ್ಮೆ ಗಿರಿಜಾ ಮೀಸೆನ ತೀಡಿಕಂಡೊ. ನ್ಯಾ
ಯಾಧೀಶರ್, ಗೂಮಾಸ್ತನೂ ಗೌಡ್ರುನ ಕೆಕ್ಕರಿಸಿ ನೋ
ಡ್ರೆ ಅವ್ ಕಟ್ಟಾಣಿ ಚೀಲ ಹಿಡ್ಕಂಡಿದ್ದ ರಾಮುನ್ನೊನ್ಮೆ
ನೋಡಿ, ಮೀಸೆಗೆ ಕೈ ಹಾಕಿ ಉತ್ತರಿಸಿಕೆ ಸಾಧ್ಯ ಇಲ್ಲಂ
ತಾ ಕಾನೂನಿದ್ದರೆ ಇವರ ಬೆಲೆ ಐದ್ ಸಾವ್ರ ನನ್ನ ಕ
ಟ್ಟಾಣಿ ಚೀಲಲಿ ಉಟ್ಟೊಂತೇಳ್ವ ಗತ್ತ್‌ಲಿ, ನಿಮ್ಮ
ಜೊಳ್ಳ್ ಕಾನೂನಿಗೆ ನಾ ಹೆದ್‌ರುವಂವ ಅಲ್ಲಾಂತ ಹೇ
ಳ್ವಂಗೆ ಎದೆ ಸಟೆಸಿ ನಿಂತೊ.

ಈಗ ಈ ಗೌಡನ ಬೊಗ್ಗ್ ಬೊಡ್ಸಿನೆಂತ ಹೇಳ್
ವ್ಹಂಗೆ ನ್ಯಾಯಾಧೀಶರ್ ಗುಮಾಸ್ತನ ಮುಕ ನೊಡ್ದೊ.
ಆ ಮೇಲೆ ಗೌಡ್ರುಗೆ ನಿಮ್ಮ ಇಷ್ಟ ಬಂದ್ಹಂಗೆ ಮಾತಾಡ
ಕ್ಸ್‌ಂತ ಹೇಳ್ದೊ. ಈ ಗಮಾರ ಗೌಡನ ನೀರ್ ಇಳ್ಸೊ
ಕೋಂತ ಮನ್ಸೊಳ್ಗೇ ಕುದ್ದವು ಹೀಂಗೆ ಹೇಳ್ದೊ, ಗೌಡ್ರೇ
ಇದ್‌ಕ್ಕೆ ಜಾಮೀನ್ ನಿಲ್ಲ್ವಂವ ನೂರ್ ರೂಪ್ಯಾ
ತೀರ್ವೆ ಕೊಡ್‌ವ ಕುಳ ಆಗಿರೋಕು "ನೀವು ಎಷ್ಟ್ ರೂ
ಪ್ಯಾ ತೀರ್ವೆ ತೆರ್‌ವ ಜಮೀಂದಾರ್‌ಂತ ತಿಳ್‌ಸುವ್ಹಂಗೆ
ಕೋರ್ಟ್ ಕೇಳ್ತಾ ಉಟ್ಟುಂತೇಳಿ ವ್ಯಂಗ್ಯಂದ ಕೇಳ್‌ಕಾಕ
ನ ಮೀಸೆ ಮೇಲೊಮ್ಮೆ ಕೈಯಾಡ್ಸಿದ ಗೌಡ್ರು ಆಲೋಚ
ನೆ ಮಾಡ್‌ವಂಗೆ ನಟಿಸಿ ಹಂಗಿಸಿಕೆ ಕೇಳ್ದೊ" ಖಾವಂದರ್
ಹೇಳೋಕು-ಇದ್‌ಕ್ಕೆ ಜಾಮೀನ್ ನಿಲ್ಲ್ವಂವ ಎಷ್ಟ್
ತೀರ್ವೆ ಕೊಡೋಕು? ಅಷ್ಟೇ ವ್ಯಂಗ್ಯದ ನೆಗೆಲಿ ಸವಾ
ಲಿಗೆ ಸವಾಲೇ ಕೇಳ್ದ ಗೌಡ್ರ ಮಾತ್‌ನ ರೀತಿ, ಅದ
ರ್ಲಿದ್ದ ಆಣಕ-ಇದ್ಯಾವುದರ ಗ್ಯಾನ ಮಾಡದ ನ್ಯಾಯಾ
ಧೀಶರ ಬಿಳಿ ಮುಕ ಕೆಂಪಾತ್. ಸೇರಿಗೆ ಸವ್ವಾ ಸೇರಾ
ಗ್‌ವ ಬಯಕೆ ಇದ್ದ ಗೌಡ್ರ ಮೋರೆ-ಹುಲಿಗೆ ರೂಪು
ರೂಪು ಗುಂಡು ಹೊಡ್‌ದ್ ಉರ್ಳ್‌ಸ್‌ವ ನಾನ್ ಈ ಮಂಗ
ಮುಸುಂಡಿಗೆ ಮಣಿವಂವ ಅಲ್ಲಾಂತ ನ್ಯಾಯಾಧೀಶರ ಮು
ಕದತ್ತ ಟಕಮುಕ ನೋಡಿಕೆ ಸುರು ಮಾಡ್ದೊ ನೂರ್
ರೂಪ್ಯಾ ತೀರ್ವೆ ಕೊಡುದ್ಹೋಗಿ ನೂರ್ ರೂಪ್ಯಾ ಆದಾ
ಯನೂ ಇರಿಕ್ಕಿಲ್ಲೆ ಈ ಗೌಡಂಗೆತ ನೆಂದಿದ್ದ ನ್ಯಾಯಾ
ಧೀಶರ್ ಕೋಪಂದ ಈ ಗೌಡನ ಕಟಕಟೆಂದ[illegible]
ನಡಿ'ಂತ ಹೇಳಿಕುಟ್ಟ್ಯಂತ ನನ್ನಪ್ಪನ ಎದ್‌ರ್ ವಾದಿಗ

ಹಿಗ್ಗಿ ಹಿರೇಕಾಯಿ ಆದೊ. ಕೋರ್ಟ್‌ಲಿದ್ದ ಜೆನಗ, ವಕೀಲರ್‌ಗ ಗೌಡ್ರ ಎದೆಗಾರಿಕೆನ ಮೆಚ್ಚಿ ಈ ಪೊಟ್ಟುಮಿಡಿ ಹೆಗ್ಗಳ್ಕೆನ ನ್ಯಾಯಾಧೀಶಂಗೆ ಹಳ್ಳಿ ಬೊರೇಗೌಡಂದ ಆಗ್‌ವ ಮಂಗಳಾರತಿಲಿ ಪಾಲ್ ತೆಕಣಿಕೆ ಉತ್ಸಾಹಂದ ಒಮ್ಮೆ ಗೌಡ್ರ, ಒಮ್ಮೆ ನ್ಯಾಯಾಧೀಶರ ನೋಡ್ತಾ ಇದ್ದೊ.

ಮೆಜಿಸ್ಟ್ರೇಟರ್ ಕೋರ್ಟ್ ನಡ್ಗವ್ಹಂಗೆ ಗುಡುಗಿದೊ 'ಇಲ್ಲಿ ಜಾಮೀನ್ ನಿಲ್ಲಿಕೆ ನೂರು ರೂಪ್ಯಾ ಮಿಕ್ಕಿದ ತೀರ್ವೆದಾರ ಆಗಿರೋಕು, ನೀ ಎಷ್ಟ್ ಆಷ ತೀರ್ವೆ ತೆರ್‌ವ ಜಮೀಂದಾರ? ಗೌಡ್ರು ಸಮಾದಾನಂದ ಹೇಳ್ದೊ- "ತಮ್ಗೆ ಸರ್‍ಯಾದ ಲೆಕ್ಕ ಕೊಟ್ಟ್ ಸರ್ಕಾರಕ್ಕೆ ನಾ ಎಷ್ಟ್ ತೀರ್ವೆ ಕೊಟ್ಟನೇಂತ ಹೇಳೋಕಾರೆ ತಾವು ದಯಮಾಡಿ ತಾಲೂಕಿಂದ ಆರ್ವ ಜಾರ್ವ ರಿಜಿಸ್ತ್ರಿ ತಂದ್ ನೋಡಿ. ಆದರೆ ನಾ ತೀರ್ವೆನ ಸುರುನ ಕಂತಿಗೇ ನೂರು ರೂಪ್ಯಾಗಿಂತ ಹೆಚ್ಚ್ ಮೊನ್ನೆ ಅಷ್ಟೇ ಕಟ್ಟಿದ ನೆಂಪು'ಂತ ಹೇಳಕನ ನ್ಯಾಯಾಧೀಶರ ಪಾಡ್ ಕೊಂಬ್ ತುಂಡಾದ ಕೊಂಬಚ್ಚೇಳ್. ಕೂಡ್ಲೇ ಸಿಟ್ಟ್‌ಂದ ಕಿಡಿಕಿಡಿ ಆಗಿ "ನಾ ಇಲ್ಲಿ ಬಂದದ್ ನಿನ್ನ ದೊಡ್ಡಸ್ತಿಗೆ ನೋಡಿಕೆ ಅಲ್ಲ. ನಿನ್ನ ಆರ್ವ-ಜಾರ್ವ ರಿಜಿಸ್ತ್ರಿ ನೋಡ್‌ವ ಸಮೆನೂ ಇದಲ್ಲ. ನೀ ನೂರ್ ರೂಪ್ಯಾ ತೀರ್ವೆ ಕಟ್ಟಿಯಂತ ಹೇಳ್‌ವ ನಿನ್ನ ಬಾಯ್ದರೆ ಮಾತ್‌ನ ನಂಬಿ ನಿನ್ನ ಜಾಮೀನ್ ತೆಕಣಿಕೆ ಸಾಧ್ಯ ಇಲ್ಲೆ. ಸಾಲದ ಒಂದಂಶ ಆದರೂ ಕಟ್ಟಿ ಜಾಮೀನ್ ನಿಲ್ಲಿಕೆ ಸಾಧ್ಯ ಉಟ್ಟೋ ಹೇಳ್'ಂತ ಗುಡ್‌ಗಿದೊ.

ಅರೆಕೈಯ ಮಾಸಿದ ಕೋಟು ಮೊಳಕಾಲ್ ಕಾಂಬ ಮುಂಡುಟ್ಟ್ ಬೈರಾಸ್ ತಲೆ ಸುತ್ತಿದ್ದ ಈ ಗೌಡ ಊರ್‌ಲಿ ಕೂಡುಕುಟುಂಬದ ಯೆಜ್‌ಮಾನ ಆಗಿದ್ದ್ ನೂರ್ ರೂಪ್ಯಾ ತೀರ್ವೆ ಕಟ್ಟ್‌ವ ಭೂಮಿನೂ ಇರಿಕೆ ಸಾಕ್. ಆದರೆ ನಗದ್ ಹಣ ಇವನ ಹಕ್ಕಲೆ ಈಗ ಹತ್ತ್ ರೂಪ್ಯಾನೂ ಇರಿಕಿಲ್ಲೆ''ಂತ ಘನತೆನ ದಿರುಸಿಂದ ಅಳೆಯಕೆ ಹೊರ್‌ಟ ನ್ಯಾಯಾಧೀಶರ ಆರ್ಭಟೆನ ಅರ್ಥ.

ಗೌಡ್ರು ಹೇಳ್ದೊ ಆ ಆರ್ಭಟೆ ಲೆಕ್ಕಕ್ಕೇ ಬಾರದವರ್ಹಂಗೆ. "ಸ್ವಾಮಿದರ್ ನನ್ನಲ್ಲಿ ಎಷ್ಟ್ ಹಣ ಉಟ್ಟೂಂತ ಕೇಳ್‌ದರಿ. ಹಳ್ಳಿ ಬಡ ಗೌಡ ನಾ, ನಂಗೆ ಲೆಕ್ಕ ಪಕ್ಕ ಎಲ್ಲ ಗೊತ್ತಿಲ್ದೆ ಹೀಂಗೆ ಮಾತಾಡ್ನೆಂತ ನೀವ್ ಗೆ ತಿಳ್ತ್‌ಲೆ-ನಂಗೆ ಲೆಕ್ಕ ಗೊತ್ತಿಲೆ. ಆದರೂ ನಿಮಿಗೆ ಉತ್ತರ ಹೇಳೋಕಲ್ಲಾ ? ಸನ್ನಿಧಾನ ಇಲ್ಲಿಂದ ಎದ್ದ್ ಪುತ್ತೂರ್ ತಾಲೋಕ್‌ನ ಬಂಟ್ರ ಗ್ರಾಮದ ನನ್ನ ತುಂಬಿ ಮನೆವರೆಗೆ ನಡ್‌ದ್ ಬಾವ ದೊಡ್ಡ ಮೊನ್ನೆ ಮಾಡ್ರೆ ನನ್ನ ಹೆಣ್ಣ್ ತುಪ್ಪ ಮಾರಿ ಜೋಪಾನ ಮಾಡಿಟ್ಟ ಬೆಳ್ಳಿ ರೂಪ್ಯಾನ ಪಾವುಡೆ ಮೇಲೆ ನಿಮ್ಮನ ಇಲ್ಲಿಂದ ಅಲ್ಲಿವರೆಗೆ ನಡ್‌ಸಿಕೊಂಡ್ ಹೋವಷ್ಟ್ ಹಣ ಉಟ್ಟು''ಂತ ಹೇಳ್ದೇ ತಡ ತುಂಬಿದ್ದ ನ್ಯಾಯಾಲಯ-ನ್ಯಾಯಾಲಯದ ಶಿಷ್ಟ ಸಂಪ್ರದಾಯಗಳ ಮರ್ತ್ ಗೊಳ್‌ಂತ ನೆಗಾಡಿಕನ ದವಾಲಿ ಪೇದೆ ಸದ್ದ್-ಸದ್ದ್‌ಂತ ಎಚ್ಚರ್ಸಿತ್. ನ್ಯಾಯವಾದಿಗಳೇ ಕೆನ್ನೆ ಒಡ್‌ಕಬ್ಹಂಗೆ ಆತ್. ನ್ಯಾಯಾಧೀಶರ್ ಈಗ ಚಾಟಿ ಏಟ್ ತಿಂದ ಕಾಡ್ ಕುದ್ರೆನ್ಹಂಗೆ ಚಡಪಡ್ಸದರ ಕಂಡ – ಹಿರಿಯ ನ್ಯಾಯವಾದಿ – ಗೌಡ ಸಮಾಜದ ಉದ್ಧಾರ ಕರ್ತ ಮೊಳಹಳ್ಳಿ ಶಿವರಾಯರ್– ಈ ಇಸಯನ ಮುಂದುವರ್ಸಿರೆ ಈ ಗೌಡ ಬಗ್ಗುವ ಆಸಾಮಿನೇ ಅಲ್ಲಾಂತ ನ್ಯಾಯಾಧೀಶರ ಕೆಬಿಲಿ ಪಿಸುಗುಟ್ಟಿ ಗೌಡ್ರ ಜಾಮೀನಿಂದ ನನ್ನ ಹಿರಿಯೊವರ ಬಿಡ್‌ಗಡೆಗೆ ಅಪ್ಪಣೆ ಕೊಡ್ದೊಳ್ಳದ್‌ಂತ ಹೇಳ್ದೊ. ನ್ಯಾಯಾಧೀಶರ್ ಹಂಗೆ ಶೀಪ್ ಕೊಟ್ಟೊ. ಚಾಟಿ ಪೆಟ್ಟ್ ತಿಂದ್ ಹಜ್ಜೆ ಗೊತ್ತಿದ್ದ ಕುದ್ರೆನ್ಹಂಗೆ ಅವು ವಿಶ್ರಾಂತಿ ಕೋಣೆಗೆ ವಕೀಲ ಶಿವರಾಯರೊಟ್ಟಿಗೆ ಹೋದೊ ಒಳಗೆ ಹೋದ. ಮೊಳಹಳ್ಳಿಯೊವು ಏನ್ ಹೇಳ್ದೋ ಏನೋ. ಗಂಟ್‌ನೊಟ್ಟಿಗೆ ಆಳ್‌ನ ಜೊತೆಲಿ ಹೊರಗೆ ಹೊರ್‌ಟದ್ದ ಗೌಡ್ರ – ಕೋರ್ಟ್‌ನ ಪೇದೆ "ನಿಮ್ಮನ ನ್ಯಾಯಾಧೀಶರ್ ಅವರ ವಿಶ್ರಾಂತಿ ಕೋಣೆಗೆ ಕರ್ದವೆ''ಂತೇಳ್ತ್. 'ಸರಿ'ಂತ ಗೌಡ್ರು ಕಟ್ಟಾಣಿ ಚೀಲ ಸಮೇತ ಒಳಗೆ ಬಂದ್ ಇನ್ನೊಮ್ಮೆ ನ್ಯಾಯಾಧೀಶರಿಗೆ ನಮಸ್ಕಾರ ಮಾಡಿಕೆಂತ ಚೀಲನ ಕೆಳ್ಗೆ ಇಸಿಕನ ಜಲ್ಲಂತಾದ ಶಬ್ಧನ ಕೇಳಿ " ಇದೆಂತ? "ಂತ ಕೇಳ್ದೊ ಮ್ಯಾಜಿಸ್ಟ್ರೇಟರ್. ಗೌಡ್ರು "ನನ್ನ ಮಗಳಿಗೊಬ್ಬಳಿಗೆ ನಿನ್ನ ಮಾಂಗಲ್ಯನೂ, ನಿನ್ನ ಜೀವನನೂ ಉಳ್ಸಿ ಕೊಟ್ಟೆನೆಂತ ಭಾಷೆ ಕೊಟ್ಟ್ ಬಂದೊಳೆ, ಕಾನೂನ್ ಕತ್ತ್ರೆಂತ ನಂಗೆ ಕೇಳಿ ಗೊತ್ತುಟ್ಟು. ಅದ್‌ಕ್ಕೆ ಕಾನೂನು ನನ್ನ ಜಾಮೀನ್ ಒಪ್ಪದಿದ್ದರೆ ಆ ಸಾಲ ಐದ್ ಸಾವ್ರನ ಕಟ್ಟಿ ಹೋನೆಂತ ತಂದ ಐದ್ ಸಾವ್ರ ಚಿಲ್ಲರೆ ರೂಪ್ಯಾನ ಗಂಟೆದ್." ಈಗ ನ್ಯಾಯಾಧೀಶರ್ ಇನ್ನೊಮ್ಮೆ ಮೂಕು ಮೇಲೆ ಬೆರಳಿಟ್ಟೊ. ಮತ್ತೆ ಹೇಳ್ದೊ ಗೌಡ್ರೇ- ಯಾವ ಹುತ್ತಲಿ ಯಾವ ಹಾವೋ ? ಗೊತ್ತಿದ್ದೊವು ಯಾರೂ ಇಲ್ಲೆಂತ ಹೇಳ್‌ವ ಪಾಠನ ನಂಗೆ ಕಲ್‌ಸಿದರಿ. ನಿಮ್ಮಂದ ಸಣ್ಣವ ಆದ ನಾನ್ ಆಸರ್‌ಂದ ಎಚ್ಚರಗೊಂಡೊಳೆ. – ನಾನ್ ಹಂಜ ಕಟುವಾಗಿ ಮಾತಾಡ್ದೆ. ಅದನ್ನ ಕ್ಷಮಿಸಿ ನೀವ್ ನನ್ನೊಟ್ಟಿಗ ಈಗ ಹಂಜ ಫಲಹಾರ ತೆಕಂಡ್ ಆಶೀರ್ವಾದ ಮಾಡೋಕೂಂತ ಕೈ ಮುಗಿಯಕನ ಗೌಡ್ರು ಹೇಳ್ದೊ ಆಗಲಿ ತಮ್ಮೊಟ್ಟಿಗೆ ಈ ಹಳ್ಳಿ ಗೌಡ ಫಲಹಾರಲಿ ಒಟ್ಟಿಗೆ ಕುದ್ದ್ ತೆಕಂಡರೆ ಅದ್ ನನ್ನ ಪುಣ್ಯ. ಆದರೆ

ನಂದೊಂದು ಕೇಳಿಕೆನ ಒಪ್ಪುದಾದರೆ ಮಾತ್ರ ನಾ ನಿಮ್ಮೊಟ್ಟಿಗೆ ಕುದ್ದ್ ಫಲಹಾರ ತೆಕಂಡನೆ. ಏನ್‌ಂತ ಕೇಳ್‌ವ ಮುಕಭಾವ ನ್ಯಾಯಾಧೀಶರ್‌ದ್.

ಗೌಡ್ರು ಹೇಳ್ದೊ "ಮುಂದೆನ ಕೆಡ್ಡಸದ ಬೇಟೆ ಬವರಕ್ಕೆ ತಾವು ತಮ್ಮ ಇಷ್ಟಮಿತ್ರರೊಟ್ಟಿಗೆ ನಮ್ಮೂರಿಂಗೆ ಬಂದ್, ಬೇಟೆಲಿ ಭಾಗವಹ್ಸಿ ಮೂರ್ ದಿನ ನನ್ನ ತುಂಬಿ ಮನೆನ ರಾಗಿ ಅಂಬುಲಿ ರೊಟ್ಟಿ ಆತಿಥ್ಯನ ಸ್ವೀಕರಿಸಿಕೆ ಬನ್ನೆಂತ ಮಾತ್ ಕೊಡೋಕು". ನ್ಯಾಯಾಧೀಶರ್ ಸಂತೋಸಂದ ಒಪ್ಪಿ "ಮೂರ್‌ದಿನ ಯಾಕೆ-ನಾಕ್ ದಿನ ನಿಮ್ಮ ಅತಿಥಿಗಾಗಿದ್ದವೆಂತೆಳ್ದೊ" ಆಗ ಹೊರಗಿದ್ದ ಪೇದೆ ಒಳಗೆ ಬಾದ್ "ಈ ಗುಲ್ಲ್‌ನ ಕಾರಣಪುರುಷ ರೈಗ ಬಂದೊಳೊ"ಂತ ಹೇಳ್ತ್. ನ್ಯಾಯಾಧೀಶರ್ ಅವರ ಬಾಕೆ ಹೇಳಿ "ಕೆಟ್ಟ ಕೆಲ್‌ಸನೂ ಸತ್ಫಲಕ್ಕೆ ಮೂಲ"ಂತ ಇಂದ್ ತಿಳ್ಕಂಡೆ-ನಿಮ್ಮ ಸಾಲ-ಹಳ್ಳಿಗನೊಬ್ಬನ ಘನತೆನ ನಂಗೆ ಕಾಂಬಕೆ ಎಡೆ ಮಾಡಿ ಕೊಟ್ಟತ್. ನಾಗರಿಕತೆಂದ ಕುರ್‌ಡಾದ ನನ್ನ ಕಣ್ಣ್‌ನ, ಹಳ್ಳಿಗನೊಬ್ಬನ ನಡ್‌ತೆ ತೆರ್‌ಸಿತ್. "ಇಳಿನ ನೋಡೋಕಾದರೆ ಕೆಳ್ಗಿಳ್‌ದ್ ನೋಡ್"ಂತ ಹೇಳ್ವ ಪಾಠನ ಕಲ್‌ಸಿ ಕೊಟ್ಟತ್. ಅಂತ ಉದ್ಗರಿಸಿ ಕೆಲೊವು ದಿನಲೇ ನಿಮ್ಮೂರಿಂಗೆ ಬನ್ನೆಂತ ಬೀಳ್ಕೊಟ್ಟೊ.

ಹಿಂದೆನ ಆದರ್ಶ ಜೀವಿಯೊಬ್ಬೊನ ಕಿರುಚಿತ್ರಣ ಇದ್. ಸಮಾಜದ ಬಂಧುಗ ಎಲ್ಲೊವು ತಮ್ಮ ಏರ್ ಜೀವನದ ಹೊತ್ತ್‌ಲಿ ಇಂತದನ್ನ ನೆಂಪಿಟ್ಟ್‌ಕಂಡ್ ತಮ್ಮ ಬಾಳ್‌ನ ರೂಪಿಸಿಕ:ಡ್ರೆ ಈ ಬರಹ ಸಾರ್ಥಕ.

## –: ವಿಶೇಷ ಪದಗಳ ಅರ್ಥ :–

**ಸತ್ತು–ಗುತ್ತು :** ಗುತ್ತಿಗೆ ಒತ್ತಾಗಿದ್ದ್, ಅದರ ಸತ್ತಾಗಿಸ್‌ವ ಮನೆ.

**ಗುಳಿಗ ಸೀರೆ :** ಹಿಂದೆನ ಕಾಲದ ಬಂಟ ಮತ್ತೆ ಗೌಡ ಪೆಳ್ತಕ್ಕ ಗದ್ದೆ ಕೆಲ್‌ಸಕ್ಕೆ ಹೋಕನ ಉಡ್‌ತಿದ್ದ ಕಮ್ಮಿ ಬೆಲೆನ ಹದ್ನೆಂಟ್ ಮೊಳದ ಮಗ್ಗದ ಸೀರೆ, ಮಣ್ಣಾದರೆ ಕಂದ:ಲೆ. ಎಣ್ಣೆ ಬಿದ್ದರೆ ಕಾಂಬಾಕಿಲ್ಲೆ.

**ಕಿರಿಗೆ :** ಇದ್ ಸತ್ತು–ಗುತ್ತುನ ಮನೆಗಳ್‌ಲಿ ಹೊಲೆ ಕಾಣದ ಗೂಡೆಗ, ಪ್ರಾಯಬಾಕನ ಮಾನ ಮುಚ್ಚಿಕಂಬಕ್ಕಾಗಿ ಬಳ್ಸ್‌ತಿದ್ದ ತುಂಡುಬಟ್ಟೆ.



## ದಾವ್ವ....

ತೂಂಗುವ ಗೊನೆಗಳಿಗೆ ದಿಷ್ಟಿ ತಾಂಗ್‌ಕನೆ
ಮನ್ಸ್‌ನ ಆಸೆ,
ಅದ್ ನನ್ನ ದಾವ್ವನ, ಇಂಗಿಸುದಾ........!

—ಮನೋಜ್, 'ನಿಸರ್ಗ'

# ಗೌಡ ಜನಾಂಗದ ಪರಿಚಯ

—ಕುದುಪಜೆ ಬಿ. ಕೃಷ್ಣಪ್ಪ, ಕರಿಕೆ

“ಗೌಡ”ಂತ ಹೇಳ್ರೆ ಭೂಮಿಗೆ ಒಡೆಯ, ಮತ್ತೆ ಊರಿಗೆ ಮುಖ್ಯಸ್ತಂತ ಅರ್ಥ. “ಊರಿಗೊಬ್ಬ ಗೌಡ, ದೇಶಕೊಬ್ಬ ದೊರೆ” ಇದ್ ಕನ್ನಡನಾಡ್‌ನ ಮಾತ್.

“ಗೌಡ”ಂತ ಹೇಳ್ದ ಹಿಂದೆನ ಕಾಲಲಿ ಆಚರಣೆಲಿದ್ದ ಒಂದು ಸಂಸ್ಕೃತಿಂತ ಹೇಳ್‌ವೆ. ಗೌಡರ ಸಂಸ್ಕೃತಿ ಒಂದೇ ಜಾಗದ ಸಂಸ್ಕೃತಿ ಅಲ್ಲ. ಅದ್ ಸುಮಾರ್ ಜಾಗಗಳ ಜೆನರೊಟ್ಟಿಗೆ ಕೂಡ್‌ದರ ಪಲವೇ ಗೌಡ್‌ಗಳ ಸಂಸ್ಕೃತಿ ಆವುಟು.

ಗೌಡ್‌ಗ ಹಿಂದೂಗ, ಇವು ತಿರುಪತಿ ವೆಂಕಟ್ರಮಣ ದೇವ್ರ ಭಕ್ತರ್. ವೆಂಕಟ್ರಮಣ ದೇವ್ರುನ ಇವು ಕುಲದೇವ್ರುಂತೇಳಿ ಪೂಜಿಸಿವೆ. ಮತ್ತೆ ಹಂಸೇವೆಂತೇಳ್‌ವ ಪೂಜೆನ ಎಲ್ಲಾ ಸಂಸಾರಗಳ್‌ಲಿ ಆಚರ್ಸಿಕಂಡ್ ಬಂದ್ ಪೂಜೆನ ಹರ್ಕೆ ಹಣ, ಭಕ್ತಿ ಹಣನ ದೇವ್ರ ಹಣಾಂತೇಳಿ ‘ಮುಡಿಪು’ಲಿ ಕಟ್ಟಿ ಮಡ್‌ಗಿ ತಿರುಪತಿ ಭಂಡಾರಕ್ಕೆ ತಲ್ಪ್‌ಸುವ ಕ್ರಮ ಈಗೊಳೂ ನಡ್ಕಂಡ್ ಬಂದದೆ. ಕೆಲವುಕೆ ದುರ್ಗಿ ಕುಲದೈವ ಮತ್ತೆ ಕೆಲವುಕೆ ಸುಬ್ಬಮ್ಮ(ಶರ್ವಾಂಬೆ) ಮನೆ ದೇವ್ರು, ಕೆಲವು ಕುಟುಂಬದೊವು ದೆವ್ವಗಳ ಆರಾಧಿಸಿವೆ. ಇವೆಲ್ಲ ಆಚರ್‌ಣೆಲಿ ಬಂದ ಭಕ್ತಿ ಮಾರ್ಗಗ.

ಗೌಡ್‌ಗ ಮುಂದೆ ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲಲಿ ಇದ್ದೊವುತ ಚರಿತ್ರೆಂದ ತಿಳ್‌ದ್ ಬಂದದೆ. ತಾಳಿಕೋಟೆ ಯುದ್ಧ ಆದ ಮೇಲೆ ವಿಜಯನಗರ ಸಾಮ್ರಾಜ್ಯ ಹಾಳಾತ್. ಆಗ ಮುಸ್ಲಿಂಗಳ ಆಡಳ್ತೆಗೆ ಇಷ್ಟಪಡದೆ ಅಲ್ಲಿಂದ ಇಕ್ಕೇರಿ ಸಂಸ್ಥಾನಕ್ಕೆ ಬಂದೊತಾ ತಿಳ್‌ದ್ ಬಂದದೆ. ಇಕ್ಕೇರಿ ನಾಯಕರ್ ದಕ್ಷಿಣ ಕನ್ನಡ ಜಿಲ್ಲೆ ಆದಿರಾಜರಾದ ಮೇಲೆ ಅವರ ಇಕ್ಕೇರಿ ಸಂಸ್ಥಾನದ ಐಗೂರು ಸೀಮೆಂದ ಗೌಡ್‌ಗಳ, ದಕ್ಷಿಣ ಕನ್ನಡ ಜಿಲ್ಲೆನ ಘಟ್ಟ ಸರಹದ್ದ್ ಪ್ರದೇಶಕ್ಕೆ ಕರ್ಕಂಡ್ ಬಂದ್ ಅಲ್ಲಿ ಭೂಮಿ ಕೊಟ್ಟ್ ನಿಲ್ಲಿಸಿದೋತ ತಿಳ್‌ದ್ ಬಂದದೆ.

ಗೌಡ್‌ಗ ಭತ್ತದ ಗದ್ದೆ, ತೋಟದ ವ್ಯವಸಾಯ ಕೃಷಿಗಳ್‌ಲಿ ಬಾಳ ನಿಪುಣರ್, ಆದ್ದರ್‌ಂದ ಅವರ ದಕ್ಷಿಣ ಕನ್ನಡ ಜಿಲ್ಲೆನ ಜೆನ ಕಮ್ಮಿ ಇರ್‌ವ ಜಾಗಗಾದ ಪುತ್ತೂರು ಮತ್ತೆ ಈಗನ ಸುಳ್ಯ ತಾಲ್ಲೂಕುಗಳ್‌ಲಿ ಬಂದ್ ನಿಲ್ಲಿಕೆ ಇಕ್ಕೇರಿ ನಾಯಕರ್ ಪ್ರೋತ್ಸಾಹ ಮಾಡ್ದ ಕಾರಣ ಗೌಡ್‌ಗ ದಕ್ಷಿಣ ಕನ್ನಡ ಜಿಲ್ಲೆಲಿ ಬಂದ್ ನೆಲ್ಸಿ ಕೃಷಿ ಮಾಡಿಕೆ ಸುರುಮಾಡ್ದೊ.

ಹಿಂಗೆ ದಕ್ಷಿಣ ಕನ್ನಡ ಜಿಲ್ಲೆಲಿ ಇದ್ದ ಗೌಡ್‌ಗಳ್ಲಿ ಕೆಲವು ಜೆನ ಹದ್‌ನೆಂಟ್ನೆ ಶತಮಾನದ ಕಡೇಲಿ ಮತ್ತೆ ಹತ್ತೊಂಬತ್ನೆ ಶತಮಾನದ ಸುರೂಲಿ ಕೊಡಗ್‌ಗೆ ಬಂದ್ ನಿತ್ತೊ. ಇವು ಕೊಡಗ್‌ಗೆ ಬಂದ್ ನಿಲ್ಲಿಕೆ ಪ್ರೋತ್ಸಾಹ ಕೊಟ್ಟೊವು ಹಾಲೇರಿ ಅರಸರ್‌ಲಿ ಮುಖ್ಯವಾದಂವ ದೊಡ್ಡವೀರರಾಜೇಂದ್ರ ಒಡೆಯ. ಕೊಡಗ್ ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಗಾದ ಮೇಲೆ ಅದರ ಇರೋಧಿಸಿ ಕೊಡಗ್‌ನೊವು ಸುಮಾರ್ ಸಲ ದಂಗೆ **ಎದ್ದೊ**. ಇದರ್‌ಂದ ಟಿಪ್ಪು ಸುಲ್ತಾನಂಗೆ ಕೊಡಗ್‌ನವರ ಮೇಲೆ ಸಿಟ್ಟ್ ಬಂದ್ 1785ರ್‌ಲಿ ತಾನೇ ಕೊಡಗ್‌ಗೆ ದೊಡ್ಡ ದಂಡ್ ತಗಂಡ್‌ಬಂದ್ ಕೊಡಗ್‌ನ ಹೆಚ್ಚ್‌ನ ಜೆನಂಗಳ್ನೆಲ್ಲ ಬಲತ್ಕಾರಂದ ಹಿಡ್‌ದ್ ಭಾಗಮಂಡ್ಲದ ದೇವಟ್ ಪರ್‌ಂಬ್‌ಲಿ ಒಟ್ಟ್ ಸೇರ್ಸಿ ಸುಮಾರ್ 80,000 (ಎಂಬತ್ತ್ ಸಾವ್ರ) ಜೆನರ ಶ್ರೀರಂಗ ಪಟ್ನಕ್ಕೆ ತಗಂಡ್ಹೋಗಿ ಅಲ್ಲಿ ಮುಸಲ್ಮಾನರಾಗಿ ಮಾಡ್ತ್‌ಗಡ.

ಇಷ್ಟ್ ದೊಡ್ಡ ಸಂಖ್ಯೆನ ಜೆನರ, ಕೊಡಗ್‌ಂದ ಮೈಸೂರಿಗೆ ತಗಂಡ್ ಹೋದ ಮೇಲೆ ಇಲ್ಲಿನ ಭೂಮಿನ ವ್ಯವಸಾಯ ಮಾಡಿಕೆ ಜೆನ ಇಲ್ಲದೆ ಹಾಳ್ ಬೀತ್. 1792ರ್‌ಲಿ ಅಮರಸುಳ್ಯ ಮಾಗಣೆಗ ವೀರರಾಜೇಂದ್ರನ ವಶಕ್ಕೆ ಬಾತ್. ಆಗ ವೀರರಾಜೇಂದ್ರ ಅಮರಸುಳ್ಯಗಳ್‌ಲಿದ್ದ ಗೌಡ್‌ಗಳ, ಕೊಡಗ್‌ಗೆ ಬಂದ್ ಇಲ್ಲಿ ಹಾಳ್ ಬಿದ್ದಿದ್ದ ಭೂಮಿಗಳ್‌ಲಿ ವ್ಯವಸಾಯ ಮಾಡಿಕೆ ಮತ್ತಾಯ ಮಾಡ್ತ್. ಹಿಂಗೆ ಹೊರ ಊರುಗಳ್‌ಂದ ಬಂದ ಎಲ್ಲಾ ಜೆನಂಗಳಿಗೆ ದೊಡ್ಡವೀರರಾಜೇಂದ್ರ ಭೂಮಿನ ಜಮ್ಮ ಮತ್ತೆ ಉಂಬಳಿಯಾಗಿ ಕೊಟ್ಟತ್.

ಕೊಡಗ್‌ಲಿ ಗೌಡ ಜೆನ ಕನ್ನಡ ಜಿಲ್ಲೆ ಗಡಿಗೆ ಮುಟ್ಟಿಕಂಡಿರ್‌ವ ಭಾಗಮಂಡ್ಲ ನಾಡ್, ಮಡಿಕೇರಿನಾಡ್ ಮತ್ತೆ ನಾಪೋಕ್ಲು ನಾಡ್‌ಗಳ್‌ಲಿ ಜಾಸ್ತಿ ನೆಲಿಸಿರ್ದು ಕಂಡ್ ಬಂದದೆ. ಕನ್ನಡ ಜಿಲ್ಲೆಂದ ಬಂದ ಗೌಡ್‌ಗ ಹೆಚ್ಚ್‌ನವು

ತೊಡಿಕಾನ ಪಟ್ಟಮಾರ್ಗಕ್ಕಾಗಿ ಬಂದ್ ಭಾಗಮಂಡ್ಲ ಮತ್ತೆ ನಾಪೋಕ್ಲು ನಾಡ್‌ಲಿ ನೆಲಿಸಿದೊ. ಸಂಪಾಜೆ ಮಾರ್ಗಕ್ಕಾಗಿ ಬಂದ ಗೌಡ್‌ಗ ಮಡಿಕೇರಿ ನಾಡ್‌ಲಿ ನೆಲಿಸಿದೊ. ಸುಬ್ರಮಣ್ಯ, ಕಡಮಕಲ್ಲ್ ಮಾರ್ಗಕ್ಕಾಗಿ ಬಂದ ಜೆನ ಗಾಳಿಬೀಡ್‌ಲೂ ಮಡಿಕೇರಿ ನಾಡ್‌ಲೂ ಬಂದ್ ನೆಲಿಸಿದೊ. ಹಿಂಗೆ ಕನ್ನಡ ಜಿಲ್ಲೆಂದ ಕೊಡಗ್‌ಗೆ ಬಂದ್ ಗೌಡ ಜೆನ 1799ರ್‌ಂದ 1808ರೊರಗೆ ಹೆಚ್ಚಾಗಿ ನೆಲಿಸಿದೊ. ಹಂಗೆ ಬಂದ್ ನಿತ್ತ ಗೌಡ ಜೆನಂಗಳಿಗೆ ಜಮ್ಮ ಅಥವ ಉಂಬಳಿ ಆಗಿ ಭೂಮಿನ ವೀರರಾಜೇಂದ್ರ ಒಡೆಯ 1800ರ್‌ಲಿ ಕೊಟ್ಟತ್.

ಹಿಂಗೆ ಕನ್ನಡ ಜಿಲ್ಲೆಂದ ಕೊಡಗ್‌ಗೆ ಬಂದ್ ನಿತ್ತ ಹೆಚ್ಚ್‌ನ ಗೌಡ್‌ಗ ಕೊಡಗ್‌ನ ಪಡ್ವ ಭಾಗಲಿ ನೆಲಿಸಿದೊ. ಆ ಮೇಲೆ ಕೊಡಗ್‌ನ ರಾಜ ಅವುಕೆ ಜಮ್ಮ ಜಹಾಗೀರ್ ಉಂಬಳಿ ಭೂಮಿನ ಕೊಟ್ಟತ್. ಕ್ರಮೇಣ ಮಡಿಕೇರಿ ತಾಲ್ಲೂಕ್‌ನ ಗೌಡ್‌ಗಳ್ಲಿ ಹಂಞ ಜೆನ ವೀರಾಜ್‌ಪೇಟೆ ತಾಲ್ಲೂಕ್‌ಲೂ, ಇನ್ನ್ ಹಂಞ ಜೆನ ಸೋಮಾರ್‌ಪೇಟೆ ತಾಲ್ಲೂಕ್‌ಲೂ ಹೋಗಿ ನೆಲ್ಸಿ ಅವೆಲ್ಲ ಕೊಡಗ್‌ನ ಸ್ಥಿರ ವಾಸಿಗ ಆದೊ. ಆಮೇಲೆ ಕೆಲವು ಜೆನ ಚಾಕಿರಿನ ಮೇಲೆ ಮೈಸೂರು, ಬೆಂಗ್ಳೂರು ಮತ್ತೆ ದೇಶ ವಿದೇಶಗಳ್‌ಲೆಲ್ಲಾ ಹೋಗಿ ನೆಲಿಸಿಯೊಳೊ. ಈಗ ಕೆಲವು ವರ್ಸಗಳ್‌ಂದ ಗೌಡ್‌ಗ ವಿದ್ಯೆಲಿ ಬಾಳ ಮುಂದ್‌ವರ್ದ್ ದೊಡ್ಡ ದೊಡ್ಡ ಚಾಕಿರಿಗಳಿಗೆ ಸೇರ್ಕಂಡ್ ನಮ್ಮ ಜನಾಂಗಕ್ಕೆ ಕೀರ್ತಿ ತರ್ತಾ ಒಳೊ.

ಗೌಡ ಜನಾಂಗದೊವು ಹತ್ತ್ ಬುಡಕಟ್ಟೆಗೆ ಸೇರ್ದೊವು ಮತ್ತೆ ಹದ್‌ನೆಂಟ್ ಗೋತ್ರಗಳಿಗೆ ಸೇರ್‌ದೊವು. ಆದ್ದರ್‌ಂದ ಈಗೊಳು ಮೊದುವೆಗಳ್‌ಲಿ "ಹತ್ತ್ ಕುಟಂಬ ಹದ್‌ನೆಂಟ್ ಗೋತ್ರ ದೇವಸಭೆ ಸಮಸ್ತರ ಸಂಗಡ ಕೇಳಿ ಎಲ್ಲಾ ಕಾರ್ಯಗಳ ಪ್ರಾರಂಭಿಸಿವೆಂತೇಳ್‌ವ" ಕಟ್ಟಳೆ ಉಟ್ಟ್.

ಗೌಡ ಜನಾಂಗದೊವುಕೆ ಕುಲಗುರು ಶೃಂಗೇರಿ ಜಗದ್ಗುರುಗ. ಹಿಂದೆನ ಕಾಲಲಿ ಶೃಂಗೇರಿ ಜಗದ್ಗುರುಗಳಿಗೆ ಗುರುಕಾಣಿಕೆ ಕೊಡ್‌ವ ಕ್ರಮ ಇತ್ತ್. ಈ ಗುರುಕಾಣಿಕೆನ ಕೊಟ್ಟ್ ಗುರುಗಳ್‌ಂದ ಆಶೀರ್ವಾದ ಪಡ್ದ್ ತಮ್ಮ ಕುಲಪದ್ಧತಿ ಪ್ರಕಾರ ಶುಭಾ ಶುಭ ಕಾರ್ಯಗಳ್‌ಲಿ ಹೆಂಗೆ ನಡ್‌ಕಣಕುತ ಅಭಿಪ್ರಾಯ ಆಶೀರ್ವಾದ ಪಡಿಯತ್ತಿದ್ದೊ. ಈಗೊಳು ಕೂಡಾ ಮೊದುವೆಗಳ್‌ಲಿ "ತೆರ" ಕೇಳಿ ಗಂಡ್‌ನ ಕಡೆವು ಹೆಣ್ಣ್‌ಗೆ ಕೊಡ್‌ವ ಹಣಲಿ 4½ ರೂಪ್ಯಾ ಹೆಣ್ಣ್‌ನ ಮುತ್ತೈದೆತನಕ್ಕೆ ಶೃಂಗೇರಿ ಮಠಕ್ಕೆ ತಲ್‌ಪಿಸೊಕುತ ಕೊಡ್‌ವ ಹಣ.

ಭತ್ತದ ಕೃಷಿ ಗೌಡ್‌ಗಳ ಹುಟ್ಟ್‌ನೇ ತಬ್ಬಿಕಂಡ್ ಬಂದ ಕೃಷಿಯಾಗುಟು. ಅಲ್ಲದೆ ನೇಗ್‌ಲ್‌ನೇ ತಮ್ಮ ಜೀವನದ ಹೆಗ್ಗುರುತಾಗಿ ಮಾಡಿಕೊಂಡೊಳೊ. ಈಗ ಗೌಡ್‌ಗ ಭತ್ತದ ಕೃಷಿ ಮಾತ್ರ ಅಲ್ಲದೆ ಕಾಫಿ, ಯಾಲಕ್ಕಿ ಕಿತ್ತ್ತಳಿ, ಕಾಯಿ, ಅಡಿಕೆ, ರಬ್ಬರ್‌ನ ತುಂಬಾ ಬೆಳ್‌ಸ್ತಾವೊಳೊ.

ಗೌಡ್‌ಗ ಮಾಂಸಾ ಹಾರಿಗ, ಮತ್ತೆ ಗೌಡ ಕನ್ನಡ ಮಾತಾಡೊವು. ಇವು ಯಾಗೊಳು ಸತ್ಯ, ಧರ್ಮ, ನ್ಯಾಯನ ನಂಬಿ ಅದೇ ಹಾದಿಲೇ ಬಾಳೊವು.

—●—




"ದೋಸ್ತಿಗೆ ಪ್ರಮೋಷನ್, ಮಂಜಂಗೆ ಚಾಕಿರಿ, ಅಪ್ಪಂಗೆ ಪಿಂಚಣಿ, ಅವ್ವಂಗೆ ಖಾಯಿಲೆ, ಹೆಣ್ಣಿಗೆ ವಿದೇಶ ಪ್ರವಾಸ..... ಇದ್ 'ನನ್ನ' ದಿನ ಭವಿಷ್ಯ!"

## ಬೆತ್ತಲೆ

ದೀಪ ಅದ್ ಬೆಳಿ ಬೆತ್ತಲೆ<br>
ದೀಪದಡಿ ಮಾತ್ರ ಕತ್ತಲೆ<br>
ಕಾಂಬಾಕಿಲೆ ಕತ್ತಲೆಲಿ ಬೆತ್ತಲೆ<br>
ಕತ್ತಲೆಲಿ ಬೆತ್ತಲಾದು ಮೊನ್‌ಸನ ಸುತ್ತೊಲೆ.

—ಆಜಡ್ಕ ಕೃಷ್ಣಪ್ಪ

# ನಮ್ಮ ಬಾಸೆ ಮತ್ತೆ ನಮ್ಮ ಜೆನ

—ಮುಂಡೆಕೋಲು ಗಂಗಾಧರಗೌಡ

ಇಡಿ ಪ್ರಪಂಚಲಿ ನಮ್ಮ ಭಾರತ ದೇಶನೆ ಪುಣ್ಯ ದೇಶಂತ ಹೇಳಕ್. ಅದೇ ರೀತಿ ಇಲ್ಲಿನ ಸುಸಂಸ್ಕೃತ ಹಿಂದೂ ಜನಾಂಗದ ಶ್ರೇಷ್ಠ ಜಾತಿಗಳ್‌ಲಿ ಗೌಡ ಸಮಾಜನೂ ಒಂದು.

'ಹಿಂದು ಧರ್ಮನೆ ಸನಾತನ ಧರ್ಮ'ಅದ್ ಮಾನವಿಯ ಧರ್ಮದ ಸಾರ. ಬೇರೆ ಉಳ್ಳದ್ ಒಂದೊಂದು ಅಭಿಪ್ರಾಯದ ಪಂಗಡಗ ಯಾ ಮತಗಾಂತ ಹೇಳಕ್. ಹಿಂದೂ ಧರ್ಮದ ಸಂಸ್ಕೃತಿನ ಮೂಲ ಆಧಾರನೇ ನಮ್ಮ ಸಮಾಜನು ಕೂಡಾ. ಭಾರತ ದೇಶದ ಕರ್ನಾಟಕ ರಾಜ್ಯನೇ ನಮ್ಮ ಗೌಡ ಸಮಾಜದ ನೆಲೆಮನೆ. ನಾವು ಹಿಂದೂ ಜನಾಂಗದ ಒಂದು ಪ್ರಮುಖ ಶಾಖೆ. ಕನ್ನಡ ನಾಡ್ ಭಾರತ ದೇಶದ ಹೆಮ್ಮೆನ ಒಂದು ರಾಜ್ಯ. ನಮ್ಮ ಮೂಲ ಬಾಸೆ ಗೌಡ ಕನ್ನಡ.

ನಮ್ಮ ಜಾತಿಲಿ ಪಶ್ಚಿಮ ಭಾಗಲಿ ತುಳು ಮಾತಾಡವು ಒಳೊ. ಅದ್ ತುಳು ನುಡಿಯ ತವರೂರು ಆದ ದಕ್ಷಿಣ ಕನ್ನಡ ಜಿಲ್ಲೆನ ತುಳು ಜೆನರೊಟ್ಟಿಗೆ ಸೇರಿ ಕಲ್ತದ್. ಅವರ ನಡುಲಿ ಹಲವು ಶತಮಾನ ಇರ್‌ಕನ ಕ್ರಮೇಣ ಅದ್ ಅಬ್ಬೆಸ ಆಗಿ ಬಾತ್. ಮೈಸೂರು ಕಡೆ ನಿಜ ಕನ್ನಡನೇ ನಮ್ಮವು ಮಾತಾಡ್‌ವೆ. ಆದರೆ ಅಮರ ಸುಳ್ಯ ವಠಾರದ ಗೌಡ ಕನ್ನಡ ಮಾತಾಡ್‌ವ ಗೌಡ ಕುಟುಂಬಗ ಮಾತ್ರ ಕೊಡಗ್ ಜಿಲ್ಲೆ ಹಾಂಗೂ ಸುಳ್ಯ ತಾಲ್ಲೂಕ್‌ಲಿ ಮಾತ್ರ ಜಾಸ್ತಿ ಒಳೊ. ಈ ನಮ್ಮ ಗೌಡ ಕನ್ನಡಲಿ "ಭಾಷಾ ಕಾಠಿಣ್ಯ" ಇಲ್ಲೆ. ಕಮ್ಮಿ ಸಮೆಲಿ ತುಂಬಾ ಅಭಿಪ್ರಾಯನ ಹೇಳಕ್. ಶಬ್ದಗಳ್‌ಲಿ ಅಕ್ಷರ ಕಮ್ಮಿ ಇರ್‌ದು ಇದರ ವಿಶೇಷತೆ. ಜಗತ್ತ್‌ನ ಬಾಸೆಲಿ ನಮ್ಮ "ಗೌಡ ಕನ್ನಡ" ಸರಳ ಮತ್ತೆ ಶ್ರೇಷ್ಠ.

ಉದಾರಣೆಗೆ:

1) ಸಹಜ ಕನ್ನಡ – ನಾನು ಹೋಗುತ್ತೇನೆ
   ಗೌಡ ಕನ್ನಡ – ನಾ ಹೋನೆ
2) ಸಹಜ ಕನ್ನಡ – ನಾನು ಹಾಲು ಕುಡಿಯುತ್ತೇನೆ
   ಗೌಡ ಕನ್ನಡ – ನಾ ಹಾಲ್ ಕುಡ್ದನೆ
3) ಸಹಜ ಕನ್ನಡ – ಅವಳು ಕತೆ ಬರೆಯುತ್ತಿದ್ದಾಳೆ
   ಗೌಡ ಕನ್ನಡ – ಅವುಳು (ಅದ್) ಕತೆ ಬರ್ದದೆ.

ಭಾಷಾ ವಿಜ್ಞಾನದ ದಿಷ್ಟಿಲಿ 'ನಮ್ಮ ಕನ್ನಡ' ಜಗತ್ತ್‌ಲಿ ಮೇಲ್, ಅದರ ಅಕ್ಷರನೂ ಮುದ್ದಾದ ರೂಪಲಿ ಉಟ್ಟು. ನಮ್ಮ ಗೌಡ ಕನ್ನಡ ಒಂದು ನಾಲಿಗೆ ಅಂತ ಹೇಳಕ್. 'ನಾಲಿಗೆ'ತೀಳ್‌ವ ಅಂಗ ತಿಂಬಕೆ ಬೇಕ್, ಕುಡಿಯಕೆ ಬೇಕ್, ಮಾತಾಡಿಕೂ ಬೇಕ್. ಇತರರ ಪ್ರೀತಿ ಗಳಿಸಿಕೆ, ಗೌರವ ಪಡಿಯಕೆ ನಾಲಿಗೆ ಬೇಕೆ ಬೇಕು. ಅದೇ ರೀತಿ ಜಗತ್ತ್‌ನ ಬಾಸೆಲಿ ನಮ್ಮ ಗೌಡ ಕನ್ನಡನು ಸಾ. ಈ ಕೆಳಗೆನ ಪದ್ಯ ಓದಿರೆ ಗೌಡ ಕನ್ನಡದ ಹಿರಿಮೆ ಗೊತ್ತಾದೆ.

ಯಾರಿಗೆ ಗೊತ್ತುಟು ಗೌಡ ಪದದ ಅರ್ಥ ?
ನಾ ಹೇಳ್ನೆ ಕೇಳಿ ನಿ ಅದರ ಮಹತ್ವ
ಜೆನಕೆಲ್ಲ ಯಜ್‌ಮಾನನೇ ಗೌಡ
ಊರ್‌ನ ಪ್ರಜೆಗಳ ರಕ್ಷಕನೇ ಗೌಡ
ಅದೇ ರೀತಿಲಿ ಬಾಸೆಲಿ ಕೂಡಾ ಕನ್ನಡನು
ಅದರ ಪೈಕಿಲಿಸೂ ಮೇಲ್ ಗೌಡ ಕನ್ನಡನು
ಇಂಪಾಗಿ ಹಾಡಕ್ ನಮ್ಮ ಕನ್ನಡನಾ
ಸೊಂಪಾಗಿ ಕೇಳಕ್ ಅದರ ದನಿನಾ
ಕಂಪು ಬೀರ್ದ್ದಿ ಲೋಕಕೆಲ್ಲಾ ಕಸ್ತೂರಿನ್ಹಾಂಗೆ
ಪೊಂಪಿನ ಕೆರೆಲಿ ಇರ್‌ವ ಮುತ್ತುನ್ಹಾಂಗೆ.

ಆದ್ದರ್‌ಂದ ನಮ್ಮ ಜೆನ ಎಲ್ಲಾ ಒಂದಾಕು. ಒಗ್ಗಟ್ಟ್‌ಲಿ ನಮ್ಮ ಜೀವನ ಕ್ರಮನು ಮತ್ತೆ ಆರ್ಥಿಕ ಮಟ್ಟನ ಹೆಚ್ಚಿಸಿಕಂಡ್ ನಮ್ಮ ಸಮಾಜದ ಏಳ್ಗೆಗೆ ದುಡ್ದರೆ ಎಲ್ಲವುಕೂ ಒಳ್ಳೆದ್. ಅಲ್ಲದೆ ಪರಸ್ಪರ ಸಾಯ ಮಾಡಿಕಂಡ್ ಬಡವ ಶ್ರೀಮಂತತ ಬೇದ ಇಸಿಕಣದೆ ಸುಖ ಸಂತೋಸಲಿ ಇರೋಕು. ಯೋಗ್ಯ ಗೌರವ ಕೀರ್ತಿ ಪಡ್‌ದ್ ಜೀವನನ ಸಾರ್ಥಕ ಮಾಡಿಕಂಕು. ಗೌಡ ಸಮಾಜ ಯೋಗ್ಯ ರೀತಿಲಿ ಬೆಳ್ದರೆ ನಮ್ಮ ಭಾರತ ದೇಶದ ಹಿಂದೂ ಸಮಾಜನೂ ಕೂಡಾ ಬೆಳ್‌ದ್ ದೇಶ ಅಭಿವೃದ್ಧಿ ಆಕೆ ಸಾಧ್ಯ ಉಟ್ಟು. 'ಜೈಹಿಂದ್'

ಓಂ

# ಧರ್ಮ

—ನಡುಬೆಟ್ಟು ದೇವಪ್ಪ, ಚೆಂಬು

ನಾವು ಆಗಾಗ ದೇವ್ರು ಧರ್ಮಾಂತ ಮಾತಾಡ್ತ ಒಳೊ. ಈ ಎರ್ಡ್ ಶಬ್ಧ ಗೊತ್ತಿಲ್ಲದವೇ ಇಲ್ಲೆ. ನಮ್ಮಲ್ಲಿ ಎಲ್ಲೊವು ದೇವ್ರುನ ಗ್ಯಾನ ಮಾಡ್ದು, ಕಷ್ಟ ಬಾಕನ ಮಾತ್ರ. ಆಗಳೇ ನಾವು ವೆಂಕಟ್ರಮಣನ ನೆನ್ಸದು. ಬಾಕಿ ಸಮೆಲಿ ಬಾಳ ಕಮ್ಮಿ. ಕೆಲವು ಸರ್ತಿ ನಾವು ದೇವಸ್ತಾನಕ್ಕೆ ಹೋದನೆ, ಮನೆಲಿ ಪೂಜೆ ಮಾಡ್ಸನೆ, ಇದೆಲ್ಲಾ ಯಾಗ? ನಾವು ಯಾದಾರ್ ಕಷ್ಟಲಿ ಸಿಕ್ಕಿಹಾಕಂಕನ ಮಾತ್ರ. ಇನ್ನ್ ಕೆಲವು ಜೆನ ನಾ ದೊಡ್ಡ ದೇವ್ರ ಭಕ್ತಾಂತ ತೋರ್ಸಿಕಂಬಕೆ ಪೂಜೆ, ದೇವ್ರ ದರ್ಶನ ಇತ್ಯಾದಿ ಮಾಡ್ವೆ. ಈಗಂತೂ ನಮ್ಮಲ್ಲಿ ಹೆಚ್ಚ್‌ನ ಜೆನ ದೇವುಗೇ ಇಲ್ಲೆಂತ ವಾದ ಮಾಡಿಕೆ ಹೊರ್ಟೊಳೊ. ಆ ಬಗ್ಗೆ ಏನಾರ್ ಮಾತಾಡ್ರೆ ನಿನ್ನ ದೇವ್ರು ಎಲ್ಲಿಟ್ಟು? ತೋರ್ಸುತಾ ಹೇಳ್ವೆ! ದೇವ್ರುನ ಬಗ್ಗೆ ನಮ್ಮ ಸ್ಥಿತಿ ಹೀಂಗಾದರೆ ಧರ್ಮದ ಬಗ್ಗೆ ಹೇಂಗೆತ ನೋಡ್ನೊ.

ಧರ್ಮಂತೇಳ್ವ ಶಬ್ಧನ ಆಗಾಗ ಕೇಳ್ತಾ ಒಳೊ. ಆದ್ರೂ ಅದರ ಅರ್ಥ ಮಾತ್ರ ಹೆಚ್ಚ್‌ನವುಕೆ ಗೊತ್ತ್‌ಲ್ಲೆಂತ ಹೇಳ್ರೆ ಏನ್ ತೊಪ್ಪಾಕಿಲ್ಲೆ. ನಮ್ಮ ಪುರಾತನ ಧರ್ಮ ಗ್ರಂಥಗ ಆದ ವೇದ, ಉಪನಿಶತ್, ಭಗವದ್ಗೀತೆ ಇದರ ಆಧಾರದ ಮೇಲೆ ನಾವು ಈ ಶಬ್ಧದ ಅರ್ಥನ ತಿಳ್ಕಂಬಕೆ ಹೊರ್‌ಟ್ರೆ ನಾವುಗೆ ಆಗ ಗೊತ್ತಾದೆ. ಒಟ್ಟ್‌ಲಿ ಹೆಳ್ದದಾದರೆ ಧಾರಣೆ ಮಾಡಿಕೆ ಯಾವುದ್ ಯೋಗ್ಯನಾ ಅದೇ ಧರ್ಮ. ಧಾರಣೇಂತ ಹೇಳ್ರೆ ಧರಿಸಿಕೇಂತ ಅರ್ಥ ಬಂದದೆ, ಅಂದರೆ ಜೀವನಲಿ ಅನ್‌ಸರಿಸಿಕೆ ಯಾವುದ್ ಯೋಗ್ಯನಾ ಅದೇ ಧರ್ಮ. ಧರ್ಮದ ಶಬ್ಧನ ಎಷ್ಟ್ ಭಾಗ ಮಾಡಕ್ ಮತ್ತೆ ಆ ಭಾಗಗ ಏನೇನ್ ಹೇಳ್ದೆಂತ ನೋಡ್ನೊ.

ನಮ್ಮ ಹಿಂದೆನ ಮುನಿಗಳ ನೀತಿ ಸೂತ್ರನೇ ಧರ್ಮ. ಅವು ಅದರ ಆಚರಣೆಗೆ ಅನ್ಕೂಲ ಆಗಲೀಂತ ಎರ್ಡ್ ಭಾಗ ಮಾಡ್ಯೆಳೊ ಅದೇ ಯಮ ಮತ್ತೆ ನಿಯಮ.

ಯಮ: ಇಲ್ಲಿ ಯಮನ ಐದ್ ಭಾಗ ಮಾಡ್ಯೆಳೊ. ಅವು ಯಾವುದ್‌ಂತೇಳ್ರೆ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತೆ ಅಪರಿಗ್ರಹ. ಇವು ಒಬ್ಬ ವ್ಯಕ್ತಿಗೂ ಸಮಾಜಕ್ಕೂ ಅನ್ವಯ ಆವ ಆಚರಣಾ ಧರ್ಮಗ. ಇದರ ಸೆರಿಯಾಗಿ ತಿಳ್ದ ವ್ಯಕ್ತಿ ಮತ್ತೆ ಸಮಾಜ ಆಚರ್ಸದೆ ಹೋದರೆ ಸಮಾಜಲಿ ಹಿಂಸೆ, ಸುಳ್ಳ್ ಹೇಳ್ದು, ಕದಿಯೊದು, ದುಡ್ಡುನ ಸಿಕ್ಕಾಪಟ್ಟೆ ಖರ್ಚ್ ಮಾಡ್ದು, ಆಸೆ ಬುರ್ಕತನ, ವ್ಯಕ್ತಿ ವ್ಯಕ್ತಿಲಿ ಸುರು ಆಗಿ ಸಮಾಜ ದೇಶ ಹಾಳಾದೆ.

ನಿಯಮ: ಇದ್ ವ್ಯಕ್ತಿ ತನ್ನ ಜೀವನಲಿ ಅನ್‌ಸರ್ಸಕಾದ ನಡ್‌ವಳಿಕೆಗೆ ಸಮ್ಮಂದ ಪಟ್ಟ ನಿಯಮ ಅಥವ ನಿಬಂಧನೆಗ. ಶೌಚ, ಸಂತೋಷ, ತಪಸ್ಸ್, ಸ್ವಾಧ್ಯಾಯ ಮತ್ತೆ ಈಶ್ವರ ಪ್ರಣಿಧಾನ–ಈ ಐದ್ ನಿಬಂಧನೆಗಳ ಮೊಯಿಂಸ ಸೆರಿಯಾಗಿ ಪಾಲ್‌ಸದೆ ಇದ್ದರೆ ಆ ವ್ಯಕ್ತಿ ಅಯೋಗ್ಯ ಆಗಿ, ಕಿಡಿಗೇಡಿ ಆಗಿ ಸಮಾಜಕ್ಕೆ ಕಂಟಕ ಪ್ರಾಯನಾದೆ. ಈಗ ನಾವು ಯಮ ಮತ್ತೆ ನಿಯಮಲಿ ಬಾವ ಐದೈದ್ ನಿಬಂಧನೆಗಳ ಎಂತತ ತಿಳ್ಕಂಬೊನು.

ಅಹಿಂಸೆ: ಮುಖ್ಯ ಆಗಿ ವ್ಯಕ್ತಿ, ಸಮಾಜಲಿ ತನ್ನ ಸಹ ಜೀವಿಗಳಿಗೆ ಮಾನಸಿಕ, ದೈಹಿಕ ರೀತಿಲಿ ಯಾವ ಬೇನೆ ಮಾಡದೆ ತನ್ನ ಜೀವನನ ಒಳ್ಳೆ ಸ್ಥಿತಿಗೆ ಸಾಗ್ಸಿಕಂಡ್ ಹೋದು. ಹಿಂಸೆ ಮಾಡ್ವ ಪ್ರಸಂಗ ಯಾಗ ಬಾದೂಂತೇಳ್ರೆ ತನ್ನ ರಕ್ಷಣೆನ ಮತ್ತೆ ಇನ್ನೊಬ್ಬನ ಉನ್ನತಿನ ಸಯಿಸದೆ ದ್ವೇಷ ಸಾಧನೆನ ಬಾವನೆ ಬೆಳಿಯುಕನ, ಜತೆಗೆ ದೇಹಲಿ ಆಶಕ್ತಿ ಮತ್ತೆ ಅಜ್ಞಾನ ತುಂಬಿರ್ಕನೂ ಹಿಂಸೆ ಮಾಡ್ದೆ. ದೇವ್ರುಲಿ ಭಕ್ತಿನ ಬೆಳ್ಸಿಕಂಡ್ ಎಲ್ಲಾ ಮೊಯಿಂಸ ಜೀವಿಗಳ ಹೃದಯುಲಿ ಸ್ಪಂದಿಸ್ತಾ ಇರ್ದು ಚೇತನ ರೂಪದ ದೇವರ ಅಂಶತ ತಿಳ್‌ವಳಿಕೆ ಬಾಕನ ಹಿಂಸೆನಾ ಮೇಲೆ ಇದ್ದ ನಂಬಿಗೆ ಹೋಗಿ ನಾವು ಅಹಿಂಸಾವಾದಿಗ ಆಪವೆ.

**ಸತ್ಯ :** ಸತ್ಯಾಂತ ಹೇಳ್ರೆ ನೀತಿ ನಡ್ತೆನಾ ಅತಿ ಉನ್ನತ ನಿಬಂಧನೆ. ಕೊಟ್ಟ ಮಾತ್‌ನ್ಹಂಗೆ ನಡ್ಕಂಬೊದೇ ಸತ್ಯ. ಗಾಂಧೀಜಿಯವು ಸಾ ಹೇಳಿಯೊಳೊ ಸತ್ಯವೇ ದೇವ್ರು ದೇವುರೇ ಸತ್ಯಾಂತ. ಸತ್ಯಾಂತ ಹೇಳ್ದ್ ಬರೀ ಮಾತಿಗೆ ಮಾತ್ರ ಸೇರ್ದ್ ಅಲ್ಲ. ಮಾತಿಗೆ ಸೇರ್ದ ಹಾಂಗೆ ನಾಕ್ ಪಾಪಗ ಒಳೊ-ಬಯ್ಯೋದು, ತುಚ್ಚ ರೀತಿಲಿ ಮಾತಾಡ್ದು, ಅಸತ್ಯ ಯವಹಾರ, ಸುಳ್ಳ್ ಆರೋಪ ಮಾಡ್ದು, ಕಡೇದಾಗಿ ಬೇರೆವು ಯಾವುದರ ಪವಿತ್ರಾಂತ ನಂಬಿಯೊಳೊ ಅದರ ತೆಗ್‌ಳ್ದು. ಗ್ಯಾನ ಮಾಡಿ ಮಾತಾಡ್ದರ ಅಬ್ಬೆಸ ಮಾಡಿ ಮಾತ್‌ನ ಹಿಡ್ತಕ್ಕೆ ತಂದರೆ ಅವನ ಬಾಯಿಂದ ಸುಳ್ಳ್ ಬಾಕಿಲ್ಲೆ. ಸತ್ಯನ ದೇವ್ರು ಕೈ ಬುಡ್ದಿಲ್ಲೆಂತೇಳ್ದಕ್ಕೆ ಸತ್ಯ ಹರಿಶ್ಚಂದ್ರನ ಕತೆನೇ ಸಾಕ್ಷಿ.

ಬ್ರಹ್ಮಚರ್ಯಾಂತೇಳ್ರೆ ಮೊದುವೆ ಆಗದೇ ಇರ್ದ್ವಂತಾ ಬಾಳ ಜೆನ ತೊಪ್ಪು ತಿಳ್ದಳೊ. ನಮ್ಮ ಶಾಸ್ತ್ರಗ ಮೊದುವೆನ ಸೂಚಿಸಿಟೊ. ನಮ್ಮ ಮುನಿಗ ಎಲ್ಲಾ ಮೊದುವೆ ಆಗೊಳೊ; ಸಂಪ್ರದಾಯ ರೀತಿಲಿ ಮೊದುವೆ ಆಗಿ ಮುಂದೆನ ಪೀಳಿಗೆನಾ ಮಕ್ಕಳ ಪಡಿಯಕೆ ವೀರ್ಯನ ಒಳ್ಳ ರೀತಿಲಿ ಉಪಯೋಗ ಮಾಡ್ದವನೆ ಬ್ರಹ್ಮಚಾರಿ.

**ಆಸ್ತೇಯ :** ಬೇರೆವರ್ನಿದ್ದ ವಸ್ತುಗಳ ನಾವು ಆಸೆಪಟ್ಟ್ ಅದರ ತಾನ್ ಹೊಂದಿಕೆ ಪ್ರಯತ್ನ ಮಾಡ್ಕನ ಅನ್ಯಾಯದ ಹಾದಿ ಹಿಡಿಯ-ಕ್ಕಾದೆ. ಆಗ ಕದಿವ ಬುದ್ಧಿ ಬಂದದೆ. ಕದಿಯದೆ ಇರ್ದು ಅಸ್ತೇಯಾ. ನಮ್ಮ ಜೀವನಲಿ ಶಾಂತಿ ಬೇಕ್‌ಂತ ಕೆಟ್ಟದಾರಿ ಹಿಡ್ದ್ ಸಂಪಾದನೆ ಮಾಡ್ವ ಬುದ್ಧಿ ಬಂದರೆ ಅದರ್‌ಂದ ಜೀವನ ದುಃಖಮಯ ಆದೆ. ನೀ ಕದಿಬಡಂತೇಳ್ವ ಧರ್ಮ ಎಲ್ಲಾ ಸಂಪತ್ತಿಗೆ ಮೂಲ.

**ಬ್ರಹ್ಮಚರ್ಯ :** "ಬ್ರಹ್ಮಚರ್ಯನೆ ಜೀವನ, ವೀರ್ಯ ನಾಶನೇ ಮೃತ್ಯೂಂತ ಒಂದ್ ಮಾತ್" ಉಟ್ಟು. ನಮ್ಮ ದೇಹಲಿ ಉತ್ಪತ್ತಿ ಆದ ವೀರ್ಯನ ಅನಾವಶ್ಯ ಹಾಳ್ ಮಾಡದೆ ರಕ್ಷಣೆ ಮಾಡ್ರೆ ನಮ್ಮ ರಕ್ತ ದೃಡ ಆಗಿ ಆರೋಗ್ಯ ಆಗಿ ಇದ್ದದೆ. ಒಳ್ಳ ದೇಹ ಇದ್ದರೆ ಮಾತ್ರ ಒಳ್ಳ ಕೆಲ್‌ಸ ಮಾಡಿಕೆ ಸಾಧ್ಯ. ಶಂಕರಚಾರ್ಯರ ಮಾತ್‌ನ ಪ್ರಕಾರ ಬ್ರಹ್ಮಚಾರಿಂತೇಳ್ರೆ ವೈದಿಕ ಪುಸ್ತಕ ಓದಿಕೆ ಸುರು ಮಾಡಿ ಮನ್ಸ್‌ನ, ದೇವ್ರುನ ಹಕ್ಕಲೇ ನಿಲ್ಲ್‌ನ್ಹಂಗೆ ಮಾಡಿ ಎಲ್ಲದರ್‌ಲೂ ದೇವ್ರುನ ಕಾಂಬವನೇ ಬ್ರಹ್ಮಚಾರಿ. ಪತಂಜಲಿ ಋಷಿಗ ಹೇಳ್ವೆ ದೇಹ, ಮಾತ್ ಮತ್ತೆ ಮನ್ಸ್‌ನ ಸಂಯಮನೇ ಬ್ರಹ್ಮಚರ್ಯಾಂತ. ಬ್ರಹ್ಮಚರ್ಯಾಂತೇಳ್ರೆ ಮೊದುವೆ ಆಗದೇ ಇರ್ದ್ವಂತಾ ಬಾಳ ಜೆನ ತೊಪ್ಪು ತಿಳ್ದಳೊ. ನಮ್ಮ ಶಾಸ್ತ್ರಗ ಮೊದುವೆನ ಸೂಚಿಸಿಟೊ. ನಮ್ಮ ಮುನಿಗ ಎಲ್ಲಾ ಮೊದುವೆ ಆಗೊಳೊ; ಸಂಪ್ರದಾಯ ರೀತಿಲಿ ಮೊದುವೆ ಆಗಿ ಮುಂದೆನ ಪೀಳಿಗೆನಾ ಮಕ್ಕಳ ಪಡಿಯಕೆ ವೀರ್ಯನ ಒಳ್ಳ ರೀತಿಲಿ ಉಪಯೋಗ ಮಾಡ್ದವನೆ ಬ್ರಹ್ಮಚಾರಿ. ಬ್ರಹ್ಮಚಾರಿ ತಾನ್ ಗಳ್ಸಿದ ಶಕ್ತಿನ ಸರಿದಾರಿಲಿ ಉಪಯೋಗ್ಸಿದೆ. ಮನ್ಸ್‌ನ ಶಕ್ತಿನ, ಸಂಸ್ಕೃತಿನ ಸೇವೆಗಾಗಿ ಉಪಯೋಗ್ಸಿದೆ, ಬುದ್ಧಿನ, ಚೈತನ್ಯನ, ಆಧ್ಯಾತ್ಮಿಕ ಜೀವನದ ಬೆಳವಣಿಗೆಗೆ ಉಪಯೋಗ್ಸಿದೆ. ಬ್ರಹ್ಮಚರ್ಯಂತೇಳ್ರೆ ವಿವೇಕದ ಜ್ವಾಲೆನ ಹೊಸ್ಸ್‌ವ ಬೆಂಕಿ

**ಅಪರಿಗ್ರಹ :** ಸಂಗ್ರ ಮಾಡ್ವಕ್ಕೆ ಪರಿಗ್ರಹಾಂತೇಳ್ವೆ. ಅಪರಿಗ್ರಹಾಂತೇಳ್ರೆ ಸಂಗ್ರ ಮಾಡದೆ ಇರ್ದು. ಒಟ್ಟ್‌ಲಿ ನಮ್ಮ ಜೀವನಕ್ಕೆ ಅಗತ್ಯಂದ ಹೆಚ್ಚಿಗೆ ಯಾವುದನ್ನೂ ಸಂಗ್ರ ಮಾಡದೆ ಇರ್ದು. ಯಾರಿಗೆ ದೇವರ ಮೇಲೆ ನಂಬಿಗೆ ಇಲ್ಲೆ, ಅಂವ ಬೇಕಾದಷ್ಟ್ ಸಂಗ್ರ ಮಾಡಿ ಬೇರೆವರ ಜೀವನಕ್ಕೆ ಕಿರ್ಕುಳ ಮಾಡಿ ಪಾಪ ಕಟ್ಟಿಕಣ್ದೆ. ಅಷ್ಟೆ ಅಲ್ಲ, ಧನಿಕನಾದಂವ ನಾ ಇದ್ದಂವ ನಂಗೆ ಸರಿ ಯಾರೂ ಇಲ್ಲೇಂತ ಹಾಂಕರಲಿ ಸಮಾಜಕ್ಕೆ ಪ್ರಯೋಜನ ಆಗದೆ ಕೆಟ್ಟ ಕೆಲ್‌ಸಗಳ್ನೆಲ್ಲಾ ಮಾಡಿ ಅಶಾಂತಿ ತಂದ್‌ಕಣ್ದೆ. ಯಾರ್ ದೇವ್ರುನ ನಂಬಿ ಸರಳ ಜೀವನ ನಡ್ಸಿದೆ, ಅವಂಗೆ ದೇವ್ರು ಬೇಕಾದ್ದರ ಕಾಲಕಾಲಕ್ಕೆ ಒದ್‌ಗಿಸಿಕೊಟ್ಟ್ ಕಾಪಾಡ್ದೆ.

**ನಿಯಮಲಿ ಶೌಚ :** ಶುಚಿಯಾಗಿ ಇರೊಕುತಾ ನಾವೆಲ್ಲ ಹೇಳ್ವೆ. ನಮ್ಮ ಶುಚಿ ಬಟ್ಟೆ ಬರೆಲಿ ಮಾತ್ರ! ನಿಜಾಗಿ ಶುಚಿಯಾಗಿರಕುಂತೇಳ್ರೆ ಯಾಗೋಳು ವಿದ್ ಶರ್ರನ ಶುಚಿಯಾಗಿ ಇಸಿಕಂಬೊದು, ನ್ಯಾಯ ಮತ್ತೆ ಧರ್ಮದ ಹಾದಿಲಿ ಸಂಪಾದ್ನೆ ಮಾಡ್ದ ಅನ್ನನ (ಆಹಾರನ) ತಿಂಬೋದು, ಒಳ್ಳ ಇಚಾರನ ಕೇಳ್ದು, ಒಳ್ಳ ವಸ್ತುಗಳ ನೊಡ್ದು, ಒಳ್ಳ ಮಾತ್‌ನೆ ಮಾತಾಡ್ದು, ಯಾಗೋಳು ಒಳ್ಳೊಳ್ಳ ಇಚಾರನ ಚಿಂತೆ ಮಾಡ್ದು, ಇದೇ ಶೌಚ. ನಾವು ವಾಸ ಮಾಡ್ವ ಮನೆ, ಮನೆ ಸುತ್ತ ಮತ್ತನ ಶುಚಿಯಾಗಿ ಇಸಿಕಂಬೋದು ಮುಖ್ಯ- ಇಂತ್ಹವುಕೆ ಮಾತ್ರ ದೇವ್ರುನ ಕಾಂಬಕೆ ಸಾಧ್ಯ. ದೇವ್ರ ಆಶೀರ್ವಾದ ಸಾ ಇವುಕೆ ಮಾತ್ರ.

**ಸಂತೋಸ:** ತೃಪ್ತಿ ಮತ್ತೆ ಶಾಂತಿ ಮನ್ಸ್‌ನ ಸ್ಥಿತಿಗ–ಇದರ ಹಿಡ್ತಲಿ ಇಸಿಕಂಡ್, ಭಗವಂತ ಕೊಟ್ಟದರ್ಲಿ ಯಾರ್ ತೃಪ್ತಿಂದ ಜೀವನ ಸಾಗ್ಸವೆ ಅವು ಮಾತ್ರ ಶಾಂತಿದ ಜೀವನ ನಡ್ಸಿಕೆ ಸಾಧ್ಯ. ಇಂತವನಲ್ಲಿ ಜಾತಿ, ಜನಾಂಗ, ಸಂಪತ್ತ್ ಯಾವ ಭೇದ ಬಾವ ಇರ್‍ದುಲೇ; ಅಂತ್ಸವನೇ ಜೀವನಲಿ ಎಂತಾ ಕಷ್ಟದ ನಡುಲೂ ಕುಷಿಲಿ ನೆಗಾಡಿಕಂಡೆ ಇದ್ದದೆ.

**ತಪಸ್ಸ್:** ತಪಸ್ಸ್‌ನ ಶಬ್ಧದ ಮೂಲ–'ತಪ್' ತಪ್‌ಂತೇಳ್ರೆ, ಉರಿ-ಬೆಳ್ಕ್-ದುಃಖಂದ ಅನ್‌ಬವ್ರುಸುದು ಬೆಂಕಿಂದ ಸುಡ್ತುತಾ ಅರ್ಥ. ಬೆಂಕಿಂದ ಚಿನ್ನನ ಕಾಸಿರೆ ಶುದ್ಧ ಆದೆಂತ ನಾವ್ಗೆ ಗೊತ್ತು. ನಮ್ಮ ತೊಪ್ಪುಗಳ ಗ್ಯಾನಮಾಡಿ ಬೇಜಾರ ಪಟ್ಟಾಕನ ನಮ್ಮ ಮನ್ಸ್ ಶುದ್ಧ ಆದೆ. ಇದರ್‌ಂದ ನಮ್ಮ ವ್ಯಕ್ತಿತ್ವ ಬೆಳ್ವದೆ. ಅಯ್ಯೆಪ್ಪನ, ಗುರುಹಿರಿಯರ ಗೌರವಂದ ಕಾಂಬೊದು ಒಂದು ತಪಸ್ಸ್. ತಪಸ್ಸ್‌ಲಿ ಮೂರ್ ವಿಧ-ಕಾಯಕ, ವಾಚಕ, ಮಾನಸಿಕ, ಕೆಟ್ಟ ಕೆಲ್‌ಸ ಮಾಡದೆ ಇರ್‍ದು ಕೆಟ್ಟ ಗ್ಯಾನಗಳ ಮಾಡದೆ ಇರ್‍ದು ಮತ್ತೆ ಕೆಟ್ಟ ಮಾತ್‌ಗಳ ಆಡದೆ ಇರ್‍ದು, ಮೂರ್ ತಪಸ್ಸ್‌ಗಳ ಪಾಲ್‌ಸ್‌ವಂಗೆ ದೇವರ ಅಪ್ಪಣೆ ಇಲ್ಲದೆಯಾವ್ದು ನಡಿಯುಲೆತ ಗೊತ್ತಾದದೆ. ಅಂತವ ಕಾಲಕ್ಕೆ ಮತ್ತೆ ಮನ್ಸ್‌ಗೆ ಸಮ್ಮಂದಪಟ್ಟ ವ್ಯಕ್ತಿತ್ವನ ಬೆಳ್ಸಿಕಂಡ್ರೆ ಈ ತರದ ತಪಸ್‌ಂದ ವ್ಯಕ್ತಿ, ಸಮಾಜಲಿ ಪ್ರಭಾವಿ ಆದೆ.

**ಸ್ವಾಧ್ಯಾಯ:** "ಸ್ವಾ"ಂತೇಳ್ರೆ ತನಿಗೆ ತಾನೇ, "ಅಧ್ಯಾಯ"ಂತೇಳ್ರೆ ತಿಳ್ಕಂಬೊದು. ಓದು ಅಥವ ವಿದ್ಯೆಂತೇಳ್ರೆ ವ್ಯಕ್ತಿಲಿರ್‌ವ ಉತ್ಕೃಷ್ಟ ಗುಣಗಳ್‌ನ ವ್ಯಕ್ತಗೊಳ್ಸುದು. ಸಾಧ್ಯ ಆದಷ್ಟ್ ಧಾರ್ಮಿಕ ಪುಸ್ತಕಗಳ ಓದುದರ್‌ಂದ ನಮಿಗೆ ಒಳ್ಳ ತಿಳ್‌ವಳಿಕೆ ಬಂದ್ ನಾವು ಒಳ್ಳೆ ವ್ಯಕ್ತಿಗ ಆದವೆ, ಆದರ್‌ಂದ ಪುರ್ಸೊತ್ ಇರ್ಕನ ಒಳ್ಳೊಳ್ಳೆ ಪುಸ್ತಕಗಳ ಓದುದೆ ಒಂದ್ ಯಜ್ಞ.

**ಈಶ್ವರ ಪ್ರಣಿಧಾನ:** ವ್ಯಕ್ತಿ ತನ್ನ ಕೆಲ್‌ಸ ಇಚ್ಛೆ ಇದರ ದೇವ್ರುಗೆ ಅರ್ಪಿಸುದೇ ಈಶ್ವರ ಪ್ರಣಿಧಾನ, ನಾವು ಹಗ್‌ಲೆಲ್ಲಾ ನಮ್ಮ ಇಷ್ಟದಂಗೆ ಕೆಲ್‌ಸ ಮಾಡ್‌ವೆ ಆದರ ಫಲಕ್ಕಾಗಿ ಹಾತೊರ್‍ದವೆ. ಫಲದ ಆಶೆನೇ ನಮ್ಮ ದುಃಖಕ್ಕೆ ಮೂಲ ಕಾರಣ. ಸಮರ್ಪಣಾ ಭಾವನೆಂದ ಕೆಲ್‌ಸ ಮಾಡ್‌ಕನ ನಮ್ಮಲ್ಲಿ ಧೈವಭಕ್ತಿ ಉಂಟಾದೆ. ರಾತ್ರೆ ಮಲ್ಗಿಕೆ ಮುಂದೆ ಒಮ್ಮೆ ಅಂದ್‌ನ ದಿನ ಮಾಡ್ದ ಎಲ್ಲಾ ಕೆಲ್‌ಸಗಳ ಗ್ಯಾನ ಮಾಡಿ ಅದರ್ಲಿ ಒಳ್ಳೆದ್ ಮತ್ತೆ ಕೆಟ್ಟದರ ಭಾಗ ಮಾಡಿ ಇನ್ನ್‌ಮುಂಬೆ ನಂಗೆ ಕೆಟ್ಟ ಕೆಲ್‌ಸ ಮಾಡ್ವ ಬುದ್ದಿ ಕೊಡ್ಬಡ ದೇವ್ರೆಂತಾ ದೇವ್ರುನ ಪ್ರಾರ್ಥಿಸಿ ನಮ್ಮ ಎಲ್ಲ ಕೆಲ್‌ಸನ ದೇವರ ಚರಣಕ್ಕೆ (ಪಾದಕ್ಕೆ) ಸಮರ್ಪಣೆ ಮಾಡೊಕು. ಹಾಂಗೆ ಹೊತಾರೆ ಎದ್ದ್ ಈ ದಿನ ನಾ ಒಳ್ಳ ಕೆಲ್‌ಸ ಮಾಡ್‌ವಂಗೆ ಒಳ್ಳ ಬುದ್ಧಿ ಕೊಡೊಕುಂತ ದೇವ್ರುನ ಬೇಡೊಕು. ಈ ಅಭ್ಯಸಂದ ವ್ಯಕ್ತಿ ಒಳ್ಳೆಂವ ಆದೆ, ಅಲ್ಲದೆ ದೇವ್ರು ಕೊಟ್ಟದರ ಅವಂಗೆ ಅರ್ಪಣೆ ಮಾಡುದರ್‌ಂದ ಜೀವನ ಪೂರ್ಣ ಆದೆ.

ಹೀಂಗೆ ಧಾರ್ಮಿಕ ನಿಬಂಧನೆಗಳ ಅರ್ಥ ಮಾಡ್ಕಂಡ್ ಅದರ ನಮ್ಮ ಜೀವನಲಿ ಆಚರ್ಸಿಕಂಡ್ ಬಾಕನ ನಮಿಗೆ ಧೈವಿಕ ಶಕ್ತಿ ಎಂತ್ಸದ್‌ಂತ ಗೊತ್ತಾದೆ. ಹಂತಂತಾಗಿ ನಮ್ಮ ಗುಣ ಪರಿವರ್ತನೆ ಆಕಂಡ್ ಬಂದ್, ಪ್ರತಿ ಜೀವಿಗಳ ಪ್ರೀತಿ ಪ್ರೇಮಗಳ್‌ಂದ ಕಾಂಬ ಸದ್ಗುಣಗ ನಮ್ಮಲ್ಲಿ ಬೆಳ್ದ್ ನಾವು ಶ್ರೇಷ್ಠ ವ್ಯಕ್ತಿಗ ಆದವೆ. ಪ್ರಪಂಚಲಿ ಯಾರ್ ಶ್ರೇಷ್ಠಾಂತ ಕೇಳ್ರೆ–ಧನಿಕ ಅಲ್ಲ, ಅಧಿಕಾರ ಇರ್‌ವಂವಲ್ಲ, ಯಾರ್ ಸದ್ಗುಣಗಳ ಸಂಪಾದ್ಸಿಕಂಡ್ ದೇವರ ಕಾಂಬಕೆ ಹೊರ್ಟೊಳೊ, ನಾವು ಯಾರ್‍ನ ದೇವ್ರುಂತೇಳಿ ಕರ್‍ದವೊ, ಅದ್ ಪ್ರಪಂಚಲೆಲ್ಲಾ ಹಬ್ಬಿಕಂಡ್ ಎಲ್ಲವರ್ಲಿ ಕೆಲ್‌ಸಗಳ ಮಾಡ್ಸಿಕಂಡ್ ಈ ಜಗತ್ತ್‌ನ ನಿಯಂತ್ರಿಸಿ ನಡ್ಸುವ ಅವನ ಬಗ್ಗೆ ಜೆನಗಳಿಗೆ ತಿಳ್‌ವಳಿಕೆ ಕೊಡ್‌ವಂವನೆ ಜಗತ್ತ್‌ಲಿ ಶ್ರೇಷ್ಠ.

—O—



ನೀವೇನ್ ಹೆದ್ರ್‌ಬೊಡಿ ಸಾರ್ ಬೆದ್ರಿಕೆ ಹಾಕಿದಂವ ನಿಮ್ಮನ ಕೊಂದರೆ ಅವನ ನಾವು ಸುಮ್ಮನೆ ಬುಟ್ಟವೇಂತ ತಿಳ್ಕಂಡೊಳರಿಯಾ ....?

# ದಕ್ಷಿಣ ಕನ್ನಡ ಜಿಲ್ಲೆಲಿ ಗೌಡ ಕನ್ನಡ

ಜೆ. ಯಂ. ಗೌಡ, ಕಮಿಲ

ಮಾತಿಗೆ ಬಾಸೆ ಮಾಧ್ಯಮ, ನಮ್ಮ ದೇಶ ಬಾಸೆಗಳಿಗೆ ತವರು ಮನೆ ಇದ್ದ ಹಾಂಗೆ. ಇಲ್ಲಿ ಸುಮಾರ್ ಎರ್ಡ್ ಸಾವ್ರ ಬಾಸೆಗ ಒಳೊ. ಹಾಂಗೆ ನಮ್ಮ ಕರ್ನಾಟಕ ರಾಜ್ಯದ ಜೆನ ತುಂಬಾ ಬಾಷೆಗಳ್‌ನ ಮಾತಾಡ್‌ವೆ. ಕರ್ನಾಟಕಲಿ ಕನ್ನಡ ಪ್ರಧಾನ ಬಾಸೆ ಆದರ್‌ಂದ 'ಕನ್ನಡ ನಾಡ್'ಂತೇಳಿ ಹೆಸ್ರ್ ಬಂದುಟು.

ಬಾಸೆಗಳ್‌ಲಿ ಎರ್ಡ್ ವಿಧ. ಒಂದು ಲಿಪಿ ಇರ್‌ವ ಬಾಸೆ, ಇನ್ನೊಂದು ಲಿಪಿ ಇಲ್ಲದ ಬಾಸೆ. (Script) ತುಳು, ಕೊಂಕ್‌ಣಿ ಇಂತ ಲಿಪಿ ಇಲ್ಲದ ಬಾಸೆಗಳ್ಳಂಗೆ 'ಗೌಡಕನ್ನಡ'ನೂ ಸಾ ಒಂದು. ಗೌಡ ಜನಾಂಗದೊವು ಕರ್ನಾಟಕದ ಶ್ರೇಷ್ಠ ಜಾತಿಗಳ್‌ಲಿ ಒಂದು. ಇವು ಕರ್ನಾಟಕದ ನಾಗರೀಕತೆ ಮತ್ತ್ರೆ ಸಂಸ್ಕೃತಿನ ಪ್ರತೀಕ. ಆದರ್‌ಂದಲೇ ಹಿಂದೆನಾ ಕಾಲಲಿ, ಅಂದರೆ ಕದಂಬ, ಗಂಗ, ಮುಂತಾದ ರಾಜ ವಂಶಗಳ ಕಾಲಲಿ ಕೂಡಾ ಗೌಡ ಜನಾಂಗದೊವುಕೆ ಹೆಚ್ಚ್‌ನ ಪ್ರಾಮುಖ್ಯತೆನ ಕೊಟ್ಟೊಳದ್. ಉದಾ:- ಊರ್‌ಗೌಡ, ನಾಡ್‌ಗೌಡ, ಕಟ್ಟೆಮನೆ ಇವು ಹಳ್ಳಿನ ಆಡಳ್ತದ ಕೇಂದ್ರ. ಸಾಮಾನ್ಯಾಗಿ ಹೆಚ್ಚ್‌ನ ಜನಾಂಗದೊವುಕೆ ಅನಕ್ಷರ ಆದ ಆಡ್ವ ಬಾಸೆಗ ಒಳೊ. ಆದರೆ ಈ ಹೆಚ್ಚ್‌ನ ಬಾಸೆಗಳಿಗೆ ಲಿಪಿ ಇಲ್ಲೆ. ಆದರೆ ಇಂತ ಬಾಸೆಗ ತನ್ನದೆ ಆದ ಪ್ರೌಢಿಮೆನ ಮೆರ್ದುಟು. ಒಂದು ಕಾಲಲಿ ಈ ಬಾಸೆಗ ಉತ್ತಮ ಸ್ಥಿತಿಲಿ ಇದ್ದಿರ್ದ್‌ಂತಾ ಆದರ ಜಾನಪದ ಕತೆ, ಗೀತೆ ಇವುಗಳ್ನ ಓದ್‌ಕನ ಗೊತ್ತಾದೆ. 'ಗೌಡ ಕನ್ನಡ' ಮಾತಾಡ್‌ವ ಜೆನ ದ. ಕ. ಜಿಲ್ಲೆನ ದಕ್ಷಿಣ ಭಾಗದ ಸುಳ್ಯ ಮತ್ತ್ರೆ ಪುತ್ತೂರು ತಾಲ್ಲೂಕ್‌ಲಿ ಜಾಸ್ತಿ ಸಂಖ್ಯೆಲಿ ಒಳೊಂತ ಹೇಳಕ್. ಗೌಡ ಜನಾಂಗದೊವು ಕೂಡಾ ಜಾಸ್ತಿ ಇರ್ದು ಈ ಬಾಗಲೆ.

ಬಾಸಾ ಸಮ್ಮಂದ: ಪ್ರತಿಯೊಂದು ಬಾಸೆಗಳಿಗೂ ತಮ್ಮೊಳಗೆ ಒಂದ್ ರೀತಿನ ಸಮ್ಮಂದ ಇಲ್ಲದೆ ಇಲ್ಲೆ. ಉದಾ:- ಕನ್ನಡ, ಸಂಸ್ಕೃತ, ಇವು ಬಾಸಾ ಸಮ್ಮಂದನ ಎಷ್ಟರ ಮಟ್ಟಿಗೆ ಮಾಡಿಕಂಡೊಳಂತ ಹೇಳ್ರೆ, ತಮ್ಮ ಹೆಚ್ಚ್‌ನ ಶಬ್ಧಗ ಬವಲಾವಣೆ ಆಗಿ ಸಂಸ್ಕೃತನೋ, ಕನ್ನಡನೋಂತ ಹೇಳಿಕೆ ಬಂಗ ಆದೆ. ಹಾಂಗೆ "ಗೌಡ ಕನ್ನಡ" ಸಂಸ್ಕೃತ ಮತ್ತ್ರೆ ಕನ್ನಡದ ಹತ್ರ ಸಮ್ಮಂದನ ಇಸಿಕಂಟು. ಈ ಬಾಸೆ ಜನಪದ ಕಲೆಗೆ ಮೂಲ ಗೌಡುಗ ಗೌಡ ಕನ್ನಡ, ತುಳು ಮತ್ತ್ರೆ ಕನ್ನಡಂತ ಮೂರ್ ವಿಧದ ಬಾಸೆಗಳ ಹೆಚ್ಚಾಗಿ ಮಾತಾಡ್‌ವೆ. ಕೆಲವು ಕಡೆ ಮಳ್ಯಾಳ ಮುಂತಾದ ಬಾಸೆಗಳ ಮಾತಾಡ್‌ವೆ.

ಇನ್ನ್ ಮುಂದೆ ನಮ್ಮ ಬಾಸೆನ ಹೆಚ್ಚ್‌ನ ರೀತಿಲಿ ಪ್ರಸಾರ ಮಾಡಿ ನಾಟಕ ಮುಂತಾದ ಕಾರ್ಯಕ್ರಮಗಳ ಮಾಡಿಕೆ ಪ್ರಯತ್ನ ಪಡೊಕು. ಎಲ್ಲಾ ಬಾಸೆಗಳ್ಳಂಗೆ ನಮ್ಮ ಗೌಡ ಕನ್ನಡನೂ ಸ್ವತಂತ್ರ ಬಾಸೆ. ನಮ್ಮ ಬಾಸೆ ಈಗ ಇರ್‌ವ ಸ್ಥಿತಿಗಿಂತ ಇನ್ನಸ್ಟ್ ಬೆಳ್ದ್ ಪ್ರಚಾರ ಆದರೆ ತುಂಬಾ ಹೆಮ್ಮೆನ ವಿಚಾರ. ಗೌಡ ಕನ್ನಡ ಬಾಸೆನ ಅಭಿವೃದ್ಧಿನ ದಾರಿಲಿ ಒಂದು ಸಂಕಲನ ಮಾಡ್ತ್ ಒಂದು ಮೈಲಿಕಲ್ಲ್.

# ಸ್ತೋತ್ರ

**ಬೊಳ್ಪಿಗೆ ಎದ್ದ್ ಕೈ ನೋಡಿ :** ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತಿ : ಕರಮೂಲೇತು ಗೋವಿಂದ : ಪ್ರಭಾತೇ ಕರ ದರ್ಶನಂ.

**ತಾತ್ಪರ್ಯ :** ಕೈ ಬೆರ್ಳ್‌ಗಳ ಕೊಡಿಲಿ ಲಕ್ಷ್ಮಿ ವಾಸಿಸಿದೆ, ಕೈಗಳ ಮಧ್ಯಲಿ ಸರಸ್ವತಿಯ ವಾಸ, ಕೈಗಳ ಮೂಲಲಿ ಗೋವಿಂದ ವಾಸ ಮಾಡ್ದೆ. ಆದರ್‌ಂದ ಬೊಳ್ಪಿಗೆ ಎದ್ದ್ ಕೈ ನೋಡ್ರೆ ಈ ಮೂರ್ ದೇವ್ರ ನೋಡ್ದ ಫಲ ಉಟ್ಟು.

**ಬೊಳ್ಪಿಗೆ ಎದ್ದ್ ನೆಲ ಮೆಟ್ಟಿಕೆ ಮುಂದೆ :** ಸಮುದ್ರ ವಸನೇ ದೇವೀ ಪರ್ವತಸ್ತನ ಮಂಡಲೇ, ವಿಷ್ಣು ಪತ್ನಿ ನಮಸ್ತುಭ್ಯಂ ಪಾದ ಸ್ಪರ್ಶಂ ಕ್ಷಮಸ್ವಮೇ.

**ತಾತ್ಪರ್ಯ :** ಸಮುದ್ರಗಳೇ ಸೀರೆ ಆಗಿ ಪರ್ವತಗಳೇ ಮೊಲೆಗಳಾಗಿ ಇರ್‌ವ ವಿಷ್ಣುನ ಹೆಣ್ಣಾದ ಭೂಮಿತಾಯಿ ನಿನ್ನ ಈ ನನ್ನ ಕಾಲ್‌ಗಳ್‌ಂದ ಮೆಟ್ಟಿದಕ್ಕಾಗಿ ನನ್ನ ಕ್ಷಮಿಸ್.

**ಮಲ್ಗಿಕೆ ಮುಂದೆ ಕುದ್ದ್ ಕೈ ಮುಗ್ದ್ ಹೇಳ್ದು :** ಕರ ಚರಣ ಕೃತಂ ವಾ ಕಾಯಜಂ ಕರ್ಮಜಂ ವಾ ಶ್ರವಣ ನಯನಜಂ ವಾ ಮಾನಸಂ ವಾऽ ಪರಾಧವಮ್ । ವಿಹಿತಮ ವಿಹಿತಂ ವಾ ಸರ್ವ ಮೇತತ್ ಕ್ಷಮಸ್ವ ಜಯ ಜಯ ಕರುಣಾಬ್ಧೇ ಶ್ರೀ ಮಹಾದೇವ ಶಂಭೋ ।

**ತಾತ್ಪರ್ಯ :** ಕೈ, ಕಾಲ್, ಮೈ, ಕೆಬಿ, ಕಣ್ಣ್‌ಗಳ್‌ಂದ ಕೆಲ್ಸ ಮಾಡ್‌ಕನ ಈ ಇಡೀ ದಿನಲಿ ನನ್ನಂದಾದ ಒಳ್ಳೆ, ಯಾ ಕೆಟ್ಟ ವಿಚಾರಗಳಿಗಾಗಿ ಓ ದೇವ್ರೆ ನನ್ನ ಕ್ಷಮಿಸೊಕೊಂತ ಬೇಡ್ನೆ.

—ಸಂಗ್ರಹ: ಸ. ಮಾ. ದೇವಪ್ಪ

# ಗೌಡರ ಮೊದುವೆ

—ಸೂದನ ಎಸ್. ಈರಪ್ಪ, ಪಾಲೂರು

ಪೂರ್ವ ಕಾಲಲಿ ಹೆಳ್ಮಕ್ಕಳಿಗೆ ಮೊದುವೆ !ಆಕುಂತೇಳ್‌ನ ನಿರ್ಭಂದ ಇತ್ಲೆ. ಆ ಕಾಲಲಿ ಅವು ಸ್ವತಂತ್ರರ್; ಮತ್ತೆ ಮನ್ಸ್ ಬಂದಂಗೆ ನಡ್ಕಂಬತ್ತಿದ್ದೊ. ಈ ಕೆಟ್ಟ ಪರಿಣಾಮನ ತಿಳ್ದ 'ಶ್ವೇತಕೇತು' ಎಂಬ ಋಷಿ, ಅಲ್ಲಿಂದ ಮೊದುವೆ ಪದ್ಧತಿನ ಜಾರಿಗೆ ತಂದ್ ಹೆಳ್ಮಕ್ಕಳಿಗೆ ಗವುರವದ ಒಂದು ಗೆರೆನ ಹಾಕಿ ಕೊಟ್ಟತ್ (ಮ.ಬಾ.ಆ ೧೨೨)

ನಮ್ಮ ಹಿಂದೂ ಧರ್ಮದ ಪ್ರತಿ ಒಂದು ಜನಾಂಗದವುಕೂ ಅವರವರ್ದೇ ಆದ ಬಾಸೆ, ಶಾಸ್ತ್ರ, ಸಂಪ್ರದಾಯುಗ ಹಿಂದೆಂದಳೇ ನಡ್ಕಂಡ್ ಬಂದುಟು. ಹಂಗೇ ಗೌಡ ಜನಾಂಗದವುಕೂ ಸಾ ತಮ್ಮದೇ ಆದ ಬಾಸೆ, ಶಾಸ್ತ್ರ, ಸಂಪ್ರದಾಯುಗ ಒಳೊ. ಆದರೆ ಕಾಲ ಮುಂದ್ವರ್ದಂಗೆ ಈ ಎಲ್ಲಾ ಸಂಪ್ರದಾಯುಗ ಮರೆ ಆಕಂಡ್ ಬರ್ತಾ ಉಟ್ಟು.

ನಾವು ಕೆಲು ಒಳ್ಳೆ ಸಂಪ್ರದಾಯುಗಳ ಮರ್ತ್ ಇಲ್ಲರೆ ಹಾಂಕಾರಲಿ ನಾಶ ಪಡ್ಸಿಕೆ ನೋಡ್ದು ಕಂಡಿತಾ ಒಳ್ಳೆದಲ್ಲ. ಇದರ್‌ಂದ ನಮ್ಮ ಪವಿತ್ರ ಹಿಂದು ಧರ್ಮ ಮತ್ತೆ ಜೆನ ಜೀವನದ ಸ್ಥಿತಿ-ಗತಿ ಹದಗೆಡುದರ್ಲಿ ಯಾವ ಸೊಂಸಯನೇ ಇಲ್ಲೆ. ನಾವು ಪ್ರಾಣಿಗಳಂಗೆ ಜೀವನ ನಡ್ಸೊಕುತ್ತಾದರೆ ನಮಿಗೆ ಯಾವ ಶಾಸ್ತ್ರ, ಕಟ್ಟ್ ಕಟ್ಟಳೆಗ ಅಗತ್ಯ ಇಲ್ಲೆ! ಆದರೆ ಮೊನ್ಸ ಆಗಿ ಹುಟ್ಟಿದ ಮೇಲೆ ಮೊನ್ಸನ ರೀತಿ ಬಾಳೊಕುತ್ತಾದರೆ ಕೆಲು ಒಳ್ಳೆ ಶಾಸ್ತ್ರ-ಸಂಪ್ರದಾಯುಗ ಮಾತ್ರ ಕಂಡಿತಾ ಬೇಕೆ ಬೇಕು. ಆದರ್‌ಂದ ನಾವು ಇನ್ನ್ ಮುಂದೆ ಇದರೆಲ್ಲಾ ಆಲೋಚನೆ ಮಾಡಿ, ನಮ್ಮ ಒಳ್ಳೆ ಸಂಪ್ರದಾಯುಗಳ ನಾಶ ಆಕೆ ಬುಡದೆ ಕಾಪಾಡಿಕಂಡ್ ಬಾದು ತೀರಾ ಅಗತ್ಯ.



ಮೊದುಮುಕ್ಕ

ಹತ್ತ್ ಕುಟುಂಬಗಳ್ಲಿದ್ದ ಗೌಡ ಜನಾಂಗ ಕಾಲ ಕ್ರಮೇಣ ಒಡ್‌ದ್ ಹದ್ನೆಂಟ್ ಕುಟುಂಬಗ ಆದೊ. ಇದರ್ನೇ ನಮ್ಮ ಬಾಸೆಲಿ 'ಬಳಿ'ಂತೇಳಿ (ಗೋತ್ರ) ಕರ್ದವೆ. ಒಂದೇ 'ಬಳಿ'ನ ಗೂಡೆನ ತಂಗೆತೇಳ್ವ ಅಭಿಪ್ರಾಯ ಇರುದರ್‌ಂದ ಒಂದೇ 'ಬಳಿ'ನ ಗೂಡೆನೊಟ್ಟಿಗೆ ಮೊದುವೆ ಆವ ಕ್ರಮ ಇಲ್ಲೆ. ಹಂಗಾಗಿ ಬೇರೆ 'ಬಳಿ'ನ ಗೂಡೆನ ಹುಡ್ಕಿ ಮೊದುವೆ ಆದವೆ. ಕೊಡಗ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆಲಿರ್‌ವ 'ಬಳಿ'ಗಳ ಸಂಖ್ಯೆ ಇಸ್ಟ್-

೧] ನಂದರ ಬಳಿ ೨] ಹೆಮ್ಮನ ಬಳಿ ೩] ಸೆಟ್ಟಿ ಬಳಿ (ಹಾಲ್‌ಗುಂಡರ) ೪] ಕಬರ್ ಬಳಿ ೫] ಚಾಲ್ಯರ ಬಳಿ ೬] ಮೂಲ್ಯರ ಬಳಿ ೭] ಬಂಗಾರ್ ಬಳಿ ೮] ಗೌಡರ ಬಳಿ ೯] ಗೋಳಿ ಬಳಿ ೧೦] ಸಾಲೆ ಬಳಿ ೧೧] ಬಳಸನ್ನ ಬಳಿ ೧೨] ಕರ್ಬನ್ನ ಬಳಿ ೧೩] ಔದನ್ನ ಬಳಿ ೧೪] ನಾಯರ್ ಬಳಿ ೧೫] ಕರೆಂಜೆರ್ ಬಳಿ ೧೬] ಚಿತ್ರೆರ ಬಳಿ ೧೭] ಗುಂಡರ ಬಳಿ ೧೮ ಲಿಂಗಾಯಿತ ಬಳಿ.

ಸಾಮಾನ್ಯಾಗ ತಮ್ಮ ಅಂತಸ್ತಿಗೆ ಸರಿ ಆದ ಕುಟುಂಬದೊಟ್ಟಿಗೆ ಮೊದುವೆ ಸಮ್ಮಂದನ ಬೆಳ್ಸದು ವಾಡಿಕೆ. ಹೆಚ್ಚಾಗಿ ಕೆಳ ಅಂತಸ್ತ್‌ನವುಕೆ ಹೆಣ್ಣ್ ಕೊಡ್ದು ಬಾಳ ಕಮ್ಮಿ. ಹೈದನ ಕಡೆವು ಬೇಕಾದವನೊಬ್ಬನೊಟ್ಟಿಗೆ ತಮಗೆ ಸರಿ ಕಾಂಬ ಗೂಡೆನ ಮನೇಲಿ ಸಮ್ಮಂದದ ವಿಚಾರನ ಎತ್ತ್‌ವೆ. ಹೆಣ್ಣ್ ಹೆತ್ತೋವುಕೆ ಹಿತ ಕಂಡರೆ ಮೊದುವೆ ಆಗ್ವ ಹೈದನ ಮನೆಗೆ ಕರ್ದವೆ. ಹೈದ ತನ್ನ ಕುಟುಂಬದ ಹಿರಿ ಮೊನ್ಸರೊಟ್ಟಿಗೆ ಇಲ್ಲರೆ ದೊಸ್ತಿಗಳೊಟ್ಟಿಗೆ ಗೂಡೆನ ನೋಡಿಕೆ ಹೋದೆ. ಹೈದುಗೂ ಗೂಡೆಗೂ ಒಬ್ಬರ್‌ದೊಬ್ಬಂಗೆ ಒಪ್ಪಿಗೆ ಆತ್‌ತಾ ಕಂಡ್ರೆ ದೊಡ್ಡೋವು ಮುಂದೆನ ಏರ್ಪಾಡ್ ಮಾಡುವೆ ಮತ್ತೆ ದೇವಸ್ಥಾನಲಿ ಹೂ ಕೆಯಿನ ಕ್ರಮ ಉಟ್ಟು; ಬೆಳಿ ಹೂ ಬಿದ್ದರೆ ಶುಭಂತೇಳಿಯೂ, ಕೆಂಪು ಹೂ ಬಿದ್ದರೆ ಅಶುಭಂತೇಳಿಯೂ ಅರ್ಥ. ಇನ್ನ್ ಕೆಲು ಕಡೆಗಳ್ಲಿ ಜೋಡಿ ಹೂ ತೆಗ್ದ್ ಕಡೆಗೆ ಒಂದು ಹೂ ಮೊಳ್ದರೆ ಸುಭಾಂತಾ ಅರ್ಥ ಉಟ್ಟು. ಒಬ್ಬಂದೊಬ್ಬಂಗೆ ಸರಿ ಆದೂಂತ ಕಂಡ್ರೆ ಹೆಣ್ಣ್ ನಿಶ್ಚಯದ ದಿನನ ಗೊತ್ತ್ ಮಾಡಿ ಹೈದನ ಕಡೆನರ, ಗೂಡೆನ ಕಡೆವು ವೀಳ್ಯ ಶಾಸ್ತ್ರಕ್ಕೆ ಇಂತಃ ದಿನ ಬರೊಕುಂತೇಳಿ ತಿಳ್ಸವೆ.

ವೀಳ್ಯ ಶಾಸ್ತ್ರ (ಲಗ್ನ ಕಟ್ಟುದು):- ಹೈದನ ಕಡೆಂದ ಐಸ್ ಜೆನ ನಮ್ಮ ಪದ್ಧತಿನ ಉಡಿಗೆಲಿ ವೀಳ್ಯ ಶಾಸ್ತ್ರಕ್ಕೆ ಗೂಡೆನ ಮನೆಗೆ ಹೋದವೆ. ಆ ದಿನ ಹೈದ ಮಾತ್ರ ಹೋವಾಂಗಿಲ್ಲೆ. ಹಂಗೆ ಬಂದ ನೆಂಟ್ರಗಳಿಗೆ ಗೂಡೆನ ಮನೆವು ಮನೆ ಸತ್ಕಾರ ಮಾಡುವೆ. ಆ ಮೇಲೆ ಕಯ್ಯಾಲೆಲಿ ಒಂದು ಹೊಸ ಚಾಪೆ ಹಾಸಿ ಮುಕ್ಕಾಲ್ ಮೇಲೆ ಒಂದು ಕಂಚ್‌ನ ಬಟ್ಲ್‌ಲಿ ಸೊಲ್ಪ ಅಕ್ಕಿ, ಐದ್ ವೀಳ್ಯದೆಲೆ, ಐದ್ ಹಣ್ಣ್ ಅಡ್ಕೆಮತ್ತೆ ಒಂದು ಮಣ್ಣ್‌ನ ದೀಪ, ಮತ್ತೊಂದು ಕಡೆ ಇಲ್ಲರೆ ಚಾಪೆನ ನಡೂಲಿ ಮುಕ್ಕಾಲ್‌ನ ಮೇಲೆ ಒಂದು ಹರಿವಾಣ-ಅದರ್ಲಿ ಸೊಲ್ಪ ಅಕ್ಕಿ, ಎರ್ಡ್ ವೀಳ್ಯದೆಲೆ, ಹಣ್ಣಡ್ಕೆ ಅದರ ಕೆಳಗೆ ಒಂದು ಬಿಂದಿಗೆಲಿ ನೀರ್ ಇಸಿದ್ದವೆ; ಮತ್ತೆ ನಮ್ಮ ಪದ್ಧತ್ಪದ ಉಡಿಗೆಲಿ ಗೂಡೆನ ಕಡೆಂದ ಮೂರ್ಜೆನ, ಹೈದನ ಕಡೆಂದ ಮೂರ್ಜೆನ ಎದ್ರ್-ಬದ್ರಾಗಿ ಕುದ್‌ಕಂಡ್ ಶಾಸ್ತ್ರ ಪೂರೈಸುವೆ.

ವೀಳ್ಯ ಕಟ್ಟ್‌ವ ವಿವರ ಹಿಂಗುಟ್ಟು :-

೧] ಹೆಣ್ಣ್‌ಮಾತ್‌ನ ವೀಳ್ಯ ೨] ಸಾಲಾವಳಿ ವೀಳ್ಯ ೩] ಹೆಣ್ಣ್‌ಮಾತ್‌ನ ಕರಾರ್ ವೀಳ್ಯ ೪] ಲಗ್ನದ ಕುಡಿ ವೀಳ್ಯ ೫] ದೇವರ ವೀಳ್ಯ ೬] ಗುರುವೀಳ್ಯ ೭] ಬಾಂಧವರ ವೀಳ್ಯ ೮] ತಂದೆ ವೀಳ್ಯ ೯] ತಾಯಿ ವೀಳ್ಯ ೧೦] ಅಚ್ಚುಕಟ್ಟುವ ವೀಳ್ಯ ೧೧] ಬಣ್ಣಬಂಗಾರ ವೀಳ್ಯ ೧೨] ತೆರವು ಮರೆವು ವೀಳ್ಯ.

ಈ ದಿನಲೇ ಕೊಡ್ವ-ತಕಂಬ ವಿಚಾರನ ನಿರ್ಧಾರ ಮಾಡ್ವೆ, ಆ ಮೇಲೆ ಎರ್ಡ್ ಕಡೆವು ಮೊದುವೆ ಕಾಗದನ ಪ್ರಿಂಟ್ ಮಾಡಿಸಿ ನೆಂಟ್ರುಸ್ಟ್ರಗೆ ಮತ್ತೆ ಊರವುಕೆಲ್ಲಾ ಹಂಚುವೆ.

ಕೊಡಗ್‌ಲಿ ಚಪ್ಪರ:- ಕೊಡಗ್‌ಲಿ ಮೂರ್ತದ ಹಿಂದೆನ ದಿನ ಕತ್ತಲೆಗೆ ಚಪ್ಪರಂತೇಳ್ವ ಒಂದು ಕಾರ್ಯಕ್ರಮನ ಇಸಿಕಂಡಳೊ. ಆ ದಿನ ಊರ್‌ನ ನೆರೆಕರೆವು ಮತ್ತೆ ನೆಂಟ್ರುಷ್ಟರ್ನ ಎಲ್ಲಾ ಕರ್ಸವೆ. ಊರವು ಬಂದ್ ಚಪ್ಪರ ಹಾಕಿ ದಾರೆ ಮಂಟಪದ ಕೆಲ್‌ಸನ ಪೂರೈಸುದು ಕ್ರಮ. ಹನ್ನೆರ್ಡ್ ಕಂಬದೊಟ್ಟಿಗೆ ಒಂದು ಹಾಲೆ ಮರದ ಕಂಬನ ಸೇರ್ಸಿ ಚಪ್ಪರ ಹಾಕಿ ಮಂಟಪನ ಅಲಂಕಾರ ಮಾಡಿವೆ.

ಒಕ್ಕಲು ಯೆಜ್‌ಮಾನ ನೆಲ್ಲಿಕಡಿ ಗೋಡೆ ಮೇಲೆ ಹಸೆ ಬರೆಕೂಂತ ಊರವುಕೆ ವೀಳ್ಯ ಕೊಟ್ಟವೆ. ಊರವು ಹೆಣ್ಣ್ ಹಸೆ ಮತ್ತೆ ಗಂಡ್ ಹಸೆನ ಬರ್ದವೆ; ಮತ್ತೆ ಬಂದೊವುಕೆಲ್ಲಾ ಊಟ ಹಾಕುವೆ.

ಬಳೆ ತೊಡ್‌ಸುವ ಶಾಸ್ತ್ರ : ಈ ಶಾಸ್ತ್ರ ಕನ್ನಡ ಜಿಲ್ಲೆಲಿ ಮಾತ್ರ ಜಾಸ್ತಿ ಬಳ್ಕೆಲಿರುದು) ಮೊದುವೆ ಹಿಂದೆನ ದಿನ ಹೊತಾರೆ (ಬೊಳ್ಪಗೆ) ಮೊದೊಳಿನೆಗೆ ಬಳೆ ತೊಡ್ಸುವ ಕ್ರಮ ಉಟ್ಟು. ಬಳೆಗಾರ್ತಿ ಚಪ್ಪರದಡಿಲಿ ಮೊದೂಳಿಗೆನ ಕೈಗೆ ಹಸ್ರ್ ಕೆಂಪು ಬಳೆಗಳ ಪೊರಾಲ್ಗಿ ತೊಡ್ಸಿದೆ; ಮತ್ತೆ ಅಲ್ಲಿದ್ದ ಎಲ್ಲಾ ಹೆಳ್ಕ್ಕಳಿಗೆ ಸಃ ಬಳೆ ಕೊಡ್ಸವೆ.



ಮೊದೊಳಿಗೆಗೆ ಬಳೆ ತೊಡ್ಸುದು

**ಎಣ್ಣೆ ಅರ್ಸಿನ ಶಾಸ್ತ್ರ:-** ಮೊದುಮಕ್ಕಳಿಗೆ ಕಾಸ್ತಾಳಿ ಕಟ್ಟಿಕೆ ಸೋದರ ಮಾವನ, ಒಕ್ಕಲು ಯೆಜ್ಮಾನ ಒಂದು ಚೊಂಬು ನೀರ್ ಕೊಟ್ಟ್ ಕೇಳ್ಕಂಡವೆ. ಮೊದುಮಕ್ಕಳಿಗೆ ಸೋದರ ಮಾವ ಕಾಸ್ತಾಳೆ ಕಟ್ಟುವೆ ಅಷ್ಟರ್ಲಿ ಒಂದು ಮುಕ್ಕಾಲ್ ಮೇಲೆ ಬಟ್ಲ್‌ಲಿ ಎಣ್ಣೆ ಅರ್ಸಿನ ಮಿಶ್ರ ಮಾಡಿ ಗರಿಕೆ ಹುಲ್ಲ್‌ನ ತಂದ್ ಇಸಿದ್ದವೆ. ಮುತ್ತೈದೆಗ ಶಾಸ್ತ್ರ ಮಾಡುವೆ, ಹೆಳ್ಮಕ್ಕ ಸೋಬಾನೆ ಹಾಡುವೆ. ಇದಾದ ಮೇಲೆ ಮೊದುಮಕ್ಕಳ ಮಿಾಸಿ ಹೊಸ ಬಟ್ಟೆ ಉಡಿಸಿ ಮನೆಗೆ ಕರ್ಕಂಬಂದವೆ. ತಲೆ ಚಪ್ಪರ್ಲಿ ಮೊದುಮಕ್ಕಳ ನಿಲ್ಸಿ ಆರತಿ ಮಾಡಿ ಒಳಗೆ ಹಸೆ ಚಾಪೆ ಮೇಲೆ ಕುದ್ರಿಸಿ ಎರ್ಡ್ ಕೈಗಳಿಗೂ ಮೊದ್ರೆಂಗಿ ಬರ್ದವೆ. (ಮುಹೂರ್ತದ ಹಿಂದೆನ ದಿನ ನಡೆವ ಶಾಸ್ತ್ರಗಳ್ಲ ದ. ಕ. ಜಿಲ್ಲೆ ಮತ್ತೆ ಕೊಡಗ್‌ಲಿ ಸೊಲ್ಪ ವೆತ್ಯಾಸಗ ಕಂಡ್ ಬಂದದೆ)



ಎಣ್ಣೆ ಅರ್ಸಿನ ಶಾಸ್ತ್ರ



ಮೊದ್ರೆಂಗಿ ಶಾಸ್ತ್ರ

ಮೊದ್ರೆಂಗಿ ಶಾಸ್ತ್ರ :- ಮೂಸಿ ಕರ್ಕಬಂದ ಮೊದು ಮಕ್ಕಳ ಹಸೆ ಮೊಂದ್ರಿಲಿ ಕುದ್ರಿಸಿ, ಮುತ್ತೈದೆಗ ಸೇಸೆ ಹಾಕಿ ಅವರ ಕೈಗೆ ಮೊದ್ರೆಂಗಿ ಇಸಿ; ಒಂದ್ ಕೈಗೆ ಸೂರ್ಯ ಇನ್ನೊಂದ್ ಕೈಗೆ ಚಂದ್ರನ ಚಿತ್ರ ಬರ್ದವೆ. ಮೊದ್ರೆಂಗಿ ಇಸ್‌ಕನ ಹೆಳ್ಮಕ್ಕ-ಆ ಬಣ್ಣ ಬರೀರಣ್ಣಾ, ಈ ಬಣ್ಣ ಬರೀರಣ್ಣ... ಸೂರ್ಯ ದೇವರ ಬಣ್ಣ ಬರೀರಣ್ಣ... ತೇಳಿ ಸೋಬಾನೆ ಹಾಡುವೆ.



ಮೊದ್ರೆಂಗಿ ಹಾಕಿದ ಕೈ ಎಷ್ಟ್ ಪೊಲ್ಲು !



ಗಂಗೆ ಪೂಜೆ



ಮೊದಃಮುಕ್ಕಳ ಕಾಲಿಗೆ ನೀರ್ ಹೊಯ್ಯೊದು

**ಮುಹೂರ್ತ :–** ಚಪ್ಪರದ ಮಾಣ್ದ್ನ ಮುಹೂರ್ತ. ಆ ದಿನ ಮುತ್ತೈದೆಗ ಚಪ್ಪರದ ದಾರೆ ಮಂಟಪದೊಳಗೆ ಅಕ್ಕಿ ಹಸೆ ಬರ್ದ್ ಹಸೆ ಮಣೆನ ಮೇಲೆ ಮೊದುಮುಕ್ಕಳ ಕೂರ್ಸಿ ಎಣ್ಣೆ ಅರ್ಸಿನ ಶಾಸ್ತ್ರ ಮಾಡಿವೆ. ಈ ಶಾಸ್ತ್ರ ಮುಗ್ದ್ ಮೇಲೆ ಮೊದುಮಂಜನ ಮುಖ ಚವರ ಮಾಡಿವೆ. ಮಿೂಸಿ ಆದ ಮೇಲೆ ಮೊದುಮುಕ್ಕಳಿಗೆ ಕುಲ ಪದ್ಧತಿನ ಪ್ರಕಾರ ಬಟ್ಟೆನ ತೊಡ್ಸುವೆ. ಬಟ್ಟೆ-ಬರೆ ತೊಡ್ಸಿ ಆದ ಮೇಲೆ 'ಫಲವೃಕ್ಷ'ದಡಿಗೆ ಬಂದ್ ಗಂಗೆಪೂಜೆ ಮಾಡುವೆ; ಮತ್ತೆ ವಾಲಗದೊಟ್ಟಿಗೆ ಚಪ್ಪರಡಿಗೆ ಬಂದವೆ. ಅಲ್ಲಿ ಮುತ್ತೈದೆಗ ಏಳ್ ಆರತಿನ ಬೆಳ್ಗುವೆ ಮತ್ತೆ ಸಣ್ಣ ಹೈದ ಇಲ್ರೆ ಗೂಡೆ ಮೊದುಮುಕ್ಕಳ ಪಾದನ ತೊಳ್ವೆ. ಮತ್ತೊಬ್ಬ ಕಾಯಿನ ತಲೆಸುತ್ತಾ ತಂದ್ ಒಡ್ದವೆ; ಇದಿಕೆ ದಿಷ್ಟಿ ಕಾಯಿ ಒಡೆದುಂತೇಳಿ ಹೇಳುವೆ. ಇದಾದ ಮೇಲೆ ಮೊಡ್ಯಾಳ ಮೊಡಿ ಬಟ್ಟೆನ ಹಾಸಿದೆ; ಮೊದುಮುಕ್ಕ ಆ ಮೊಡಿನ ಮೇಲೆ ಮೆಟ್ಟ್‌ಕಂಡ್ ಗೃಹ ಪ್ರವೇಶ ಮಾಡುವೆ. ನಂತ್ರ ಹಸೆ ಚಾಪೆಲಿ ಪೂರ್ವಕ್ಕೆ ಮುಖ ಹಾಕಿ ನಿಲ್ಲೊಕು. ಮನೆ ಯೆಜ್‌ಮಾನ ಕೈಲಿ ಒಂದು ಚೊಂಬು ನೀರ್ ಹಿಡ್ಕಂಡ್ ಅಲ್ಲಿ ಸೇರ್ದ ಜೆನಂಗಳಿಗೆಲ್ಲಾ 'ಕುಲ ದೇವ್ರು'ಗೆ ಹರ್ಕೆ ಹಣ ಕಟ್ಟುವೆಂತೇಳಿ ಎಲ್ಲವರ ಕರ್ದವೆ. ಮತ್ತೆ ವಾಟಿ ಗೊಟ್ಟುಲಿ ನಾಲ್ಕಾಣೆ ಬೆಳ್ಳಿ, ಪಾವ್ರುಲಿ, ನಾರ್ ಒಳ್ಳೆ ಮೆಣ್ಸ್ ಇಷಿ ತುಂಬಿಸಿ ಅವರ ಮುಡ್ಪುನತ್ರ ಇಸಿದೆ

ಇದಾದ ಮೇಲೆ ಮೊದುಮಕ್ಕಳ ಚಪ್ಪರ (ಮಂಟಪ) ದಡಿಗೆ ಕರ್ಕ್ಯಬಂದ್ ಕುದ್ರುಸುವೆ; ಬಂದ ಜೆನಗ ಮೊದು ಮಕ್ಕಳ ತಲೆಗೆ ಅಕ್ಕಿ ಹಾಕಿ ಆಶೀರ್ವಾದ ಮಾಡುವೆ. ಕೂಡ್ದ ಜೆನಂಗಳಿಗೆ ಮತ್ತೆ ಊಟ ಹಾಕುವೆ.

**ದಿಬ್ಬಣ:–** ಮೊದುಮಂಜನ ಕಡೆ – ದಿಬ್ಬಣ ಒಡ್ಡೊಲಗಲಿ ಗೂಡೆನ ಮನೆಗೆ ಬಂದದೆ. ಮೊದೊಳಿಗೆನ ಕಡೆವು ದಿಬ್ಬಣನ ಸ್ವಾಗತ ಮಾಡಿ ಬೇರೆ ಚಪ್ಪರಡಿಲಿ ಕುದ್ರಿಸಿ ಉಪಚಾರ ಮಾಡಿವೆ. ಮೊದುಮಂಜನ ಹಕ್ಕಲೆ ಕಳ್ಸ ಕನ್ನಡಿ ಹಿಡ್ದ ತಂಗೆನೋ ಅಕ್ಕನೋ ಇದ್ದದೆ. ಮೊದೊಳಿಗೆನ ಹಕ್ಕಲೆ ಕೂಡಾ ಹಿಂಗೆ ಇದ್ದವೆ. ಇವರ ಕಂಚಿಮಿ (ಕಂಚಿನೆಕ್ಕಿ)ತ ಕೆರ್ದವೆ. (ಮೊದುಮಕ್ಕಳಿಗೆ ಅವರ ಸೋದರ ಕಡೆಂದ ಸೋದರ ಬಾವ ಮತ್ತೆ ಸೋದರತ್ತಿಗೆ ಅಡೊಳಿಗ ಆಗಿದ್ದವೆ) ಮೊದುಮಂಜನ ಕಡೆಂದ ಬಣ್ಣ ಬಂಗಾರ ತಕ್ಕಂಡ್; ಒಡವೆ, ವಸ್ತ್ರನ ಮೊದೊಳಿಗೆಗೆ ತೊಡ್ಸಿ ದಾರೆಗೆ ಸಿಂಗಾರ ಮಾಡ್ವೆ. ದಾರೆಗೆ ಬೆಳಿ ಸೀರೆ-ರವ್ಕೆನ ಬಳ್ಸುವ ಪದ್ಧತಿ (ಕೊಡಗ್‌ಲಿ ಬೆಳಿ ಸೀರೆ ಆಕುಂತಿಲ್ಲೆ, ಯಾದಾರು ಬೆಲೆ ಬಾಳ್ವ ರೇಷ್ಮೆ ಸೀರೆನ ಬಳ್ಸುವೆ) ಇದೇ ರೀತಿ ಮೊದುಮಂಜನೂ ಬೆಳಿ ಕಚ್ಚೆ ಪಂಚೆ, ಸರ್ಟ್, ಮುಂಡಾಸ್, ಬಾಸಿಂಗ ಎಲ್ಲಾ ಕಟ್ಟಿದ್ದದೆ.

**ಧಾರಾಮುಹೂರ್ತ :–** ಧಾರೆಗೆ ಹೊತ್ತಾತ್‌ತೇಳ್ಕನ ಮೊದೊಳಿಗೆನ, ಅವಳ ಸೋದರ ಮಾವ ಜೋಡ್ ಹಣ ಕಟ್ಟಿ; ದಾರಾ ಮಂಟಪಕ್ಕೆ ಎತ್ತಿಕಂಡ್ ಬಂದವೆ. ಇನ್ನೊಂದ್ ಕಡೆಂದ ಮೊದುಮಂಜನ ಮಂಟಪಕ್ಕೆ ಕರ್ಕಂಡ್ ಬಂದವೆ. ಮೊಡ್ಯಳ ಹಾಸಿದ ನೊಡಿ ಬಟ್ಟೆಮೇಲೆ ನಡ್ಕಂಡ್ ಮೊದುಮಂಜ ಬಂದದೆ. ಮೊದುಮಕ್ಕ ಮಂಟಪದೊಳಗೆ ಬಂದಕೂಡ್ಲೆ ಬೆಳಿ ಬಟ್ಟೆ ತೆರೆನ ಇಬ್ಬರ ನಡುಲಿ ಹಿಡ್ದವೆ. (ದಾರೆ ಆಕೆ ಮುಂದೆ ಒಬ್ಬನ ಮುಖನ ಒಬ್ಬ ನೋಡಿಕಾಗದ್‌ಂತ ಹಿಂದೆನ ಪದ್ಧತಿ) ಮೊದುಮಕ್ಕಳ ಕಳ್ಸ ಕನ್ನಡಿಲಿರ್‌ವ ಗಿಂಡಿಂದ ನೀರ್ ಅದ್‌ಲ್ ಬದ್ಲ್ ಮಾಡಿ ಮೊದೊಳಿಗೆನ ಕೈನ ಮೊದುಮಂಜನ ಕೈ ಮೇಲೆ ಇಸಿ ಮೊದೊಳಿಗೆನ ಅಪ್ಪ ಗಿಂಡಿಲಿದ್ದ ಪವಿತ್ರ ನೀರ್‌ನ ಅವರ ಕೈ ಮೇಲೆ ದಾರೆ ಹೊಯ್ದವೆ, ಆಗ ಊರ್ ಗೌಡ "ಹತ್ತ್ ಕುಟುಂಬ ಹದ್ನೆಂಟ್ ಗೋತ್ರ ದೇವ ಸಭೆ ಸಮಸ್ತರ ಸಂಗಡ ಕೇಳಿ" '—' ಗೊತ್ರದ ಗಂಡಿಗೂ '—' ಗೋತ್ರದ ಹೆಣ್ಣಿಗೂ ಕನ್ಯಾ ದಾರೆ ಎರ್ದವೇಂತ ಮೂರು ಮೂರು ಸರ್ತಿ ಹೇಳ್ವೆ. ಮತ್ತೆ ಮೊದುಮಕ್ಕ ಪರಸ್ಪರ ಹೂಮಾಲೆ ಹಾಕಂಡವೆ. ಆ ಮೇಲೆ ಮೊದುಮಂಜ ಮೊದೊಳಿಗೆಗೆ ತಾಳಿ ಕಟ್ವದೆ.



ದಾರೆ ಹೊಯ್ಯುದು



ಹೂಮಾಲೆ ಹಾಕುದು



ತಾಳಿ ಕಟ್ಟುದು

ಮೊಡ್ಯಾಳ ಮಂಟಪದ ಸುತ್ತ ಮೊಡಿ ಬಟ್ಟೆನ ಹಾಸಿದ್ದದೆ. ಮೊದುಮಂಜನ ಸಾಲ್‌ನ ಕೊಡಿಗೆ ಮೊದೋಳಿಗೆನ ಸೆರ್ಗ್‌ನ ಕೊಡಿನ ಗಂಟ್ ಹಾಕಿ ಕೈ ಹಿಡ್‌ಕಂಡ್ ಮೊಡಿ ಬಟ್ಟೆ ಮೇಲೆ ಮೂರು ಸುತ್ತು ಅಲ್ಲಿರೆ ಐದ್ ಸುತ್ತು ಬಂದವೆ. ಮತ್ತೆ ದಾರೆಗುಟ್ಟೆ ಸೀರೆನ (ಕನ್ನಡ ಜಿಲ್ಲೆಲಿ ದಾರೆ ಸಮೆಲಿ ಬೆಳಿ ಸೀರೆ ಆಕು) ಬದ್‌ಲ್ಸಿ ಬಣ್ಣ ಬಂಗಾರದೊಟ್ಟಿಗೆ ಮೊದುಮಂಜ ತಂದ ರೇಷ್ಮೆ ಸೀರೆನ ಉಡ್ಸಿ ಶೇಷೋಪಚಾರಕ್ಕೆ ಕುದ್ರಿಸಿವೆ. ಮೊದುವೆಗೆ ಬಂದವು ಮೊದುಮಕ್ಕಳ ತಲೆಗೆ ಅಕ್ಕಿ ಹಾಕಿ ಆಶೀರ್ವಾದ ಮಾಡಿ ಉಡ್ಗೊರೆನ ಕೊಟ್ಟವೆ. ಆ ಮೇಲೆ ಊಟಕ್ಕೆ ಒಕ್ಕುಲು ಎಚ್

ವರಾನ ಸರ್ವರೂ ಊಟಕ್ಕೆ ಎದ್ರೋಳಾಂತ ಹೇಳಿ ಒಂದು ಚೊಂಬು ನೀರ್ ಇಸುವೆ. ಮತ್ತ್ ಊಟ ಸಾಗಿದೆ.

ನಮ್ಮ ಮೊದುವೆನ ದಾರೆ ಪದ್ಧತಿಲಿ ಎರ್‌ಡ್ ತರದ ದಾರೆ ಉಟ್ಟು, ಬ್ರಾಹ್ಮಣ ದಾರೆ ಮತ್ತ್ ಬಂಟ ದಾರೆತ್ತೇಳಿ. ಬ್ರಾಹ್ಮಣ ದಾರೆಲಿ ಬ್ರಾಹ್ಮನ ಪುರೋಹಿತ ಬೇಕು. ಅಂವ ಮಂತ್ರ ಹೇಳಿಕಂಡ್ ಗಿಂಡಿಲಿದ್ದ ಪವಿತ್ರ ನೀರ್‌ನ ದಾರೆ ಹೊಯ್ಯ್ಕೆ ಮೊದೊಳಿಗೆನ ಅಪ್ಪಂಗೆ ಎತ್ತಿ ಕೊಟ್ಟದೆ. ಆದರೆ ಕನ್ನಡ ಜಿಲ್ಲೆನ ಕೆಲು ಕಡೆ ಈ ಪದ್ಧಿಷ್ಟ ಇವೆ. ಇಲ್ಲಿ ಜಾಸ್ತಿ ಬಂಟ ದಾರೆ ಮಾಡ್ವೆ. ಇಲ್ಲೆ ಬಂಟ ದಾರೆ ಹೆಂಗೆ ಶುರಾತ್‌ಂತೇಳಿ ಕತೆನೇ ಉಟ್ಟು.

**ಬಂಟೆ ದಾರೆ:–** ಹಿಂದೆ ಸುಳ್ಯ ಸೀಮೆಲಿ ನಡ್ದ ಒಂದು ಮೊದುವೆಲಿ ದಾರೆ ಸಮೆ ಆದರೂ ಬ್ರಾಹ್ಮಣ ಬಾತ್ಲೆಗಡ, ಸಮಯ ಮೀರಾತ್ ಬಾತಿತ್. ಆಗ ದೊಡ್ಡ ಅದಿಕಾರಲಿದ್ದ ಬಂಟ ಒಬ್ಬ ಸಿಟ್ಟ್‌ಂದ 'ಬ್ರಾಹ್ಮಣ ಬಾತ್ಲರಿ' ಗೂಡೆನ ಅಯ್ಯಪ್ಪ ಒಳೊಲೆ ಅವೇ ದಾರೆಂ ಯಲಿ'ತ ಗರ್ಜಿಸಿತ್‌ಗಡ. ಅಂದ್‌ಂದ ಅಯ್ಯಪ್ಪ ದಾರೆಂತ ವಾಡಿಕೆ. ಕೊಡಗ್‌ಲಿ ಈಗೋಳು ಇದಿಕೆ ಬಂಟ ದಾರೆತೇ ಹೆಸ್ರ್.

**ಹಾಲು ತುಪ್ಪ ಕುಡ್ಸುದು :–** ಮೊದುಮಕ್ಕಳ ಹಸ್ಸೆ ಮೊಂದ್ರಿಲಿ ಕುದ್ರಿಸಿ (ನೆಲ್ಲಕ್ಕಿ ಅಡಿಲಿ) ಏಳ್ ಜೆನ ಮುತ್ತೈದೆಗ ಅಕ್ಕಿ ಹಾಕಿ ಬಾಳೆಣ್ಣ್, ಹಾಲ್ ತುಪ್ಪಂದ ಭೂಮಿಕ್ಕುವ ಶಾಸ್ತ್ರ ಮಾಡಿವೆ ಮತ್ತ್ ಮೊದುಮಕ್ಕಳ ಹಸೇದ ಎದ್ರಿಸಿ ಚಪ್ಪರದಡಿಗೆ ಕರ್ಕಬಂದ್ ಊರ್ ಗೌಡ ಮತ್ತ್ ಸೆಂಟ್ರ್‌ಗಳ ಮುಂದೆ ಹೆಣ್ಣ್‌ನ, ಗಂಡ್‌ನ ವಶಕ್ಕೆ ಒಪ್ಸುವೆ. ಮೊದೊಳಿಗೆನ ಅವ್ವಪ್ಪಂಗೆ ಮೊದುಮಕ್ಕ ಉಡ್ಗರೆ ಮಾಡ್ವೆ. ಮತ್ತ್ ಹೆಣ್ಣಳ್ಸಿ ಕೊಡ್ವ ಶಾಸ್ತ್ರ ನಡ್ದದೆ.

**ಹೆಣ್ಣ್ ಇಳ್ಸಿಕೊಡುವ ಶಾಸ್ತ್ರ :–** ಇಸ್ಸ್ ವರ್ಷ ಮುದ್ದುಂದ ಸಾಂಕಿ ಬೆಳ್ಸಿದ ಮಗಳ ಬೇರೆ ಮನೆಗೆ ಕಳ್ಸಿ ಕೊಡ್‌ಕನ ಹೆತ್ತವರ ದುಃಖ ಹೇಳಿಕೆ ಬೊತ್ತ್. ಮಗಳಿಗೆ ಬುದ್ಧಿ ಹೇಳಿ ಗಂಡ್‌ನ ಕಡೆಮ್ಮೆ ಹೆಣ್ಣ್ ಒಪ್ಪಿಸಿ ಕೊಡ್‌ಕನ ಸೋಬಾನೆ ಹೇಳಿವೆ; ಮತ್ತ್ ಹೆಣ್ಣಳ್ಸಿ ಕೊಡ್ವ ಮಾತ್‌ನ ಹೇಳಿಕುಟ್ಟು. ಹಿಂಗೆ ಹೆಣ್ಣ್‌ನ, ಗಂಡ್‌ನ ಕಡೆಮ್ಮೆ ಒಪ್ಪಿಸಿವೆ. ಆ ಮೇಲೆ ಮೊದೊಳಿಗೆನ ಕಡೆವು ಕನ್ನಿಗೆ ಕೊಡ್‌ವ ಬಳುವಳಿನ ಎದ್‌ರಿಗೆ ಇಸಿ ಅದರ ಪ್ರೊಟ್ಟನ ಸಬೆಲಿ ಓದಿ ಹೇಳಿವೆ. ಮತ್ತ್ ಮೊದುಮಕ್ಕ ಹಿರಿಯರ ಕಾಲ್ ಹಿಡ್ದ್ ಆಶೀರ್ವಾದ ಪಡ್ಕಂಡವೆ. ಈ ಸಮೆಲಿ



ಮೊದುಮಕ್ಕಳಿಗೆ ಹಾಲ್ತುಪ್ಪ ಕುಡ್ಸುದು.

ಮೊದುಮಕ್ಳ ಮೊದೊಳಿಗೆನ ಮನೆವುಕೆ ಪಟ್ಟೆ ವೀಳ್ಯ ಕೊಡ್‌ವ ಕ್ರಮ ಉಟ್ಟು. ಮತ್ತೆ ಮೊದುಮುಂಜ ಮೊದೊಳಿಗೆನ ಕರ್ಕಂಡ್ ದಿಬ್ಬಣದ ಜೆನರೊಟ್ಟಿಗೆ ತನ್ನ ಮನೆಗೆ ಬಂದದೆ. ಅಲ್ಲಿ ಆರತಿ ಎತ್ತಿ ಮೊದುಮಕ್ಕಳ ಮನೆಗೆ ಹತ್ಸುವೆ. ಮೊದೊಳಿಗೆ ತನ್ನ ಬಲ್ದ ಕಾಲ್ನ ಇಸಿ ಗೃಹ ಪ್ರವೇಶ ಮಾಡ್ದೆ. ಹೆಣ್ಣ್ ಕರ್ಕಂಡೋದ ಮಾರ್‍ನೆ ದಿನ ನಾಗೋಳಿ ಶಾಸ್ತ್ರನ ಗಂಡ್‌ನ ಮನೆಲಿ ಮಾಡುವೆ.

**ತುಪ್ಪ ತಕಂಡೋದು :–** ಈ ಕ್ರಮ ಮನೆಂದ ಹೆಣ್ಣ್ ಇಳ್ಸಿದ ಮೂರು, ಐದು ತಪ್ಪಿರೆ ಏಳ್ನೆ ದಿನಲಿ ಮಾಡ್ವೆ. ಹೆಣ್ಣ್ ಗಂಡನ ಮನೆಂದ, ತೌರು ಮನೆಗೆ ಬಾಕನ ಎರ್ಡ್ ಕಾಯಿ, ಒಂದ್ಸೇರ್ ತುಪ್ಪ ತಂದ್ ಮನೆ ದೇವ್ರ (ನೆಲ್ಲಿಕ್ಕಿಡಿಲಿ) ಮುಂದೆ ಇಸಿ, ದೇವ್ರುಗೆ-ಹಿರಿಯೊವ್ಕೈಲ್ಲಾ ವಂದಿಸಿದೆ. ಮೊದುಮುಂಜನ ಕಡೆಂದ ಕೆಲು ನೆಂಟ್ರುಗ ಒಟ್ಟಿಗೆ ಬಂದಿದ್ದವೆ. ಮೊದುಮಕ್ಕಳ ಆರತಿ ಮಾಡಿ ಮನೆ ಹತ್ತಿಸಿಕೆ ಮುಂದೆ ಮೊದೊಳ್ಗಿನ ತಮ್ಮ ಮೊದುಮಕ್ಕಳ ಕಾಲ್‌ನ ತೊಳ್ದದೆ. ತೊಳ್ದ ಚೊಂಬಿಗೆ ಬಾವ ಹಣ ಹಾಕಿದೆ. ಅಲ್ಲಿ ರಾತ್ರಿ ಊಟಕ್ಕೆ ತಂದ ತುಪ್ಪನ ಇಕ್ಕಿವೆ. ಆ ದಿನ ಅತ್ತಿಗೆ ನಾದ್ನಿಕ ಎಲ್ಲಾ ಸೇರಿ ಒಂದು 'ಹೆಸ್ರು ಹೇಳ್ವ ಪೊಜ್ಜಿ ಮಾಡಿ ಇಕ್ಕಿವೆ' ಅದರ ಹೆಸ್ರ್ ಹೇಳೊಕುಂತ್ತೇಳಿ ಗಂಡ್‌ನ ಕಡೆನ್ಕೆ ಒತ್ತಾಯ ಮಾಡಿವೆ. ಹೇಳದಿದ್ದರೆ ಊಟಂದ ಎದ್ರಿಕೆ ಬುಡದೆ ದಂಡ ಕೊಡೊಕುಂತ್ತೇಳಿ ಬಲತ್ಕಾರ ಮಾಡಿವೆ; ಇವೆಲ್ಲಾ ಒಂದು ತಮಾಸೆ ಅಸ್ಟೆ. ಮಾರ್‍ನೆನ ಹೊತಾರೆ (ಬೊಳ್ಪಿಗೆ) ತುಪ್ಪ ತಕಂಡ್ ಬಂದೊವು ಗೂಡೆನೊಟ್ಟಿಗೆ ವಾಪಾಸ್ ಹೋದವೆ.

**ಹತ್ತ್ ಒಳಿವ ಶಾಸ್ತ್ರ (ಕಾಲ್ ಬೊಚ್ಚೆಲ್) :–** ತನ್ನ ಅಯ್ಯಪ್ಪನೊಟ್ಟಿಗೆ, ಅಕ್ಕ-ತಂಗೆ, ಅಣ್ಣ ತಮ್ಮಂದರೊಟ್ಟಿಗೆ ಪ್ರೀತಿಂದ ಬೆಳ್ದ ಮಗಳಿಗೆ ಮೊದುವೆ ಆಗಿ ಹೋಗಿ ತನ್ನ ಹೊಸ ಮನೆ, ಜೆನ, ವಾತಾವರಣನ ಹೊಂದಿಕಂಬಕ್ಕೆ ಕಸ್ಟ ಆದೆ. ಇದ್‌ಕ್ಕಾಗಿಯೇ ಇರೋಕು ನಮ್ಮ ಹಿಂದೆನೊವು ಹತ್ತ್ ಒಳಿವ ಶಾಸ್ತ್ರ ಉಂಟ್ ಮಾಡ್ದ. ಗಂಡನ ಮನೆಲಿ ತನ್ನ ತೌರ್‌ನ ನೆನ್ಸಿ ನೆನ್ಸಿ ದುಃಖ ಪಡ್ದು ತೇಳುವ ಕಾರಣಕ್ಕೆ ಹತ್ತ್ ಹದ್ನೈದ್ ದಿನ ಕಳ್ದ ಮೇಲೆ ಗೂಡೆನ ಹತ್ತೊಳಿಯಕೇತ ಕರ್ಕಂಡ್ ಬಂದವೆ. ಇದರ್‍ನೇ ಕೆಲೊವು ಕಡೆ ಕಾಲ್ ಬೊಚ್ಚೆಲ್ ತೆಗದೊಂತೇಳ್ದು.

**ಆಟಿ ಕುದ್ರುವ ಶಾಸ್ತ್ರ :–** ಆಟಿ ತಿಂಗ ಬಾರೀ ಹಾಳ್‌ತೇಳ್ತೆ. ಈ ತಿಂಗಲ್ಲಿ ಯಾವ ಸುಭ ಕಾರ್ಯಗಳ ನಡ್ಸುಲೆ. ಹೊಸ ದಂಪತಿಗ ಒಬ್ರರ್‌ಂದೊಬ್ಬ ದೂರ ಇರ್ದು ಒಳ್ಳೆದ್‌ತೇಳಿ ನಂಬಿಕೆ ಉಟ್ಟು. ಇದ್ಕಾಗಿ ತೌರು ಮನೆವು ಆಟಿ ತಿಂಗಳ್ಲಿ-ಮಗಳ ಆಟಿ ಕುದ್ರಿಕೆ ಕರ್ಕಂಡೋಗಿ ಒಂದು ತಿಂಗ ಕುದ್ರಿಸಿವೆ; ಹಿಂಗೆ ನಮ್ಮ ಮೊದುವೆ ಶಾಸ್ತ್ರಗ ಮುಗ್ದದೆ.



"ನಾ ಬಿ. ಎ. ಓದ್ಯೊಳಿ, ಡಾನ್ಸ್ ಮಾಡ್ನೆ,
ಸಂಗೀತ ಗೊತ್ತುಟು;
ನಾನ್ ಒಂದ್ ಪ್ರಶ್ನೆ ಕೇಳ್ನೆ....
ನೀವ್‌ಗೆ ಅಡ್ಗೆ ಬಂದದೆ ತಾನೆ ?"

---

ಆಧಾರ :– (ಕೊಡಗು ಮತ್ತು ದ. ಕ. ಗೌಡ ಸಮಾಜದ ಸಂಸ್ಕೃತಿ–೧೯೭೦)



# ಅಕ್ಕಕ್ಕಾ ನೀ ಬರೋಕು ಮದ್ವೆಗೇ

ಅಕ್ಕಕ್ಕಾ ಹಿರಿಯಕ್ಕ ! ನನ್ನ ಮದ್ವೆಗೆ ನೀ ಬರೊಕೂ॥
ಚಂದ್ರಗಿರೀ ಹಳ್ಳಾಲೀ ನನ್ನ ಓಲೇನೇ ಬಿದ್ದೋತ್,
ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ।
ಹೊಸ ಓಲೇ ನಾ ಮಾಡಿಸೀ ಕೊಟ್ನನೇ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ। ॥೧॥

ಅಕ್ಕಕ್ಕಾ ಹಿರಿಯಕ್ಕ । ನನ್ನ ಮದ್ವೆಗೆ ನೀ ಬರೊಕೂ॥
ನೇತ್ರಾವತೀ ಹಳ್ಳಾಲೀ ನನ್ನ ಮುತ್ತಿನ ಸರನೇ
ಬಿದ್ದೋತ್, ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ।
ಮುತ್ತು ಸರನೇ ನಾ ಮಾಡಿಸೀ ಕೊಟ್ನನೇ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ। ॥೨॥

ಹಿರಿಯಕ್ಕಾ ನನ್ನಕ್ಕಾ । ನನ್ನ ಮದ್ವೆಗೆ ನೀ ಬರೊಕೂ॥
ಕಾವೇರೀ ಹಳ್ಳಾಲೀ ನನ್ನ ಮೂಗೂತೀನೆ ಬಿದ್ದೋತ್,
ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ।
ಮೂಗೂತಿನ ನಾ ಮಾಡಿಸೀ ಕೊಟ್ನನೇ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ। ॥೩॥

ಅಕ್ಕಕ್ಕಾ ಹಿರಿಯಕ್ಕಾ । ನನ್ನ ಮದ್ವೆಗೆ ನೀ ಬರೊಕೂ॥
ಕುಮಾರಾ ಧಾರೆ ಹಳ್ಳಾಲೀ ನನ್ನ ಕೊಪ್ಪೊಂದು
ಬಿಸಾಡ್ಹೋತ್, ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ।
ಕೊಪ್ಪೊಂದರ ನಾ ಮಾಡಿಸೀ ಕೊಟ್ನನೇ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ। ॥೪॥

ಅಕ್ಕಕ್ಕಾ ದೊಡ್ಡಕ್ಕ। ನನ್ನ ಮದ್ವೆಗೆ ನೀ ಬರೊಕೂ॥
ಪಯಸ್ವಿನೀ ಹಳ್ಳಾಲೀ ನನ್ನ ಪಟ್ಟೆ ಸೀರೆನೇ ಹೋತ್,
ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ।
ಪಟ್ಟೇ ಸೀರೆನಾ ನಾ ತೆಗ್‌ದ್ ಕೊಡ್‌ವೆ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ। ॥೫॥

ಅಕ್ಕಕ್ಕಾ ಚಿನ್ನಕ್ಕಾ । ನನ್ನ ಮದ್ವೆಗೆ ನೀ ಬರೊಕೂ॥
ಮನೆ ಬಾಗ್‌ಲ್ ಗದ್ದೇನಾ ಉಂಬಳಿ ಕೊಟ್ರೆ
ನಾ ಬನ್ನೆ ತಮ್ಮಾ ನಿನ್ನಾ ಮದ್ವೆಗೆ ।
ಮನೆ ಬಾಗ್‌ಲ್ ಗದ್ದೇನಾ ನಿಂಗೆ ಉಂಬಳಿ ಕೊಟ್ಟಾನೆ
ಅಕ್ಕಾ ನನ್ನ ಮದ್ವೆಗೆ ನೀ ಬರೊಕೂ । ॥೬॥

ದಂಡಿಗೇ ಹೋದಾ ಬಾವ ಇನ್ನೂ ಬಾತ್‌ಲೇ ತಮ್ಮಾ
ನಾ ಹೇಂಗೆ ತಮ್ಮಾ ಬಾದೂ ಮದ್ವೆಗೆ ।
ಅಷ್ಟೊಂದ್ ಹೊತ್ತಿಗೆ ಬಾವನೂ ಬಂದಾವೆ ಅಕ್ಕಾ
ನನ್ನ ಮದ್ವೆಗೆ ನೀ ಬರೊಕೂ । ॥೭॥

ಅಕ್ಕಕ್ಕಾ ನನ್ನಕ್ಕ । ನನ್ನ ಮದ್ವೆಗೆ ನೀ ಬರೊಕೂ ॥

—ಶ್ರೀಮತಿ ಪಿ. ಯಂ. ಬೊಳಿಯಮ್ಮ,
ಕೃಷ್ಣಪ್ಪ



ಕೊಡ್‌ಗ್‌ಲಿ 'ಕಾವೇರಿ'

## ಗಾದೆಗ

- ಅಕ್ಕಂಗೆ ಆಳಿಲ್ಲ. ಕುಕ್ಕಂಗೆ ಕೂಳಿಲ್ಲ
- ಅತ್ತೆ ಮೇಲೆ ಸಿಟ್ಟ್, ಕೊತ್ತಿಗೆ ಪೆಟ್ಟ್
- ಯಾರ್‌ದೋ ಕಾಸ್ ಯಲ್ಲಮ್ಮನ ಜಾತ್ರೆ
- ಕೊಡ್ದು ಮೂರ್ ಕಾಸ್ ತೊಂಬರ ತುಂಬ ಹಾಸ್
- ಗಂಡ ಪಟ್ಟೆ ಸೀರೆ ತುಂದದೆತ, ಹೆಣ್ಣ್ ಇದ್ದ ಸೀರೆನ ಸುಟ್ಟೆತ್‌ಗಡ
- ತಾನ್ ಕಳ್ಳ, ಪರರ ನಂಬ
- ಕುಂಬಳಕಾಯಿ ಕದ್ದಂವ, ಹೆಗ್‌ಲ್ ಮುಟ್ಟಿ ನೋಡ್ತ್‌ಗಡ
- ಮಟ್ಟ ತಿಳ್‌ಕಣದೆ ಮಾತಾಡ್‌ಬಡ
- ಮನೆ ಕಟ್ಟಿ ನೋಡು, ಮೊದುವೆ ಮಾಡಿ ನೋಡು

—ಕು॥ ಚಂಡೀರ ರಾಮಪ್ಪ ಜಲಜಾಕ್ಷಿ

# ಗಾದೆಗ

○ ಸತ್ಯದ ಕೆಲ್ಸ ಶಾಸ್ವತ
○ ಹಾಲ್‌ಲಿ ಬಂದ ಹಣ ನೀರ್‌ಲಿ ಹೋದಂಗೆ
○ ಹುಟ್ಟ್ ಗುಣ ಬೆಟ್ಟ ಹತ್ತಿರೂ ಹೋಕಿಲ್ಲೆ
○ ಹೇಳ್ದ್ ಪುರಾಣ ಹಾಕುದು ಗಾಣ
○ ಹಿರಿ ಅಕ್ಕನ ಚಾಳಿ ಮನೆ ಮಕ್ಕಳಿಗೆಲ್ಲಾ
○ ಎತ್ತ್ ಏರಿಗೆಳಿಯುಕಾಕನ ಕೋಣ ನೀರಿಗೆಳ್ದದೆ
○ ಮುಜ್ಜಿಗೆಗೆ ಬಂದವಂಗೆ ಎಮ್ಮೆ ಕ್ರಯು ಏಕೆ ?
○ ನೀರ್‌ನ ಮೇಲೆ ಗುಳ್ಳೆನಂಗೆ
○ ಸಾಲ ಮಾಡುಲ್ಲ ಬೇಡ-ಸಾಲ ತಕಂಬದೂ ಬೇಡ
○ ಸಂಕಟ ಬಾಕನ ವೆಂಕಟರಮಣ
○ ಸಾವುಕಾರನ ಊಟ ಕಾಯಿಲೆಗೆ ಬಡವನ ಊಟ ಆರೋಗ್ಯಕ್ಕೆ
○ ಇಪರೀತ ಬುದ್ಧಿ ಅಭಿಮಾನ ಭಂಗ
○ ಐಸೊರ್ಯ ಬಾಕನ ಅರ್ಧ ರಾತ್ರಿಲಿ ಕೊಡೆ ಹಿಡ್‌ದಂಗೆ
○ ಅಂಬು ಅಟ್ಟ್‌ಲಿ ಬಿಲ್ಲ್ ಬೆಟ್ಟ್‌ಲಿ
○ ಕೆಟ್ಟ್ ಮೇಲೆ ಬುದ್ಧಿ ಬಾತ್
○ ಉದ್ಯೋಗನೆ ಪುರುಸ ಲಕ್ಷಣ ಗಡ
○ ಇಳಿಯುಕಾಕನ ತುಂಬಾ ಗ್ಯಾನ ಮಾಡ್
○ ಹೊಟ್ಟೆಗೆ ಹಿಟ್ಟಿಲ್ಲೆ ಜುಟ್ಟೆಗೆ ಮಲ್ಲಿಗೆ ಹೂ
○ ನೆಂಟ್ರ್ ಮೇಲೆ ಪ್ರೀತಿ ಅಕ್ಕಿ ಮೇಲೆ ಆಸೆ
○ ಅಂಗ ಇಲ್ಲದವಂಗೆ ಮಂಗನ ಚೇಷ್ಟೆ
○ ಕೊಣೆಕಾಗದ ಸೂಳೆಗೆ ಅಂಗಳ ಡೊಂಕ್
○ ಅಣ್ಣ ಸತ್ತರೆ ಅಮಾಸೆ ನಿಂತದ್ಯಾ ?
○ ಅಲ್ಪ ವಿದ್ಯೆ ಕಲ್ತವಂಗೆ ಮಹಾ ಗರ್ವ
○ ಬೆರಿ ಕೈಲಿ ಮೊಳ ಹಾಕಿದಂಗೆ
○ ಪ್ರಾಯ ಬಾಕನ ನಾಯಿ ಸಹ ಲಾಯಿಕ್
○ ಕಸ್ಟಕ್ಕೆ ಆದವನೇ ನೆಂಟ
○ ಜ್ಞಾನ ಇಲ್ಲದವಂಗೆ ಸಿಟ್ಟ್ ಜಾಸ್ತಿ
○ ಕಳ್ಳನ ಹಜ್ಜೆ ಕಳ್ಳಂಗೆ ಗೊತ್ತ್
○ ದಯೆ ಇದ್ದರೆ ಭಯ ಇಲ್ಲೆ
○ ಕಂಕುಳ್‌ಲಿ ದೊಣ್ಣೆ ಕೈಲಿ ಶರಣ್
○ ಅವರ ಮನೆ ದೋಸೆ ತೂತ್ ನಮ್ಮ ಮನೆ ಕಾವುಲಿ ತೂತ್
○ ಓದಿ ಓದಿ ಕೆಟ್ಟ್ ಹೋತ್ ಕೂಚಂಬಟ್ಟ
○ ಸಂಪಾದ್ಸುದು ಒಬ್ಬ ತಿಂಬೊದು ಇನ್ನೊಬ್ಬ
○ ಬಗ್ಗಿದವಂಗೆ ಇನ್ನೊಂದ್ ಗುದ್ದು
○ ಉತ್ತರನ ಶೌರ್ಯ ಒಲೆ ಮುಂದೆ
○ ಸ್ಥಿರ ಬುದ್ಧಿಂದ ಕಸ್ಟನ ಜೈಸಕ್

—ಸುಮಲತಾ ಪಡ್ಡಂಬೈಲು

---

# ಗಾದೆಗ

* ಸೆಟ್ಟಿ ಮಾಡ್ದ್ ದಂಡಕ್ಕೆ-ಭಟ್ಟ ಮಾಡ್ದ್ ಪಿಂಡಕ್ಕೆ ಹೊಲಿಯ ಮಾಡ್ದ್ ಹೆಂಡಕ್ಕೆ
” ಬಂಟ್ರ್ ಹೊದಲ್ಲಿ ನ್ಯಾಯ ತೊಪ್ಪಿಕ್ಕಿಲೆ ಮಣಂಜಿ ಹೋದಲ್ಲಿ ಕಲ್‌ಂಕ್ ತೊಪ್ಪಿಕಿಲೆ
* ಭಟ್ಟ, ಬಂಟ, ಪೂಜಾರಿ ಕೂಡದೆ ಕೋಲೆ ನಡೆಕ್ಕಿಲ್ಲೆ
* ಲಾಭ ಇಲ್ಲದೆ ಶೆಟ್ಟಿ ಹಳ್ಳಕೆ ಹೋಕಿಲೆ
* ಕುದ್ಕ ಓಡಿ ಹೋತ್-ಕೊಳ್ಳಿ ಹೊಡ್ದ್ ಹೋತ್
* ಮರ ನೋಡಿ ಬೊಳ್ಳಿ ನೆಡೊಕು, ಗುಣ ನೋಡಿ ಹೆಣ್ಣ್ ಕೊಡೊಕು
* ಅಟ್ಟಲಿ ಕ್ಯಾ ಬೆಲ್ಲ ಇದ್ದರೆ ದಿಕ್ಕಂಗೆ ನಿದ್ರೆ ಬಾಕಿಲೆ
* ಉಂಬೋದು ತಿಂಬೋದು ನೆಂಟಾಚಾರ- ಕೊಡ್ದು ತಕ್ಕಂಬೋದು ಲೆಕ್ಕಾಚಾರ
* ಹಾಲ್ ತನಿಗೆ ಎಕ್ಕದಿದ್ದರೆ ಕೊತ್ತಿ ಸಾ ಪ್ರಾಮಾಣಿಕ
* ಸಾವಿರ ಹಾಸಿಗೆ ಮೇಲೆ ಮಲ್ಗಿರೂ ಬೇಕಾದ್ ಒಂದೇ
* ಹಸ್ಬವರ ಮುಂದೆ ಭಾಷಣ ಮಾಡ್ದಂಗೆ
* ಸೆಗ್‌ಣಿಗೆ ಬಚಂಟ್ ಸಾಕ್ಷಿ ಬೀದಿ ಮಾರಿನ ಮನೆಗೆ ಸೇರ್ಸಿಕಂಡ ಹಾಂಗೆ
* ಕೂಸು ಹುಟ್ಟಿಕ್ಕೆ ಮುಂದೆ ಅಂಗಿ ಹೊಲ್ಸಿದ ಹಾಂಗೆ
* ಅಜ್ಜಿ ಸಾಂಕಿದ ಪಿಳ್ಳಿ ಬೊಜ್ಜಕ್ಕ್ ಆಕಿಲೆ
* ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
* ಎಲ್ಲಾ ಬಿತ್ತ್ ಒಳಗೆ-ಗ್ಯಾರಾ ಬಿತ್ತ್ ಹೊರಗೆ
* ಕಾಡ್ ಕೋಳಿಗೆ ಸಂಕ್ರಾಂತಿ ಇಲ್ಲೆ
* ತೀಟೆ ತೀರ್ದ ಮೇಲೆ ಮೊಂಡಿ ಸಂಗ ಯಾಕೆ ?
* ಓಡಿ ಹೋಗವ್ರುಳು ಹಾಗೆಲಿ ಹೆಪ್ಪು ಹಾಕಿದ್ಯಾ ?
* ರಾತ್ರಿ ನೋಡ್ದ ಬಾವಿಗೆ ಹಗ್‌ಲ್ ಬಿದ್ದಂಗೆ
* ಮೊರಿ ನಾಯಿನ ಕುಬಳ್‌ಲಿ ಕುದ್ರಿಸಿರೆ ಹೊಲ್ಸ್ ಕಾಂಬಕನ ತಬ್ಬಂತ ಹಾರ್ದಂಗೆ
* ಕಂಡದರ ಕಂಡ್ಹಾಂಗೆ ಹೇಳ್ರೆ ಕೆಂಡದಂತ ಕೋಪ
* ಆಳ್ ಹೋದಲ್ಲಿ ಹಾಳ್-ಮಂಜ ಹೋದಲ್ಲಿ ಮಧ್ಯಮ, ತಾನ್ ಹೋದಲ್ಲಿ ಉತ್ತಮ
* ಸಮುದ್ರ ಈಜಿದವಂಗೆ ಹೊಳೆ ಯಾವ ಲೆಕ್ಕ

—ಪದ್ಮಾ ಕಾರ್ಕಳ

## ನಾ ಕಂಡಂಗೆ

# ದಿ|| ಚೆರಿಯಮನೆ ಪೊನ್ನಪ್ಪನವು

—ಕುದುಕುಳಿ ಟಿ. ಸುಬ್ಬಯ್ಯ, ಕುಶಾಲನಗರ



ಪೊರ್ಳ್ನನ ನಾಡ್ ಆದ ಕೊಡಗ್ ಜಿಲ್ಲೆ ಮಡಿಕೇರಿ ತಾಲ್ಲೂಕುನ ಬೆಟ್ಟತ್ತೂರು ಗ್ರಾಮದ ಕ್ಯಾತಿ ಪಡ್ದ ಮನೆತನಗಳ್ಲಿ ಒಂದಾವ ಚೆರಿಯಮನೆ ಕುಶಾಲಪ್ಪ ದಂಪತಿಗಳ ಪುಣ್ಯ ಗರ್ಬಲಿ ಪೊನ್ನಪ್ಪನವು ೧೯೯೭ರ್ಲಿ ಜಲ್ಮತಾಳ್ದೊ.

ಆಗನ ಕಾಲಲಿ ಹೆಚ್ಚಿನ ಬರ ಕಲ್ತ ಕೆಲವೇ ವ್ಯಕ್ತಿಗಳ್ಲಿ ಪೊನ್ನಪ್ಪನವು ಸಾ ಒಬ್ಬ. ಓದಿ ಆದಂಗೆ ಇವು ಆಗನ ಬ್ರಿಟಿಸ್ ಸರಕಾರದ ರೆವಿನ್ಯೂ ಇಲಾಖೆಲಿ ಕೆಲ್ಸಕ್ಕೆ ಸೇರಿ, ಬೇಗ ಬೇಗ ಬಡ್ತಿ ಪಡ್ದ್ ಪಾರ್ಪತ್ತೆಗಾರ ಆಗಿ ಪಿಂಚಿಣಿ ಪಡ್ದೊ. ಇವು ತನ್ನ ಸೇವೆಲಿ ಬಾಳಸ್ಟ್ ಜೆನಗಳ ಮಿತ್ರತ್ವನ ಗಳ್ಸಕಂಡಿದ್ದೊ. ಹುಟ್ಟು ಹೋರಾಟಗಾರ ಆಗಿದ್ದ ಇವು ಪಿಂಚಿಣಿ ಆತ್ಂತೇಳಿ ಸುಮ್ಮಂಗೆ ಕುದ್ರದೆ ಸಮಾಜ ಸೇವೆ ಮಾಡಿಕೆ ಸುರು ಮಾಡ್ದೊ. ಸಾಮಾನ್ಯಾಗಿ ಎಲ್ಲಾ ಬಾಸೆಗಳ ಕಲ್ತಿದ್ದ ಪೊನ್ನಪ್ಪನವು ಸಂಚಾರಿ ಪ್ರಿಯರ್. ಹೊರ್‌ದೇಶಗಳ್ಲೆಲ್ಲಾ ಸುತ್ತಾಡ್ದ ಇವು ಲಂಡನ್‌ನಂತ ದೂರ ದೇಶಕ್ಕೂ ಕೂಡಾ ಹೋಗಿ ಅಲ್ಲಿ ಭಾರತದ ಸಂಸ್ಕೃತಿನ ಪ್ರಚಾರ ಮಾಡಿಯೊಳೊ.

ಎಲ್ಲೊವು ವಿದ್ಯೆಲಿ ಮುಂದ್ವರಿಯೊಕುಂತೇಳುವ ದಿಸ್ಟಿಂದ ಇವು ಇವರ ಅಪ್ಪನ ಹೆಸ್‌ರ್ಲಿ "ಕೊಡಗು ಗೌಡ ವಿದ್ಯಾರ್ಥಿ ಸಂಘ"ಕ್ಕೆ ೧೦,೧೦೧ ರೂಪಾಯಿನ ವಿದ್ಯಾರ್ಥಿ ವೇತನ ನಿಧಿಗೆ ದಾನ ಮಾಡ್ಯಳೊ. ಇದ್ ನಮ್ಮ ಸಮಾಜದ ಚಾರಿತ್ರಿಕ ದಾಖಲೆನೂ ಹವ್ದು. ಇವು ಗೌಡ ಜನಾಂಗದ ಏಳಿಗೆಗೆ ಬಾಳಸ್ಟ್ ದುಡ್ದಳೊ. ಇವರ ಹೆಣ್ಣ್ ದಿ|| ಬೊಳ್ಳಮ್ಮನವು ಸಾ ಗಂಡನೊಟ್ಟಿಗೆ ತನ್ನ ಹೆಗ್ಲ್ ಕೊಟ್ಟ್ ಸಮಾಜಕ್ಕಾಗಿ ತುಂಬಾ ಕೆಲ್ಸ ಮಾಡ್ಯಳೊ. ದಿ|| ಪೊನ್ನಪ್ಪನವು ಭಾರತ ದೇಶದ ಸ್ವಾತಂತ್ರ್ಯಕ್ಕಾಗಿ ಹಗ್ಲ್‌ರಿಳ್ ದುಡ್ದಳೊ. ಗೋವಾ ವಿಮೋಚನ ಸಮರದ ಸಂದರ್ಬಲಿ ಬ್ರಿಟಿಸರ ಕೈಯಿಂದ ಬಿದ್ದ ಗುಂಡು ಪೆಟ್ಟ್‌ನ ತಪ್ಪಿಸಿಕಂಡ್ ಬಚಾವು ಆದ ಶೂರ ಇವು! ಇವರ ಅಪ್ಪ ಕುಶಾಲಪ್ಪನವು ಕೂಡಾ ನಮ್ಮ ವಿದ್ಯಾಭಿವೃದ್ಧಿ ಸಂಘದ ಸ್ತಾಪನೆಗೆ ದುಡ್ದ ಕಾರ್ಯಕರ್ತರ್ಲಿ ಒಬ್ಬ. ನಮ್ಮ ದಿ|| ಪೊನ್ನಪ್ಪನವು ಒಂದಲ್ಲ-ಹತ್ತ್ ಮುಖದ ಸೇವೆನ-ದೇಶಕ್ಕೂ, ನಾಡಿಗೂ, ಸಮಾಜಕ್ಕೂ ಸಲ್ಲಿಸಿದ ತ್ಯಾಗಿ ಜೀವಿಯಾಗಿದ್ದೊ.

ತನ್ನ ಜೀವನನ ಸಮಾಜ ಸೇವೆಲೇ ಕಳ್ದ ಇವು ಸಂಘ ಸಂಸ್ತೆಗಳಿಗೆ ದಾನ ಮಾಡ್ದಕ್ಕೆ ಲೆಕ್ಕನೇ ಇಲ್ಲೆ. ತನ್ನ ಎಳನೇ ವರ್ಸ ಪ್ರಾಯಲಿ ಅಂದರೆ ಕಳ್ದ ನಾಕೈದ್ ತಿಂಗಳ ಹಿಂದೆ ಇವು ಸೊಲ್ಪ ಸಮೆಯ ಕಾಯಿಲೆಲಿದ್ದ್ ತೀರಿಹೋದೊ. ದಿನ ನಿತ್ಯ ಯೋಗಾಸನ ಮಾಡ್ತಿದ್ದ ಇವು ತನ್ನ ಆರೋಗ್ಯನ ಲಾಯಿಕ್‌ಲಿ ಇಸಿಕಂಡಿದ್ದೊ. ಪೊನ್ನಪ್ಪನವರ ಸಾವು ನಮ್ಮ ಸಮಾಜಕ್ಕೆ ತುಂಬಾ ನಸ್ಟ, ಮುಂದೆನ ಪೀಳಿಗೆನ ಮಕ್ಕ ಅವರಂಗೆ ಆಕೊಂತೇಳಿ ನನ್ನ ಹಾರೈಕೆ.

# ಬಯಕೆ ಮೊದುವೆ

—ಪದ್ಮ, ಕಾರ್ಕಳ

ಪರಂಪರೆನ ಟೀಕೆ ಮಾಡ್ದು ಬಾಳ ಸುಲಬ. ಆದರೆ ಪರಂಪರೆನ ನಿರ್ಮಿಸಿಕೆ ಅಷ್ಟೆ ಬಂಗ ಉಟ್ಟು. ಪರಂಪರೆಗ ಪಕ್ಕ ಪ್ರತ್ಯಕ್ಷ ಆದೂ ಇಲ್ಲೆ ಮಾಯು ಆದೂ ಇಲ್ಲೆ. ಹೊಸ್ತ್ ಹಳ್ತ್ನೊಟ್ಟಗೆ ಸೇರಿಕಣ್ದೆ. ಹಳ್ತ್ ಬದಲಾದೆ, ಕೆಲವು ಹೆಚ್ಚಿಗೆ ಅರ್ಥ ಕೊಡ್‌ವಂತದಾದೆ, ಇನ್ನ್ ಕೆಲವು ಅರ್ಥ ಹೀನ ಆದೆ. ಇವುಗಳ ಪೈಕಿ ಪ್ರಾಚೀನ ಯಾದ್, ಅರ್ವಾಚೀನ ಯಾದ್, ಸುಳ್ಳ್ ಯಾದ್, ಯಾಗ ಬಂದದ್, ಹೆಂಗೆ ಬಂದದ್ ಎಂಬಂತ ಸಂಗತಿ ಮೂಲ ಪರಂಪರೆನ ಹೊಂದಿದ್ದದೆ.

8) ವಿವಾಹ 9) ಜಾಪಾಶನ 10) ತ್ರೇತಾಗ್ನಿಗಳ ಆದಾನ 11) ದರ್ಶ ಪೂರ್ಣ ಮಾಸಾದಿ ಇಷ್ಟಯಾಗ 12) ಅಪರ ಕರ್ಮ ಅಂತ್ಯೆಷ್ಟ ಕರ್ಮ. ಆದರೆ ಈ ಪೈಕಿ ಕೆಲವೊಂದ್ ಮಾತ್ರ ಆಚರಣೆಲಿ ಉಟ್ಟು. ನಮ್ಮ ದೇಶಲಿ ಇರ್‌ವ ಧರ್ಮಲಿ ಅವುಗಳ ಬೇರೆ ಬೇರೆ ಜಾತಿ ಪಂಗಡಗ ರೂಡಿ ಮಾಡ್ಕಂಡ್ ಬಂದ ಸಂಪ್ರದಾಯ ಸಂಸ್ಕಾರಗಳ್‌ಲಿ ಈಗ ಸಾ ವೆತ್ಯಾಸಗ ಉಟ್ಟು. ಕೆಲವೊಂದರ್‌ಲಿ ಹೋಲಿಕೆ ಕಂಡ್ರೂ ತಮ್ಮದೆ ಆದ ವಿಶೇಷ ಪದ್ಧತಿಗಳ ಕೆಲವು ಜಾತಿ ಪಂಗಡಗ ಆಚರ್‌ಸ್‌ದರ ನಾವೆಲ್ಲ



ಚಿತ್ರ: ಗರ್ಭಿಣಿ ಭೂಮಿ ತಾಯಿಗೆ ನೀರ್ ಹೊಯ್ಯೊದು.

ಸಂಸ್ಕೃತಿ ಮತ್ತೆ ಸಂಸ್ಕಾರ ಒಂದೇ ಅರ್ಥನ ಕೊಟ್ಟದೆ. 'ಸಂಸ್ಕಾರ' ಎಂಬ ಶಬ್ಧಕ್ಕೆ 'ಕರ್ಮ' ಎಂಬ ಅರ್ಥ ಸಾ ರೂಡಿಲಿ ಉಟ್ಟು. ಈ ಸಂಸ್ಕಾರ ಕರ್ಮಗಳ ವೇದ, ಸೂತ್ರ, ಧರ್ಮ ಶಾಸ್ತ್ರ, ಸ್ಮೃತಿ ಇವುಗಳ್‌ಲಿ ವಿವರಿಸಿದ್ದ್ ವಿಧಿಸಿ ಆಗುಟು. ಇಂತ ಸಂಸ್ಕಾರಗಳ್‌ಲಿ ಮುಖ್ಯ ಆಗಿ ಹನ್ನೆರ್ಡ್ ಕರ್ಮಗ ಆಚರಣೆಲಿ ಉಟ್ಟು. 1) ಗರ್ಭದಾನ 2) ಸೀಮಂತೋನ್ನಯನ 3) ಜಾತಕ ಕರ್ಮ 4) ನಾಮಕರಣ 5) ಅನ್ನ ಪ್ರಾಶನ 6) ಚೂಡಾ ಕರ್ಮ ಅಕ್ಷರಭ್ಯಾಸ 7) ಉಪನಯುನ ಸಮಾವರ್ತನ

ಗಮನಿಸಕ್. ಹಿಂದೂ ಸಂಪ್ರದಾಯದ ಕಟ್ಟ್‌ಕಟ್ಟಳೆಗಳ ಪಾಲ್‌ಸುವ ಗೌಡ ಜನಾಂಗ ತನ್ನದೇ ಆದ ವಿಶೆಷ ಸಂಸ್ಕೃತಿನ ಬೆಳ್ಸಿಕಂಟು. ಹೆರಿಗೆ, ನಾಮಕರಣ, ಋತುಶಾಂತಿ ಬಯಕೆ ಮೊದುವೆ, (ಸೀಮಂತ) ಸಾವು ಇವೆಲ್ಲಾ ಗೌಡ ಜನಾಂಗದೊವು ಆಚರ್‌ಸುವ ಸಾಂಸ್ಕೃತಿಕ ಪದ್ಧತಿಗ. ಇದರ್ಲಿ ಬಯಕೆ ಮೊದುವೆ ಸಾ ಒಂದು.

ಬಯಕೆ ಮೊದುವೆ ಅಥವ ಸೀಮಂತತ ಹೇಳ್ರೆ ಚೊಚ್ಚಲ್ ಬಸಿರಿಗೆ ಮಾಡ್‌ವ ಒಂದು ಸಂಸ್ಕಾರ. ಮೇಲೆ ತಿಳಿಸಿದ್ದಂಗೆ ಮೊಯಿಂಸನ ಬೇರೆ ಬೇರೆ ಹಂತ

ಗಳ್‌ಲಿ ಬೇರೆ ಬೇರೆ ಸಂಸ್ಕಾರಗಳ್ನ ನಡ್ಸುವ ಕ್ರಮು ಉಟ್ಟು. ಹೆಣ್ಣ್ ಸುರೂಲಿ ಬಸಿರಿ ಆಕನ (ಗರ್ಭಿಣಿ) ತಿಂಗ ಕಳ್ದಂಗೇ ಅವುಳಿಗೆ ಹೊಸ ರೀತಿನ ಬಯಕ್ಕೆ ಉಂಟಾಗಿ ಅದ್ ದಿನಂದಿನಕ್ಕೆ ಬೆಳ್‌ಕಂಡೇ ಹೋದೆ. ಸಾಮಾನ್ಯಾಗಿ ಬಸರಿ ಆದ ಏಳ್ನೆ ತಿಂಗಲಿ ಅವುಳಿಗೆ ಬಾಳಷ್ಟ್ ಆಸೆಗ ಉಂಟಾದ್ದೆ. ಇದ್ ಬವುಶ ಅವಳ ಗರ್ಭಲಿ ಬೆಳ್ಕಂಡಿರ್‌ವ ಕೂಸುನ ಅಗತ್ಯದ ಪರಿಣಾಮಂದಾಗಿ, ಅವಳ ಹೊಟ್ಟೆಲಿ ಹುಟ್ಟೆಕಂಬ ಅಪೂರ್ವ ಆದ ಬಯಕೆ ಇರ್ದೂಂತೇಳಿ ಒಪ್ಪಕಾದ ವಿಚಾರ. ಇಂತ ಬಯುಕೆನ ಪೂರೈಸ್‌ವ ಒಂದ್ ಕ್ರಮಕ್ಕೆ ಸೀಮಂತ ಅಥವ ಬಯುಕೆ ಮೊದುವೆಂತೇಳ್ದ್ ವಾಡಿಕೆ. ಹಿಂದೂ ಧರ್ಮದ ಪ್ರಕಾರ ಇದ್ ಮೊಯಿಸಂಗೆ ಸುರೂಲಿ ನಡ್ಸುವ ಧಾರ್ಮಿಕ ಸಂಸ್ಕಾರ. ಸಾಮಾನ್ಯ ಗರ್ಭವತಿಗೆ ಏಳ್ನೆ ತಿಂಗಲಿ ಬಯುಕೆ ಮೊದುವೆನ ಮಾಡ್ವ ಕ್ರಮು. ಈ ಕಾರ್ಯಕ್ರಮುನ ತವುರು ಮನೆವು ನಡ್ಸುವೆ. ಅದ್‌ಕೆಂತ ಏಳ್ನೆ ತಿಂಗ ತವುರು ಮನೆವು ಒಳ್ಳೆ ದಿನ ಮತ್ತೆ ಶುಭ ಮೂರ್ತನೋಡಿ ದಿನ ನಿಘಂಟ್ ಮಾಡಿ ಗರ್ಭಿಣಿನ ಕರ್ಕಂಡ್ಹೋಕೆ ಬಂದವೆ. ಬಸಿರಿ ಹೆಣ್ಣ್ ಮನೆಂದ ಹೊರ್ಡ್ಕನ ಕುಲ ದೇವ್ರುಗೆ ಕೈ ಮುಗ್ದ್ ಮನೆ ಹಿರಿಯುವರ ಕಾಲ್ ಹಿಡ್ದ್ ಆಶೀರ್ವಾದ ಪಡ್‌ದ್ ತವುರು ಮನೆಗೆ ಹೋದೆ. ಇದೇ ತಿಂಗಲಿ ಬಯುಕೆ ಮೊದುವೆನ ಮಾಡ್ದು. ಒಂದ್ ವೇಳೆ ಆ ತಿಂಗ ಏನಾರ್ ಅನ್‌ಕೂಲ ಆಗದ್ದರೆ ಒಂಬತ್ನೆ ತಿಂಗಲಿ ಮಾಡ್‌ವೆ. ಈ ಕಾರ್ಯಕ್ರಮುಕ್ಕೆ ಏಳ್ ದಿನಕ್ಕೆ ಮುಂದೆ ತವುರು ಮನೆವು ಮೊದುವೆಗಾಗಿ ಗೊನೆಕಡ್ದ್ ಇಸೊಕು. ಬಯುಕೆ ಮೊದುವೆನ ಗೊತ್ತ್ ಮಾಡ್ದ ಒಳ್ಳೆ ದಿನ ಮತ್ತೆ ಹೊತ್ತ್‌ನೆಲ್ಲ ಸುರೂಲೇ ತಿಳ್ಸಿ ಗಂಡ ಅವನ ಮನೆವು ಮತ್ತೆ ಬಾಕಿ ಎಲ್ಲಾ ನೆಂಟ್‌ರಿಷ್ಟರ್‌ನ ಕರ್‍ಸಿ ಕಂಡವೆ. ಬಯುಕೆ ಮೊದುವೆಗೆ ಸಮ್ಮಂದಪಟ್ಟವು ಹೋಕನ ಹೊಸ್ತ್ ಸೀರೆ, ರವಿಕೆ, ಹೂವು, ಚಿನ್ನಾಭರಣ ಸ್ಹೀತಿಂಡಿ ಇಂತದೆಲ್ಲ ತಕಂಡ್ ಹೋವಾ ಪದ್ಧತಿ ಉಟ್ಟು. ಬಸಿರಿನ ತಿಂಗಳ ನೋಡಿತಂಡ್ ಅಂದರೆ ಏಳ್ ಆದರೆ ಏಳ್ ಬಗೆನ ಒಂಬತ್ತ್ ಆದರೆ ಒಂಬತ್ತ್ ಬಗೆನ ಚಿನ್ನಾಭರಣ ಹಾಂಗೆ ಅಷ್ಟೆ ಬಗೆನ ಹೂವುನ ತಕಂಡ್ ಹೋಕು.

ಕಾರ್ಯಕ್ರಮು ಸುರು ಆಕನ ಕಾಯೆಣ್ಣೆ ದೀಪ ಹಚ್ಚಿ ನಾಕ್ ಚಾಪೆಗಳ ಚೌಕಟ್ಟೆಗೆ ಹಾಕಿ ಅದರ್‌ಲಿ ಗಂಡನ ಮನೆವರ ಊರ್ ಗೌಡ ಮತ್ತೆ ಮುಖ್ಯ ನೆಂಟ್ರ್‌ಗಳ್‌ನ ಕುದ್ರಿಸಿ ಗಂಡನ ಮನೆವು ತಂದ ಹೂವು, ವಸ್ತ್ರ ಹಾಂಗೆ ಚಿನ್ನಾಭರಣಗಳ ಹರಿವಾಣಲಿ ಹಾಕಿ ಚೌಕಟ್ಟ್‌ನ ನಡುಲಿ ಮಣೆ ಮೇಲೆ ಇಸೊಕು. ಆಮೇಲೆ ಎಲ್ಲವರ್‌ಂದ ಹರ್‌ಸಲ್ಪಟ್ಟ ಆ ಹೂವು, ವಸ್ತ್ರ, ಚಿನ್ನಾಭರಣಗಳ ಕುದ್ದಂತ್ಹವು ಗಂಡನ ಪೈಕಿಯುವುಕ್ಕೆ ತೆಗ್ದ್ ಕೊಟ್ಟವೆ. ಹಿಂಗೆ ಮಾಡ್ದ ಮೇಲೆ ಸ್ವೀಕಾರ ಮಾಡ್ದ ಅಲಂಕಾರ ವಸ್ತ್‌ಗಳ್‌ಂದ ಮೂರು ಇಲ್ಲರೆ ಐದ್ ಜೆನ ಮುತ್ತೈದೆ ಹೆಳ್ಮಕ್ಕ ಮಿಂದ್ ಕುದ್ದ ಬಸಿರಿ ಹೆಣ್ಣ್‌ನ ಹೊಸಬಟ್ಟೆ ಚಿನ್ನಾಭರಣ ಮತ್ತೆ ಹೂವುಗಳ್‌ಂದ ಅಲಂಕಾರ ಮಾಡಿ ಸೋಬಾನೆ ಹಾಡಿಕಂಡ್ ಅರ್ಸಿನ ಕುಂಕುಮದ ಬೊಟ್ಟು ಹಾಕಿ ಗಂಧ ಶಾಸ್ತ್ರ ಮಾಡ್ವ ಕ್ರಮು ಉಟ್ಟು. ಹೀಂಗೆ ಸರ್ವಲಂಕಾರ ಭೂಷಿತೆ ಆದ ಗರ್ಭಿಣಿಗೆ ಮುತ್ತೈದೆ ಹೆಳ್ಮಕ್ಕ ಆರತಿ ಮಾಡಿ ಆದ ಮೇಲೆ ದೀಪಕ್ಕೆ ಕೈ ಮುಗ್ದ್ ಗಂಡನೊಟ್ಟಿಗೆ ಹೊಸ ಚಾಪೆಲಿ ಕುದ್ರುಸೊಕು. ಮತ್ತೆ ಬಂದವೆಲ್ಲಾ ಗರ್ಭಿಣಿನ ತಲೆಗೆ ಅಕ್ಕಿ ಹಾಕಿ ಆಶೀರ್ವಾದ ಮಾಡ್‌ವ ಕ್ರಮು ಉಟ್ಟು. ಆ ಮೇಲೆ ಅಪ್ಪ ಅಥವ ಕುಟುಂಬದ ಯೆಜ್‌ಮಾನ, ಇಬ್ಬರ ತುಳ್ಸಿ ಕಟ್ಟೆ ಹಕ್ಕಲೆ ಕರ್ಕಂಡ್ ಬಂದ್ ಐದ್ ಎಲೆ ಒಂಧ್ ಅಡಿಕೆನ ಗರ್ಭಿಣಿನ ಕೈಲಿ ಕೊಟ್ಟ್ ಆದರ ಮೇಲೆಂದ ಐದ್ ಸರ್ತಿ ದೇವರ ಹೆಸ್ರ್‌ಲಿ ಭೂಮಿ ತಾಯಿಗೆ ನೀರ್ ಬುಡೋಕು. ಈಗ ಗಂಡ ಮತ್ತೆ ಹೆಣ್ಣ್ ಒಟ್ಟಿಗೆ ಇದ್ದ್ ಇಬ್ಬೊರು ಮೂಡು ಸೂರ್ಯಂಗೆ, ಪಡು ಚಂದ್ರಂಗೆ, ತೆಂಕ ಸಲಿಯೊಂದ್ರ, ಬಡಗು ಬಾಲಪುತ್ರ ಮತ್ತೆ ಕುಲದೇವ್ರು ಹೀಂಗೆ ಒಟ್ಟು ಐದ್ ಸರ್ತಿ ಭೂಮಿ ತಾಯಿಗೆ ನೀರ್ ಬುಡ್‌ವ ಕ್ರಮು ಉಟ್ಟು. ಮತ್ತೆ ಗರ್ಭಿಣಿ, ಅಕ್ಕಿನ ತನ್ನ ತಲೆ ಸುತ್ತ್ ತಂದ್ ಕೋಳಿ ಲಾಕಿ ಒಂದಕ್ಕೆ ತಿನ್ಸಿ ಬುಡ್‌ವ ಕ್ರಮು ಉಟ್ಟು. ಬವುಸ ತನ್ನ ಮೇಲೆ ಉಂಟಾಗ್‌ವ ಕೆಟ್ಟ ದೃಷ್ಟಿ ಶನಿಪರಿಹಾರಕ್ಕಾಗಿ ಈ ರೀತಿ ಮಾಡೀಕೂ ಸಾಕ್. ಅಲ್ಲರೆ ಸಂಸಾರಾಭಿವೃದ್ಧಿ ದೃಷ್ಟಿಲಿ ಆ ಕೋಳಿನ ಉಧಾರಣೆಗೆ ಬೇಕಾಗಿ ನೋಡಮಂತ ಕಲ್ಪಿಸಿ ಆ ಕೋಳಿಗೆ ಅಕ್ಕಿ ತಿನ್ಸಿ ಬುಡ್‌ವ ಒಂದು ಕ್ರಮುನ ಮಾಡಿರಿಕೂ ಸಾಕ್. ಇದ್ ಕೆಲವು ಜೆನಗಳ ಅಭಿಪ್ರಾಯ. ಇಲ್ಲಿಗೆ ಬಯುಕೆ ಮೊದುವೆನಾ ಪೂರ್ವಾರ್ಧ ಮುಗ್ತ್‌ಂತೇಳಕ್.

ಆ ಮೇಲೆ ಮನೆ ಒಳಗೆ ಗರ್ಭಿಣಿ ಮತ್ತೆ ಅವಳ ಗಂಡನ, ಮೂರ್ ಜೆನ ಮುತ್ತೈದೆಯುವರೊಟ್ಟಿಗೆ ಚಾಪೆಲಿ ಕುದ್ರಿಸಿ ಬಾಳೆಲೆ ಹಾಕಿ ಇಕ್ಕ್‌ವೆ. ಗರ್ಭಿಣಿಗೆ ಐದ್ ಅಥವ ಏಳ್ ಸರ್ತಿ ಹೊದ್‌ರಿ, ಬಾಳೆಣ್ಣ್ ಮತ್ತೆ ಬೇರೆ ಎಲ್ಲಾ ಬಗೆ ಬಗೆ ತಿಂಡಿಗಳ ಇಕ್ಕೊಕು. ಅವಳ ಹತ್ರ ಕುದ್ದವುಕು ಸಾ ಇಕ್ಕೊಕು. ಉಂಬಕೆ ಮುಂದೆ ಗಂಡ ಮತ್ತೆ ಹೆಣ್ಣ್ ಇಬ್ಬೊರು ಪದಾರ್ಥನ ಕಲ್ಸಿ ಒಂದೊಂದು ಉಂಡೆ ಮಾಡಿ ಹೆಣ್ಣ್ ಒಂದ್ ಗಂಡ್ ಕೂಸಿಗೂ ಗಂಡ ಒಂದು ಹೆಣ್ಣ್ ಕೂಸಿಗೂ ಕೊಡ್‌ವ ರೂಡಿ ಉಟ್ಟು.

ಮುಂದೆ ಹುಟ್ಟ್‌ವ ಗಂಡ್ ಕೂಸಾಗಲಿ ಹೆಣ್ಣ್ ಕೂಸಾಗಲಿ ಇವುಕೆ ಅವರ ಮೇಲೆ ಪ್ರೀತಿ ಇರೊಕುಂತೇಳಿ ತೋರ್ಸುವ ಕ್ರಮ ಇದ್. ಮತ್ತೆ ಉಂಬಕೆ ಸುರುಮಾಡ್‌ವೆ. ಗರ್ಭಿಣಿಗೆ ಮಾತ್ರ ಅವಳ ಬಯಕೆಗಿಂತ ಜಾಸ್ತಿ ಇಕ್ಕೊಕು. ಆಮೇಲೆ ಸಮಾರಂಬಕ್ಕೆ ಬಂದ ನೆಂಟ್‌ರಿಷ್ಟ್ರಗೆ ಇಕ್ಕ್‌ವೆ. ಊಟ ಮುಗ್ದ ಮೇಲೆ ಬಂದವೆಲ್ಲ ಗರ್ಭಿಣಿನ ಹರ್‌ಸಿ ಹೋದವೆ. ಇಲ್ಲಿಗೆ ಈ ಕಾರ್ಯಕ್ರಮ ಮುಗ್ದದೆ.

ಒಟ್ರೆ ಗರ್ಭಿಣಿಗೆ ಆವ ಹೊಸ ಹೊಸ ಬಯಕೆಗಳ ತೃಪ್ತಿ ಪಡ್ಸಿಕೆ ಮಾಡ್‌ವ ಈ ವಿಧಿ ನಿಯಮನೆ ಬಯಕೆ ಮೊದುವೆ. ಗಂಡಿಗೆ ಒಂದೇ ಮೊದುವೆ ಆದರೆ ಹೆಣ್ಣಿಗೆ ಮೂರ್ ಮೊದುವೆ, ಅಂದರೆ 1) ಋತುಶಾಂತಿ 2) ವಿವಾಹ 3) ಬಯಕೆ. ಈ ಬಯಕೆ ಮೊದುವೆನ ಏಳ್ ಅಥವ ಒಂಬತ್ತ್ ತಿಂಗಳ್‌ಲೆ ಮಾಡೊಕು. ಸರಿ ತಿಂಗಲಿ ಮಾತ್ರ ಮಾಡಿಕೆ ಬೊತ್ತ್ ಇದ್ ತಿಳ್‌ದವರ ಅಭಿಪ್ರಾಯ. ಸುರೂಗೆ ಬಸಿರಿ ಆಕನ ಅಂತರ್ಗತವಾಗಿ ಮೂಡ್‌ವ ವಿಶಿಷ್ಟ ರೀತಿನ ಬಯಕೆ ಬೇಡಿಕೆಗ ಗರ್ಭಿಣಿಲಿ ಕಂಡ್ ಬಂದದೆ. ಬಸಿರಿ ಆದ ಪ್ರತಿ ತಿಂಗಳ್ಲೂ ಕೂಡಾ ಅವಳ ಬೇಡಿಕೆಲಿ ಬದಲಾವಣೆ ಆದೆ. ತಿಂಗ ಕಳ್ದಂಗೆ ಅವಳ ಆಸೆ ಜಾಸ್ತಿ ಜಾಸ್ತಿ ಆಕಂಡೇ ಹೊದೆ ಕೆಲವು ಸಲ ಅವುಳಿಗೆ ಇಷ್ಟ ಆದ ತಿಂಡಿ ತಿನ್ಸ್ ಪಡಿಯಕೆ ಅವುಳು ಚಡಪಡ್‌ಸುದರ ಕಾಣಕ್. ಗರ್ಭಿಣಿನ ಎದ್‌ರ್ ಎನಾರ್ ತಿಂಡಿ, ಹಣ್ಣ್‌ಗಳ ತಿಂಬಕೆ ಬೊತ್ತ್‌ಂತ ಹಿರಿಯೊವು ಹೇಳ್‌ವೆ. ಅದ್ ಸತ್ಯನೂ ಹವುದು. ಅಂತೂ ಗರ್ಭಿಣಿನ ಭಾರಿ ಆಶೆನ ಪೂರೈಸಿಕೆ ಬಯಕೆ ಮೊದುವೆ ಒಂದ್ ಒಳ್ಳೆ ಪದ್ಧತಿ. ಹೊಸ ಸೀರೆ, ರವಿಕೆ, ಬೇರೆ ಬೇರೆ ಚಿನ್ನಾಭರಣಗ, ತರತರದ ಹೂವು, ಗಂಧ ಇವುಗಳ್‌ಂದ ಅವಳ ಅಲಂಕಾರ ಮಾಡಿ ನಾನಾ ತರದ ತಿಂಡಿಗಳ ತಿಂಬಕೆ ಕೊಡುದರ್‌ಂದ ಅವಳ ಬಯಕೆ ಖಂಡಿತಾ ಪೂರೈಸಿದೆಂತೇಳ್ರೆ ತೊಪ್ಪಲ್ಲ.

ಗರ್ಭಿಣಿನ ತವುರು ಮನೆಗೆ ಅಣ್ಣ ತಮ್ಮಂದ್ರ್ ಯಾರು ಕರ್ಕಂಡ್ ಹೋವಾ ಕ್ರಮ ಇಲ್ಲೆ. ಹಿರಿಯರ್ನ ಕೇಳ್ರೆ, ಇದ್ ಯಾಕೆ ಬೊತ್ತ್‌ಂತ ಒಂದ್ ಕತೆನೇ ಸುರು ಮಾಡ್‌ವೆ.

ಹಿಂದೊಮ್ಮೆ ಗರ್ಭಿಣಿನ ಒಡ ಹುಟ್ಟಿದ ಅಣ್ಣ ಏಳ್ನೆ ತಿಂಗಲಿ ತವುರಿಗೆ ಕರ್ಕಂಡ್ ಬಾಕನ ಮುಂದೆ ನಡ್ಕಂಡ್ ಹೋತಿದ್ದ ಅಣ್ಣನ ಕಾಲ್‌ನ ನೋಡಿ ಅವುಳಿಗೆ ಅವನ ಕಾಲ್‌ನ ಮಾಸ ಖಂಡನ ತಿಂಬಕೂತ ಆಸೆ ಆತ್. ಇವುಳು ಅಣ್ಣನೊಟ್ಟಿಗೆ ನಿನ್ನ ಕಾಲ್‌ನ ಮಾಸನ ನಂಗೆ ತಿಂಬಕೆ ಕೊಡುತಾ ಕೇಳ್ತ್‌ಗಡ! ಅಣ್ಣ ಅವನ ಕಾಲ್‌ನ ಮಾಸನ ತಂಗೆಗೆ ಕೊಟ್ಟದೆ ಅವುಳು ಮಾಸ ತಿಂದ್ ತೃಪ್ತಿ ಪಟ್ಟದೆ. ಆದರೆ ಈ ಘಟನೆಂದ ಅಣ್ಣಂಗೆ ಏನೋ ಒಂದು ರೀತಿನ ಸೊಂಸಯ ಮೂಡಿ ಅವಳ ಹೊಟ್ಟೆ ಒಳಗೆ ನೋಡ್ರೆ ಆ ಮಾಸದ ತುಂಡು ಗರ್ಭಲಿರ್‌ವ ಕೂಸುನ ಬಾಯಿಲಿ ಉಟ್ಟು! ಹಾಂಗಾಗಿ ಬಯಕೆ ಎಲ್ಲ ಕೂಸುದ್‌ಂತೇಳಿ ಅವಂಗೆ ಅರ್ಥ ಆದೆ. ಹಾಂಗಾಗಿ ಆಮೇಲೆ ಅಣ್ಣ ತಮ್ಮಂದರ್ ತವುರಿಗೆ ಗರ್ಭಿಣಿನ ಕರ್ಕಂಡ್ ಬಾವ ಕ್ರಮ ನಿತೋತು. ಆದರೆ ಇಲ್ಲಿ ನಾವ್ರುಗೆ ಈ ಕಟ್ಟ್ ಕತೆನ ಹಾಂಗಿರ್‌ವ ನಿರೂಪಣೆ ಮುಖ್ಯ ಅಲ್ಲ. ಗರ್ಭಿಣಿಗೆ ಬಯಕೆ ಉಂಟಾದು ಮಾತ್ರ ಖಂಡಿತ. ಇತರ ಸಮೆಲಿ ಇಲ್ಲದ ಅವಳ ಬಯಕೆ ಈ ಸಂದ್ರ್ಪಲಿ ಹುಟ್ಟಿಕಂಬಕೆ ಅವಳ ಹೊಟ್ಟೆಲಿರ್‌ವ ಕೂಸೇ ಮೂಲಕಾರಣಂತ ಹೇಳಕ್. ಈ ಹಂತಲಿ ಗರ್ಭಿಣಿಗೆ ಸಂತೋಸ, ವಿಶ್ರಾಂತಿ, ತೃಪ್ತಿ ಅಲ್ಲದೆ ಪೌಷ್ಟಿಕ ಆಹಾರ, ಇದರೊಟ್ಟಿಗೆ ಒಳ್ಳೆ ವಾತಾವರಣ ತೀರಾ ಅಗತ್ಯ. ಇದ್ ವೈಜ್ಞಾನಿಕ ದೃಷ್ಟಿಲೂ ಸಾ ಸರಿಂತಳೇ ಕಂಡದೆ.

ಆದರೆ ಇಂತ ಹಲವಾರ್ ವಿಧಿವತ್ತಾಗಿ ಇರ್‌ವ ಕ್ರಮಗಳ ಬಗ್ಗೆ ಇಂದ್‌ನ ಜೆನ ಉದಾಸೀನ ತೋರ್ಸಿ ಕೆಲವೊಂದು ಮುಖ್ಯ ಪದ್ಧತಿಗಳ್ನೇ ಕೈ ಬುಟ್ಟದ್ ಬೇಜರದ ಸಂಗತಿ. ವೈಜ್ಞಾನಿಕ ಮತ್ತೆ ಶಾಸ್ತ್ರೀಯವಾಗಿ ರೂಪಿಸಿದಂತ ನೂರಾರ್ ವಿಧಿನಿಯಮಗಳ ಮರ್ತದ್ ಮಾತ್ರ ಅಲ್ಲದೆ ಆ ಬಗ್ಗೆ ಏನೂ ತಿಳಿಯದೆ ಇರ್‌ವ ಇಂದ್‌ನ ಜನಾಂಗಕ್ಕೆ ಈ ಇಸಯಲಿ ತಿಳ್‌ವಳಿಕೆ ನೀಡ್ಬು ಅಗತ್ಯ. ನಾವುಗೆ ಗೊತ್ತಿದ್ದ ವಿಚಾರ ಪದ್ಧತಿಗ ನಮ್ಮೊಟ್ಟಿಗೆ ಅಂತ್ಯ ಆಗದೆ ಅದ್ ಹೊಸ ಪೀಳಿಗೆಲೂ ಚಿಗ್‌ರ್ ಒಡಿಯಕು. ಆ ಬಗ್ಗೆ ಹೈದಂಗ ಮತ್ತೆ ಗೂಡೆಗಳಿಗೆ ಆಸಕ್ತಿ ಹುಟ್ಟೊಕು. ಹಿರಿಯೊವು ಸಾ ಈ ಇಸಯಲಿ ಮುತ್‌ವರ್ಜಿ ವಹಿಸೋಕು. ಸಂಪ್ರದಾಯಗ ಬರೇ ಕುರುಡು ಸಂಪ್ರದಾಯಗಳಾಂಗೆ ಮುಂದ್‌ವರಿಯದೆ ಅವುಗಳ ಸತ್ಯಾ ಸತ್ಯತೆಗಳ ಕುರ್ತ್ ಅರಿವು ಮೂಡೊಕು. ಹಿಂದೂ ಸಂಸ್ಕೃತಿನ ಗೌಡ ಪರಂಪರೆಲಿ ಹಾಸ್ ಹೊಕ್ಕ ಸಾಂಪ್ರದಾಯಿಕ ವಿಧಿನಿಯಮಗಳ ಬಗ್ಗೆ ಎಲ್ಲಾ ಗೌಡ ಜೆನಗ ಆಸಕ್ತಿ ಪಟ್ಟ್ ತಿಳ್ದ್, ಅವುಗಳ ರೂಪಿಸಿ ಕಂಡ್ರೆ 'ಗೌಡ' ಸಂಸ್ಕೃತಿ ಸರ್ವಶ್ರೇಷ್ಟಂತ ಹೇಳ್ಸಿಕಂಬದರ್ಲಿ ಖಂಡಿತ ಸೊಂಸಯನೇ ಇಲ್ಲೆ.

# ಪ್ರಾಯಽ ಕಾಯುವ ನುಂಗಿತ್ತಾ....

## ಜನಪದ ಗೀತೆ

ಪ್ರಾಯಽ ಕಾಯುವ ನುಂಗಿತ್ತಾ...
ನೋಡವ್ವ ತಂಗೆ ||ಪ||
ಪ್ರಾಯಽ ಕಾಯುವ ನುಂಗಿ
ನ್ಯಾಯ ಅನ್ಯಾಯವ ನುಂಗಿ
ನ್ಯಾಯ ನೀತಿ ಧರ್ಮನ್ನೆಲ್ಲ ಕರ್ಮ ನುಂಗಿತ್ತಾ...
|| ನೋಡವ್ವ ||೧||

ಕಣ್ಣ್ ಹೆಣ್ಣ್‌ನ ನುಂಗಿ
ಹೆಣ್ಣ್ ಮನ್ಸ್‌ನ ನುಂಗಿ
ಮಣ್ಣ್ ಹೊನ್ನ್ ಕಣ್ಣ್ ಎಲ್ಲ ಹೆಣ್ಣ್ ನುಂಗಿತ್ತಾ...
|| ನೋಡವ್ವ ||೨||

ಆಸೆ ಕಾಸ್‌ನ ನುಂಗಿ
ಕಾಸ್ ದೋಷನ ನುಂಗಿ
ಆಸೆ ದೋಷ ಕಾಸ್ ಕರ್ಮನ ಮನ್ಷ ನುಂಗಿತ್ತಾ...
|| ನೋಡವ್ವ ||೩||

ರಾತ್ರೆ ಹಗಲ್‌ನ ನುಂಗಿ
ಹಗಲ್ ರಾತ್ರೆನ ನುಂಗಿ
ರಾತ್ರೆ ಹಗಲ್ ಕೂಡಿ ಒಂದು ದಿನವ ನುಂಗಿತ್ತಾ...
|| ನೋಡವ್ವ ||೪||

ಹಾಲ್ ನೀರ್‌ನ ನುಂಗಿ
ನೀರ್ ಹಾಲ್‌ನ ನುಂಗಿ
ನೀರ್ ಹಾಲ್ ಮಾರ್ದ ಜೆನ್ರ ಮಾನ ನಿಂತತ್ತಾ...
|| ನೋಡವ್ವ ||೫||

ಗಾಂಧಿಽ ತತ್ವನ ನುಂಗಿ
ಮಂದಿಽ ಸತ್ಕರ್ಮ ನುಂಗಿ
ಗಾಂಧಿ ತತ್ವ ಸಾರನ ಸರಾಯಿ ನುಂಗಿತ್ತಾ...
|| ನೋಡವ್ವ ||೬||

ಕಾಡ್ಽ ಬೆಟ್ಟನ ನುಂಗಿ
ಬೆಟ್ಟಽ ನಾಡ್‌ನ ನುಂಗಿ
ಕಾಡ್ ಬೆಟ್ಟ ಎಲ್ಲ ಕೊಡ್ಗ್ ನಾಡ್ ನುಂಗಿತ್ತಾ...
|| ನೋಡವ್ವ ||೭||

ವಿಧ್ಯೆಽ ಬುದ್ಧಿನ ನುಂಗಿ
ಬುದ್ಧಿ ಸುದ್ಧಿಯ ನುಂಗಿ
ವಿಧ್ಯೆ ಬುದ್ಧಿ ಶುದ್ಧಿನ ನಮ್ ಜನಾಂಗ ನುಂಗಿತ್ತಾ...
|| ನೋಡವ್ವ ||೮||

ಸತ್ಯಽ ಮಿಥ್ಯವ ನುಂಗಿ
ಶಾಂತಿ ಕ್ರಾಂತಿಯ ನುಂಗಿ
ಸತ್ಯ ಪ್ರೀತಿ ಶಾಂತಿ ನೆಲೆಯು ಕಾಲ ಬಂದತ್ತಾ ...
|| ನೋಡವ್ವ ||೯||

—ಲೇ: ಇ. ಜಿ. ಅಪ್ಪಂಗಾಯ, ಅಜ್ಜಾವರ

# ಅಪ್ಪನ ರಂಪಾಟ

—ಬಾರಿಯಂಡ ಆರ್. ಜೋಯಪ್ಪ, ಮದೆ

ಪೇಟೆಗೆ ಅಪ್ಪ ನನ್ನನೇ ಕರ್ಕಂಡೋದು. ಅಕ್ಕಯ್ಯ ಮರ್ಟೆರಲ್ಲ ಏನ್ ಮಾಡಿರೂ ಕರ್ಕಂಡೋದ್ಲೆ. ಯಾಕೆತ ನಂಗೆ ಈಗ ಗೊತ್ತಾತ್. ಅಪ್ಪ ಪೇಟೆಲಿ ನನ್ನನ-ನಿಂಗೆ ಅದ್ ಬೇಕಾಮನೆ, ಇದ್ ಬೇಕಾಮನೆತ ಕೇಳ್ದ್. ನಾನ್ ಬ್ಯಾಡ ಬ್ಯಾಡತ ಹೇಳ್ದ್, ಅಕ್ಕಯ್ಯ ಮಾತ್ರ ಅದ್ ಬೇಕ್, ಇದ್ ಬೇಕ್‌ತ ಹಟ ಮಾಡ್ದ್. ಅದಿಕೆ ನನ್ನನ ಕರ್ಕಂಡೋದರೆ ದುಡ್ಡ್ ಖರ್ಚೆ ಇಲ್ಲೆ. ಹೆಗ್‌ಲ್‌ಲಿ ಕೂರ್ಸಿಕಂಡ್ ನನ್ನನ ಕರ್ಕೊಂಡೋಗ್ತಿತ್.

ಹಟ್ಟಲಿದ್ದ ದೊಡ್ಡ ದೊಡ್ಡ ಎತ್ತ್‌ಗಳ ಮಾರುದು, ಲಾಚಾರಾದ ಎತ್ತ್‌ಗಳ ಕ್ರಯ ಕೊಟ್ಟ್ ತಾದು, ಇದೇ ಅಪ್ಪನ ಕೆಲ್‌ಸ. ಅದೊಂದಿನ ನಂಗೆ ಸರಿಯಾಗಿ ಗ್ಯಾನ ಇಲ್ಲೆ, ಗೋಣಿಕೊಪ್ಪಲಿ ದನದ ಸಂತೆ. ಎತ್ತ್ ತರೋಕುತ ಎಪ್ಪತ್ತ್ ರೂಪಾಯಿನ ಜೋಬಿಗೆ ತುರ್ಕಿಕಂಡ್ ನನ್ನ ಹೆಗ್‌ಲ್‌ಲಿ ಕೂರ್ಸಿಕಂಡ್ ಹೊತಾಕೆ ಚುಮಿ ಚುಮಿ ಬೆಳ್‌ಕ್ ಇರ್ಕನೇ ಹೊರ್ಟತ್. ನಾನ್ ಕಪಿ ಮರಿ ಕುದ್ದಂಗೆ ಅಪ್ಪನ ಕುತ್ತಿಗೆನ ತಬ್ಬಿ ಹಿಡ್ಕಂಡೆ. ಹಾದಿ ಉದ್ದಕ್ಕೆ ನಂಗೆ ಬುದ್ಧಿ ಹೇಳ್ದ್, ನೀನ್ ಹಂಗೆ ಆಕು ಹಿಂಗೆ ಆಕುತ ಅಪ್ಪ ಹೇಳ್ದಂಗೆ ನಾನ್ ಆತ್ ಆತ್‌ತೇ ಹೇಳ್ತಿದ್ದೆ.

ಅಂತೂ ಮಾರ್ಕೆಟಿಗೆ ಹೋದೊ. ಮೂಡ್ಸಿನೆವು ನೋಡೊಕು, ಎತ್ತ್‌ಗಳ್ಗ ಚಟಪಟೇರ್‌ತ ಹೊಡ್ದ್ ಓಡ್ಸುದು! ಎತ್ತ್‌ಗ ಆಗ ಬಾಲ ಎತ್ತಿಕಂಡ್ ಓಡ್ತಿದ್ದೊ. ಅಪ್ಪಂಗೆ ಕುಶೀ ಆಗಿ ಪಟಯ ಎತ್ತ್‌ನ ಯಾಪಾರ ಮಾಡ್ತ್. ದಳ್ಳಾಳಿಗ ಅಪ್ಪನ ಸುತ್ತ-ಮುತ್ತ ಬಂದ್ ಮುತ್ತಿಕಂಡೊ. ಒಬ್ಬಂತೂ ತಬ್ಬಿಕಂಡತ್. ಹೆಂಗಾರ್ ಮಾಡಿ ದುಡ್ಡ್ ಚೊಟ್ಕೊಕಲೇ, ಹಂಗೂ ಹಿಂಗು ಯಾಪಾರ ಆತ್. ಅಂವ ಎತ್ತ್‌ನ ಅಪ್ಪನ ಕೈಗೆ ಕೊಡಿಕೆ ಮುಂದೆ ಸೊಲ್ಪ ಹುಲ್ಲು, ಸಗ್‌ಣಿ ತಕ್ಕಂಡ್ ಎತ್ತ್‌ನ ಸುತ್ತ ತಂದ್ ಬಿಸಾಕಿ ಬಳ್ಳಿನ ಅಪ್ಪನ ಕೈಗೆ ಕೊಟ್ಟತ್. ನಾನ್ ನೋಡ್ತಂಡೇ ಸಿತ್ತಿದ್ದೆ. ಕೈಲಿದ್ದ ಕಡ್ಲೆ ತಿಂಪದೇ ಗೊತ್ತಾತ್‌ಲೆ. ಅಪ್ಪ ಎಷ್ಟ್ ದುಡ್ಡ್ ಕೊಟ್ಟತ್‌ತ ಗೊತ್ತಾತ್‌ಲೆ ನಂಗೆ. ಹೊಟ್ಟೆ ಗೊರ ಗೊರಂತ ಸದ್ದ್ ಮಾಡ್ತಿತ್. ಹೊಟ್ಟೆ ಉಬ್ಬಿಸಿದಂಗಾತಿತ್ ಮತ್ತೆ ಹೆಂಗೆ ಗೊತ್ತಾಕು ನಂಗೆ ಕಡೆಲಿ ಅಪ್ಪನ ಕೈಲಿ ಎತ್ತ್‌ನ ಹಗ್ಗ ಹೆಗ್‌ಲ್ ಮೇಲೆ ನಾನ್.

ಮನೆಗೆ ಎತ್ತ್‌ಕನ ಮಯಮಯ ಕತ್ತಲೆ ಆಗಿತ್ತ್. ಅವ್ವ, ಅಕ್ಕಯ್ಯ ನಮ್ಮನೇ ಪಾರ ಕಾಯ್ತಿದ್ದೊ. ಕೆಂಜು ನಾಯಿ ಕುಂಯ್ ಕುಂಯ್‌ತ ಬಾತ್. ಎತ್ತ್‌ನ ಸುತ್ತ ನಾಯಿ ಸುತ್ತ್‌ಕನ ಎತ್ತ್ ತಪಕತ ಒದ್ದತ್; ಆ ಒತ್ತ್ರಕ್ಕೆ ನಾಯಿ ಸಗ್‌ಣಿ ಗುಂಡಿಗೆ ಹಾರಿ ಬೀತ್. ಇಲ್ಲಿಂದ ಸುರಾತ್ ಎತ್ತ್‌ನ ಕತೆ ಕೇಳಿ; ಅವ್ವಂಗೆ ಹೊಸ ಕೆಲ್‌ಸ ಸುರು- ಮಕ್ಕಳ ಸ್ಕೂಲಿಗೆ ಕಳ್ಸೊಕು, ಪಟಯ ಎತ್ತ್‌ನ ಜುಲಾಬಿಗೆ ಮದ್ದ್ ಕೊಡೋಕು, ಬೊಳಿ ಬುಡ್ಕನ ಅಪ್ಪ ಹೂಡಿಕೆ ಹೋಕನ ಅವ್ವನೂ ಒಟ್ಟಿಗೆ ಹೋಕು – ಇಲ್ಲರೆ ಅಪ್ಪನ ಸಿಟ್ಟ್ ನೆತ್ತಿಗೇರ್ದು. ಗದ್ದೆಲಿ ನೊಗದ ಯಡ್ದ ಭಾಗಕ್ಕೆ ಪಟಯನ, ಬಲ್ದ ಭಾಗಕ್ಕೆ ಚೆನಿಯನ ಕಟ್ಟಿದ ಮೇಲೆ ಅವ್ವ ಮನೆಗೆ ಬಾದು.

ಒಂದಿನ ಸಾಯ್ಕಾಂಲ ಅಪ್ಪ ಏನ್ ಮಾಡ್ತ್ ಗೊತ್ತಾಟಾ? ಸೊಲ್ಪ ಹರ್‌ಳೆಣ್ಣೆ, ಬೆಳಿ ಬಟ್ಟೆ, ಬೆಂಕಿಪಟ್ನ ತಕ್ಕಂಡ್ ಹಟ್ಟಿಗೋತು. ನಾನ್ ಕೊತ್ತಿಮರಿ ಹಾರ್ದಂಗೆ ಹಾರಿಕಂಡ್ ಹೋಗಿ ಮರೇಲಿ ನಿತ್ತ್‌ಕಂಡೆ. ಅಪ್ಪ ಪಟಯ ಎತ್ತ್‌ನ ಕೊಂಬಿಗೆ ಬಟ್ಟೆ ಸುತ್ತಿ ಕೊಡಿಂದ ಯಣ್ಣೆ ಹೊಯ್ದ್, ಸರ್‌ಂತಾ ಬೆಂಕಿ ಕಡ್ಡಿ ಗೀರಿ ಬೆಂಕಿ ಕೊಟ್ಟತ್. ಆಗ ಆ ಕೊಂಬು ಪಟ್ಟೆ ಪಟ್ಟೆ ಕಾಂಬೊದು. ನಂಗೆ ಪುಕು ಪುಕುತ ಆತಿತ್. ಕೊಂಬುಲಿ ಬೆಂಕಿ ಹೊತ್ತಿದೆ. ಅಪ್ಪನ ಕತೆ ಎಂತತ ಗ್ಯಾನ ಮಾಡ್ದೆ ಗೊತ್ತಾತ್‌ಲೆ. ಅಪ್ಪನೇ ಕೇಳ್ಕೊತೇಳ್ರೆ ಹೂಡ್‌ವ ಕೋಲ್‌ಲೆ ಬಾರ್ಸಿರೆ ಏನ್ ಮಾಡ್ದು? ಅವ್ವನ ಕೇಳ್ದೆ – ಆಗ ಅವ್ವ ಹೇಳ್ತ್, ಎತ್ತ್ ಹುಲ್ಲ್‌ನ ಮುದ್ದೆ ಮುದ್ದೆ ಉಗ್ದದೆ ಅದಿಕೆ ಹಲ್ಲ್ ಗಟ್ಟಿ ಇಲ್ಲೆ. ಕೊಂಬು ಕಾಸಿರೆ ಗಟ್ಟಿ ಆದೆತ ಯಾರೋ ಹೇಳ್ದೊಗಡ! ಅದಿಕೆ ಅಪ್ಪ ಎತ್ತ್‌ನ ಕೊಂಬಿಗೆ ಬೆಂಕಿ ಕೊಟ್ಟದ್! ಅಲ್ಲ ಗ್ಯಾನ ಮಾಡಿ, ಆ ಎತ್ತ್ ಎಷ್ಟ್ ಕಷ್ಟಪಟ್ಟದರ್ಕ. ಹೊತಾರೆ ನೋಡ್ದೆ ಕೊಂಬು ಕಪ್ಪಾಗುಟ್ಟು. ಹೊಟ್ಟೆಲಿದ್ದ ಸಗ್‌ಣಿನ ಬುಕ್ಕಿ ಬುಕ್ಕಿ ಹಾಕಿಟು. ಎತ್ತ್‌ಗೆ ನಿಲ್ಲಿಕೂ ಆದುಲೆ - ಮಲ್ಗಿಕೂ ಆದುಲೆ. ಅಷ್ಟ್ ತುಂಡಾಗಿ ಕಟ್ಟಿರೆ ಹೆಂಗೆ ಮಲ್ಗ್‌ದು?

ಇದಾಗಿ ಹದ್‌ನೈದ್ ದಿನ ಆಗಿದರ್ಕ, ನಾನ್ ಅಕ್ಕಯ್ಯ ಸ್ಕೂಲಿಗೆ ಹೋಗಿ ಮನೆಗೆ ಬಂದರೆ ಅವ್ವಪ್ಪ ಇಬ್ರೊರೂ ಮನೆಲಿಲ್ಲೆ. ನಾವು ನೆಟ್ಟಂಗೆ ಹಟ್ಟಿಗೋದೊ.

ಅಲ್ಲಿ ನೋಡ್ರೆ ಅವ್ವ ಎತ್ತ್‌ನ ಬಾಲ ಹಿಡ್ದ್ ಎಳ್ದದೆ, ಅಪ್ಪ ಕೊಂಬುನ ಎಳ್ದದೆ, ಎತ್ತ್ ಮಾತ್ರ ಮುಸ್‌ಗು ದುಲೆ! ಕೆಂಜು ನಾಯಿಗೆ ಕುಸಿಯೋ ಕುಸಿ. ಅದ್ ಅತ್ತೊನ್ಮೆ ಇತ್ತೊನ್ಮೆ ಬೊರ್ ಬೊವ್‌ತ ಹಾರಾಡ್ದೆ. ಅಪ್ಪ ಅಂಬಟ್ಟೆ ಕಚ್ಚಿಕಂಡ್; "ಏಳ್ ಏಳ್ ನಿನ್ನ ಬಾಯಿಗೆ"..... ತೇಳ್ಕಂಡ್ ಎತ್ತ್‌ದೆ. ಅದೆಲ್ಲಿ ಎದ್ವದೆ, ಕಾಲ್ಕ್ಯಗೆ ಕೋಟ ಹತ್ತಿಟು. ನಂಗೆ ಒಂದ್ಕಡೆಂದ ಕುಸೀ ಆತ್ ಯಾಕೆ ಗೊತ್ತುಟಾ? ಎತ್ತ್ ಸತ್ತರೆ ಜಡ್ದ್ ತಿಂಬಕೆ ಹದ್ದ್‌ಗ ಬಂದವೆ, ಆಗ ಹದ್ದ್‌ಗಳಿಗೆ ಕಲ್ಲ್ ಹೊಡಿಯಕ್ – ಜಡ್ದ್ ತಿಂಬಕೆ ನಾಯಿಗ ಕಚ್ಚಾಡ್‌ನ ದೊಣ್ಣೆ ತಕಂಡ್ ಬಡಿಯಕ್‌ತ.

ಅಪ್ಪ ಮನೆಗೆ ಹೋಗಿ ಕೈಕಾಲ್ ತೊಳ್ದ್ ನಾಕಾಣೆ ಪಾವುಲಿನ ಬೆಳಿ ಬಟ್ಟೆಲಿ ಕಟ್ಟಿ ಹಟ್ಟಿಗೆ ಬಾತ್. ಕಾಲ್ ಜೋಡ್ಸಿಕಂಡ್ ಹರಿಕೆ ಹೇಳಿಕೆ ಸುರು ಮಾಡ್ತ್, "ಸಾಮಿ ಅಂಗರಂಗೆ ಹೇಳ್ಕಂಬೊದು ಏನ್‌ತೇಳ್ರೆ–ನೀನ್ ನೋಡ್ದಂಗೆ ಎತ್ತ್ ಅಡ್ಡ ಬಿದ್ದೊ್‌ವುಟು- ನಿನ್ನ ಹೆಸ್ರ್‌ಲಿ ಹಣ್ಕಾಯಿ ಮಾಡ್ತವೊಳೆ. ಮೊದ ನೀರ್ಲಾಗಲಿ, ಒಡ್ಡ ಕಾಯಿಲಾಗಲಿ, ಮುರ್ದ ಬಾಳೆಹಣ್ಣ್‌ಲಾಗಲಿ ತೊಪ್ಪ ಇರ್ದ್ರ, ಆದ ತೊಪ್ಪುನ ಒಪ್ಪ ಪಾಲ್ಸಿಕಣೋಕು. ಚೆನಿಯ ಎತ್ತ್ ಇನ್ನೂ ಬಾತ್‌ಲೆ, ಅದರ ಹಟ್ಟಿಗೆ ಬರ್ ವಂಗೆ ಮಾಡೋಕು, ಹುಲಿ ಬಾಯಿಗೆ ಸಿಕ್ಕಿರೂ ಕಾಪಾಡ್ವ ಬಾರ ನಿಂದ್. ದನಕರ್‌ಗ ಹೋದಲ್ಲಿ ಬಂದಲ್ಲಿ ಸುಖ ಮುಖ ಕೊಡೊಕು. ಬಂದ ಕಷ್ಟ ಬಂದೋತು, ಇನ್ನ್ ಬಾಕೆ ಬೊತ್ತ್, ಈ ನಾಕಾಣೆ ಹಣಲಿ ನೀನ್ ಹಿಡ್ದ್ ನಿಲ್ಲೊಕು – ಸಾಮೀ.... ತೇಳಿ ಸೂರಿಗೆ ಕಟ್ಟಿತ್. ಅಪ್ಪನ ಹೇಳಿಕೆ ಮುಗಿಯಕನ ಅವ್ವ ಸಂಣ ಮೆಣ್ಸ್‌ನ ಅರ್ದ್ ತಕಬಾತ್.

ಸಂಣ ಮೆಣ್ಸ್‌ನ ಬೆದ್‌ರ್ ಗೊಟ್ಟೆಕೆ ತುಂಬಿಸಿ ಎತ್ತ್‌ನ ಬಾಯಿ ಬುಡ್ಸಿ ಹೊಯ್ದೊ. ಸೊಲ್ಪ ಹೊತ್ತಿಗೆ ಎತ್ತ್ ಕೆಬಿ ಆಡ್ಸಿತ್-ಆಗ-ಹಿಡಬಡಿತ ಹೇಳಿ ಏನೇನೋ ಮಾಡ್ಕನ ಎತ್ತ್ ಎದ್ದ್ ನಿಲ್ಲೊಕಾ? ನಿತ್ತ ಎತ್ತ್ ಉರಿ ತಡಿಯಕಾಗದೆ ಜೊರೋತ ಉಚ್ಚೆ ಹೊಯ್ತ್. ನಂಗೆ ಬೇಜರಾತ್-ನಾ ಮಕ ಪೂಜಿಕಂಡ್ ಮನೆಗೆ ಹೋದೆ.

ಮಾರ್ನೆ ದಿನ ಚೆನಿಯ ಎತ್ತ್ ಹಟ್ಟಿಗೆ ಬಾತ್. ಅದರ ಬೆನ್ನ್ ನೋಡ್ರೆ ಬೆರೀ ಬರೆ ಹಂಗಂಗೇ ಕಂಡದೆ. ಯಾರಾ ಗದ್ದೆಗೆ ಹೋಗಿತ್ತೊ, ಏನೋ ಕಟ್ಟಿ ಹಾಕಿ ಸಮಾ ಬಡ್ದೊಳೊ.

ನಾನ್ ಕಾಯಿ ತಕ್ಕಂಡ್ ಅಂಗರನ ಕಲ್ಲಿಗೆ ಹೊಡ್ದ್ ನೀರ್‌ನ ನಾನೇ ಕುಡ್ದೆ. ಒಂದ್ ಚೂರು ಕಾಯಿನ ಕಲ್ಲ್‌ಲೇ ಮಡ್ಗಿದೆ. ಕಡೇಲಿ ಬಂದ್ ತಿಂದನೆತ ಗ್ಯಾನ ಮಾಡ್ಕಂಡ್ ಅಷ್ಟ್ ದೂರ ಹೋಗೊಳೆಯೋ ಇಲ್ಲೆಯೋ ಆ ಕೆಂಜು ನಾಯಿ ಕಾಯಿಚೂರ್‌ನ ತಿಂದ್ ಅದೇ ಕಲ್ಲಿಗೆ ಉಚ್ಚೆ ಹೊಯಿದ್‌ಬುಡೊಕಾ ಛೇ! ಅಂಗರನ ಕಲ್ಲಿಗೆ ಅದ್ ಅಶುದ್ಧ ಮಾಡ್ತಲೆ. ನಾನ್ ಕಲ್ಲ್‌ನ ತೊಳ್ದರೆ ನಾಯಿ ಹಿಂಗೆ ಮಾಡ್ತಲೆ, ದೇವ್ರುನ ಬಯ್ಕಂಡೆ-ಸಮಧಾನ ಆತ್. ಯಾಕೆತೇಳ್ರೆ ಅದರ್ನೆಲ್ಲ ದೇವ್ರು ಮರೇಲಿ ನೋಡ್ದೆ. ಎದ್ರಿಗೆ ಅದ್ ಬಾದುಲೆ! ಅಂದೂ ಅಷ್ಟೆ–ಇಂದೂ ಅಷ್ಟೆ. ದೇವ್ರು ಎದ್ರಿಗೆ ಬಾತೂ ಇಲ್ಲೆ-ಅದ್ ಬಾಕೂ ಇಲ್ಲೆ!

---

## ಅಜ್ಜನ ತೊಪ್ಪಿ

ಅಪ್ಪುಣೆ ಅಜ್ಜಂಗೆ ಅರ್‌ವತ್ತಾತ್
ಅಂಗ್‌ಡಿ ಮುಟ್ಟೆ ನಡಿಯಕೆ ಬೊತ್ತ್
ಸಂಕ್ರಾಂತಿ ಹಬ್ಬಲಿ ಹಾಕಿತ್ ಕುಪ್ಪಿ
ತೊಡ್ ದಾಟ್‌ಕನ ಬಿದ್ದತ್ ನೀರಿಗೆ ತೊಪ್ಪಿ
ಸಿಟ್ಟ್‌ಲಿ ಹೇಳ್ತ್–ನಿಂಗೆ ಬೇಡ ನೋಡ್
ಹಾರ್ನೆ ನೀರಿಗೆ ನಾ ಈಗ ಹೈದ ನೋಡ್
ಹೈದನೂ ಬಾತ್‌ಲೆ ಅಜ್ಜನೂ ಬಾತ್‌ಲೆ
ಮನೆಲಿ ಅಜ್ಜನ ನೋಡಿಕೆ ಆದುಲೆ.

—ಚೊಟ್ಟೆಂಡ ಸೋಮಯ್ಯ

# ಸ್ಮರಣೆ

ಸ್ವಾತಂತ್ರಕೆ ಹೋರಾಡ್ದ ನೂರಾರ್ ಜೆನ
ಹುತಾತ್ಮರ್ ಅರ್ಪಿಸ್ಯೊ ಅವರ ಪ್ರಾಣನ,
ಭಾರತಲಿ ಇದ್ದೊ ಇಂತವು ಬಾಳ ಜೆನ
ಗುಡ್ಡೆ ಅಪ್ಪಯ್ಯನ ಕುರ್ತ್ ಹೇಳ್ನೆ ಸೊಲ್ಪ ನಾ-

ಚಿಕ್ಕ ವೀರರಾಜ ಕೊಡಗ್‌ನ ಆಖಿರಿ ರಾಜ
ಕುದ್ಕ ಬುದ್ದಿ ಅಂಗ್ಲರ್ ಇಲ್ಲಿ ಬಿತ್ತಿದೊ ವಿಷಬೀಜ,
ಅವು ಕೊಡಗ್‌ನ ಗೆದ್ದೊ; ಮಡಿಕೇರಿಗೆ ಬಂದೊ
ರಾಜನ ಕಳ್ಸಿದೊ ದೂರದ ಕಾಶಿಗೆ.

ಕೊಡಗ್‌ಲಿ ಇಲ್ಲದೆ ಆತ್ ದೊರೆತನ
ಬ್ರಿಟೀಷರ್ ನೇಮಿಸಿದೊ ಇಲ್ಲಿಗೆ ಸೂಪರಿಂಡೆಂಟ್‌ನ,
ಕ್ಯಾಪ್ಟನ್ ಲೀಹಾರ್ಡಿಂತೇಳ್‌ವ ಕೆಂಪು ಮುಖದವನ
ಪ್ರಜೆಗಳಿಗೆ ಆತಿತ್ತ್‌ಲೆ ಕಂಡ್ರೆ ಇವನ ತಲೆನ.

ಆಗಳೂ ಇದ್ದೊ ದೊಡ್ಡ ದೊಡ್ಡ ಜೆನ ನಮ್ಮಲ್ಲಿ
ಗುಡ್ಡೆ ಅಪ್ಪಯ್ಯ, ಕೆದಂಬಾಡಿ ರಾಮಗೌಡ, ಅಣ್ಣಗೌಡುತ್ತೇಳಿ,
ಎಲ್ಲೊವ್ ಒಂದಾಗಿ ಸೇರ್‍ದ್ದೊ ಸುಳ್ಯಲಿ
ಕೆಂಪು ಮುಖದವರ ಓಡ್ಸ್‌ವ ಒಂದೇ ಹಟಲಿ.

ಪುಷ್ಪಗಿರಿನ ಪುಟ್ಟಬಸಪ್ಪ "ಕಲ್ಯಾಣ ಸ್ವಾಮಿ" ಆತ್
ಕೊಡಗ್‌ನ ರಾಜ ಪ್ರತಿನಿಧಿಂತ ಜೆನಕ್ಕೆಲ್ಲಾ ಗೊತ್ತಾತ್,
ಕೊಡಗ್‌ನ ದಂಡನಾಯಕ ಗುಡ್ಡೆಮನೆ ಅಪ್ಪಯ್ಯ,
ಕಲ್ಯಾಣ ಸ್ವಾಮಿನ ಹಿಂದೆ ರಾಮಗೌಡ, ನಂಜಯ್ಯ, ಸೋಮಯ್ಯ.

ಮಾಫು ಮಾಡ್ದೊ ಸುಂಕನ; ಉಪ್ಪಿಗೆ ಹೊಸೆಪ್ಪುಗೆ
ಇದರ್‌ಂದ ಸೇರ್‍ದ್ದೊ ಸಾವಿರಾರ್ ಜೆನ ಸೈನ್ಯಕೆ,
ಕಲ್ಯಾಣ ಸ್ವಾಮಿನ ದಂಡ್ ಹೊರ್ಪತ್ ಮಂಗ್ಳೂರಿಗೆ
ಚೆಟ್ಟಿ ಕುಡಿಯ, ಕುತರ್ಜ ಕುಡಿಯ ಧಳಪತಿಗ ಇವುಕೆ.

ದಿವಾನ ಲಕ್ಷ್ಮಿನಾರಾಯಣನ ತಮ್ಮಂದ್ ಆಗ ಭಾರಿ ಅರ್ಭಟ
ಸುಳ್ಯದ ಜೆನಗಳಿಗೆ ಕೊಡ್‌ತಿತ್ತ್ ಇಂವ ಕಾಟ,
ಕಲ್ಯಾಣಪ್ಪನ ದಂಡ್ ಮುರ್ತ್ ಇಂವನ ಸೊಂಟ
ಸುಭೇದಾರ ತಿಮ್ಮಪ್ಪಯ್ಯ ಆತ್ ಅಲ್ಲಿಗೆ ಭಂಟ.

ಬೆಳ್ಳಾರೆ ಪುತ್ತೂರ್ ಆತ್ ಇವರ ಕೈವಶ
ಮತ್ತೂ ಹೆಚ್ಚಾತ್ ಇವರ ದಂಡ್‌ನ ರಭಸ,
ಓಡ್ದೋ ನೋಡಿ ಮಂಗ್ಳೂರ್‌ಂದ ಬ್ರಿಟೀಷರ್ ತಲ್ಚೆರಿಗೆ
ಕುಡ್ಲದ ಖಜಾನೆ ಸುಲಬಲಿ ಬಾತ್ ಇವರ ಜೋಬಿಗೆ.

ಗುಡ್ಡೆಮನೆ ಅಪ್ಪಯ್ಯ-ಕೊಡಗ್‌ನ ಗಂಡ್
ಸಾವ್ರ ಸಾವ್ರ ಸೈನಿಕರ್ ಇವನ ದಂಡ್.
ಕತ್ತಿ-ಕೋವಿ ಹಿಡ್ದ್ ಬಿದ್ದೊ ಬ್ರಿಟೀಷರ ಮೇಲೆ
ಕೆಂಪು ಮುಖದವರ ತಲೆ ಎಲ್ಲಾ ನೆಲದ ಮೇಲೆ !

ಬ್ರಿಟೀಷರ್ ತೋರ್ಸಿದೊ ಪುನ ನಾಯಿ ಬುದ್ಧಿ;
ಅನ್ಯಾಯ ಮಾಡುದೇ ಇವರ ದೊಡ್ಡ ನೀತಿ,
ಕೊಡ್ಗರ್ನ-ಗೌಡ್‌ಗಳ್ನ ಬೇರೆ ಬೇರೆ ಮಾಡ್ದೊ
ಪಿರಂಗಿ ತಂದ್-ಇಬ್ಬರಿಗೂ ಗುಂಡ್ ಹೊಡ್ದೊ.

ಗುಡ್ಡೆ ಅಪ್ಪಯ್ಯ ಬಾರಿ ಶೂರತನಲಿ ಹೋರಾಡ್ತ್
ಕಡೆ ಕಡೆಗೆ ಸೋಲಾಗಿ; ಸೆರೆ ಸಿಕ್ಕಿ ಬೀತ್,
ಕಲ್ಯಾಣಪ್ಪ-ರಾಮಗೌಡರ್ದ್ದು ಇದೇ ರೀತಿ ಆತ್
ಸೂರ್ಯ-ಚಂದ್ರ ಇರ್‌ವರೆಗೆ ಇವರ ಹೆಸ್ರ್ ಉಳ್ತ್.

ಅಕ್ಟೋಬರ್ ಮೂವತ್ತೊಂದು ಸಾವಿರದೆಂಟ್ನೂರ ಮೂವತ್ತೇಳ್
ಗುಡ್ಡೆಮಾನೆ ಅಪ್ಪಯ್ಯಂಗೆ ಅಂದ್ ಆತ್ ಗಲ್ಲ್ !
ಸ್ವಾತಂತ್ರ್ಯಕೆ ಹೋರಾಡ್‌ವ ದೀಪನ ಹೊಸ್ಸಿತ್
ಸಣ್ಣವುಕೆ ತೋರ್ಸಿತ್ ಹಿಂಗೆ ದಾರಿ ಬೆಳ್ಕ್.

√

—ಲೇ: ಎಡಕೇರಿ ಜಿ. ವಿಶ್ವನಾಥ್, ಬಲ್ಲಮಾವಟಿ



# ಕಾಲೂರು ಚೆಲುವೆನ ಚೆಲುವು

—ಜ. ಬ. ಚೆಟ್ಟಿಮಾಡ, ಸುಳ್ಯ

## ವಿಮರ್ಶೆ :

ಕನ್ನಡ ಸಾಹಿತ್ಯ ಚರಿತ್ರೆ ಸುಮಾರ್ ಒಂದ್ವರೆ ಸಾವಿರ ವರ್ಸಂದ ಬೆಳ್ಕಂಡ್ ಬಂದುಟು. ಅದರ್ಲಿ ಅಚ್ಚಗನ್ನಡಲೇ ಬರ್ದ ಕಾವ್ಯಗ ಇಲ್ಲೆಂತೇಳ್‌ವ ಕೊರತೆನ ಅಲ್ಲ ಮಾಡ್ದವು ದಿ। ಕೊಳಂಬೆ ಪುಟ್ಟಣ್ಣಗೌಡ್ರು. ಅವರ ಅಚ್ಚಗನ್ನಡದ ಎರ್ಡ್ ಪುಸ್ತಕಗ- "ಕಾಲೂರು ಚೆಲುವೆ ಮತ್ತೆ ನುಡಿವಣಿಗಳು". ಅವು ಸುರೂಲಿ ಬರ್ದದ್ 'ಕಾಲೂರು ಚೆಲುವೆ'ನ. ಅವರ ಬಾಯಿಂದಳೇ 'ಕಾಲೂರು ಚೆಲುವೆ'ನ ರಾಗ ವಿವರಣೆ ಕೇಳ್ದ ಪುಣ್ಯ ನಂದ್. 'ಕಾಲೂರು ಚೆಲುವೆ'ನ ಬಗ್ಗೆ ಏನ್ ಹೇಳಿದ್ರೊ ಅದನ್ನೇ ನಾನಿಲ್ಲಿ ಬರ್ದೊಳೆ.

ಏಳ್ನೂರು ವರ್ಸದ ಹಿಂದೆ (ಕ್ರಿ. ಶ. ೧೨೩೫) ಆಂಡಯ್ಯಂತ ಒಬ್ಬ ಜೈನ ಕವಿ ಇತ್ತ್; ಅಂವ ಅಚ್ಚಗನ್ನಡಲೇ ಬರ್ದನೇಂತ "ಕಬ್ಬಿಗರ ಕಾವ" ಬರ್ತ್. ಆದರೆ ಇದರ್ಲಿ ಅಚ್ಚಗನ್ನಡದೊಟ್ಟಿಗೆ ತದ್ಭವಗ ಸಾ ಇದ್ದೊ. ಅದೇ ತರ ಈ ತಶವಮಾನದ ಸುರುಲಿ ಇದ್ದ ದಿ। ಮುಳಿಯ ತಿಮ್ಮಪ್ಪಯ್ಯನೊವು "ಸೊಬಗಿನ ಬಳ್ಳಿ" ಬರ್ದೊ. ಅದರ್ಲೂ ತದ್ಭವಗ ಒಳೊ. ಆ ಎರ್ಡ್ ಕಾವ್ಯಗಳ ಹೆಸ್‌ರೇ ಸಂಸ್ಕೃತ ಮೂಲಂದ ಹುಟ್ಟಿದ್. ಕಾವ್ಯಗಾರರ ಕಾಮ-ಕಬ್ಬಿಗರ ಕಾವ; ಸೌಭಾಗ್ಯವಲ್ಲೀ–ಸೊಬಗಿನ ಬಳ್ಳಿ ಆಗ್ಯೊಳೊ. ಈ ಎರ್ಡ್‌ರ ಕಥೆಗ ಸಾ ಪುರಾಣಕ್ಕೆ ಸಮ್ಮಂದಪಟ್ಟವು. ಪುರಾಣಲಿ ಬಾವ ಹೆಸ್ರ್‌ಗಳ ಮೂಲ ಸಂಸ್ಕೃತನೇ ಆಗಿದ್ದವೆ. ಹಳ್ಳಿ ಜೆನಗಳ ಬಡ ಬೊದ್‌ಕ್‌ಲಿ ಅಚ್ಚಗನ್ನಡದ ಹೆಸ್ರ್‌ಗ ಎಷ್ಟ್ ಬೇಕರೂ ಸಿಕ್ಕ್‌ವೆ. ಅದಿಕೆ ದಿ। ಕೊಳಂಬೆಯೊವು ಹಳ್ಳಿನ ಮೊದ್ದು ಬಾಳ್‌ನ ಕಾವ್ಯವಸ್ತ್ತಾಗಿ ತಕ್ಕಂಡ್ ಕಾಲೂರ ಚೆಲುವೆನ ಬರ್ದೊ. ಇದ್ ಅಚ್ಚಗನ್ನಡಲೇ ಬರ್ದ ಹಾಡ್‌ಗಬ್ಬ. ಓದಿದ ಪಂಡಿತರ್‌ಗ- ಇದ್ ಅಚ್ಚಗನ್ನಡದ್ದ್‌ಂತಾ ಒಪ್ಪಿಕೊಂಡೊಳೊ. ಕನ್ನಡ ಕವಿ ಚರಿತ್ರೆಲಿ ಶಾಶ್ವತ ಸ್ಥಾನ ಪಡ್ದ ಅಚ್ಚ ಕನ್ನಡ ಕವಿ ದಿ। ಕೊಳಂಬೆಯೊವು ಮಾತ್ರ.

ಕಾಲೂರು ಚೆಲುವೆನ ಕಥಾಸಾರ ಹೀಂಗುಟ್ಟ್; ಹೊಸ ಊರ್‌ಲಿ ಕೊರಗೂಂತ ಒಬ್ಬ ಬೇಸಾಯಗಾರ, ಅವಂಗೆ 'ಕಾಳು'ಂತೇಳಿ ಒಬ್ಬ ಮಂಜ, ಬೆಳ್ಳೀಂತ ಮಗ್ಳ್; ಈ ಬೆಳ್ಳಿನೇ "ಕಾಲೂರ ಚೆಲುವೆ". ನೆಲ್ಲೂರು ಇನ್ನೊಂದೂರು, ಅಲ್ಲಿ ಹೊನ್ನಂತೇಳಿ ಒಬ್ಬ ರೈತ; ಹೊನ್ನಂಗೆ ದೊಡ್ಡಂತೇಳಿ ಗಟ್ಟಿಮುಟ್ಟಾದ ಪೊರ್ಲುನ ಮಂಜ. ಒಂದು ಮೊದುವೆ ಮನೇಲಿ ಅವಿಬ್ರೂರು ನೋಡ್ಕಂಡ್ ಒಬ್ಬಂಗೊಬ್ಬ ಸೋತವೆ. ಆ ಒಲವಿನ ಬೀಜಂದ ಕಾಲೂರ ಚೆಲುವೆ ಕತೆದ್ ಕಲ್ಪವೃಕ್ಷ ಬೆಳ್‌ದುಟು. ದೊಡ್ಡ–ಹುಲಿ ಬೇಟೆಗೆ ಹೋಗಿ ಹುಲಿಯೊಟ್ಟಿಗೆ ಹೋರಾಡಿ ಹುಲಿನ ಕೊಂದ್, ಸತ್ತ್ ಬದ್‌ಕಿದೆ. ಬೆಳ್ಳಿ ಸವುದೆಗೆತ ಕಾಡಿಗೆ ಹೋಗಿ ಬೋಳಂತೇಳ್‌ವ ಒಬ್ಬ ಕಾವಲ್ನವನೊಟ್ಟಿಗೆ ಜಗಳ ಮಾಡ್ಕನ-ಅಂವ ಇವುಳ ಕೈಲಿದ್ದ ಕತ್ತಿನ ಎಳ್ದದೆ. ಬೋಳನ ಕೈಗೆ ಗಾಯ ಆದೆ; ಅಂವ ಪಡೆಯಿಲರ್‌ಗೆ (ಪೋಲಿಸ್) ದೂರು ಕೊಟ್ಟದೆ.

ಬೆಳ್ಳಿ–ದೊಡ್ಡನ ಮೊದುವೆ ನಿಗಂಟ್ (ನಿಶ್ಚಯ) ಆದೆ. ಮೊದುವೆ ದಿನ ಬಾತ್; ದೊಡ್ಡ ಮೊದುಮಂಜ ಆಗಿ ದಿಬ್ಬಣದೊಟ್ಟಿಗೆ ಬಂದದೆ. ಇತ್ತ ಮೊದೊಳಿಗೆ ಬೆಳ್ಳಿಗೆ ಮಲೆ ಜರ! ಮೊದುವೆ ದಿನ ಜರ ಇನ್ನೂ ಜೋರಾವುಟು. ಅಂದೇ ತಕ್ಸೀರ್ ವಿಚಾರಣೆ ಮಾಡಿಕೆ ಪಡೆಯಿಲರ್ ಬಂದವೆ. ಅವು ಸಖತ್ತ್ ಕುಡ್ದಿದ್ದೊ. ವಿಚಾರಣೆ ಮಾಡ್ಕನ ನ್ಯಾಯ ಮಾತಾಡ್ದ ಕಾಳನ ಅವು ಸಮಾ ಬೊಡ್‌ದವೆ. ಮಾತ್‌ನ ಹುಲಿಗಳ್ಹಂಗೆ, ಕೊಳ್ಳಿ ಭೂತಗಳ್ಹಂಗೆ, ಮೊದೊಳಿಗೆ ಬೆಳ್ಳಿನ ಚಪ್ಪರಕ್ಕೆ ಕರ್ಸವೆ. ಜರಂದ ನಡ್ಗುವ ಮೊದೊಳಿಗೆನ-ಅದರ ಅವ್ವ ಹಿಡ್ಕಂಡ್ ಹೊರಗೆ ಬಂದದೆ. ಅವು ಕೇಳ್ಬಕ್ಕೆ ಜರಂದ ಮತಿ ಇಲ್ಲದ ಗೂಡೆ ಪೆದ್‌ಂಬು ಉತ್ತರ ಕೊಟ್ಟದೆ. ಕೋಪಂದ ಕುಡ್ದ ಒಬ್ಬ ಪಡೆಯಿಲ ಗೂಡೆಗೆ ಹೊಡ್ದೀಬುಟ್ಟಿತ್. ಉಸ್ರ್ ಮಾತ್ರ ಆಡ್ತಿದ್ದ ಅದರ ಮೆಯ್ ಮತ್ತೊಂದವ್ನನ ತೊಡೆಗೆ ಬೀಳ್‌ವ್ಹಂಗೆ ಬಿದ್ದ್ ಕಡೆ ಉಸ್ರ್ ಎಳ್ತ್. ಎಲ್ಲೊವೂ ಮರ್ಕೆ ಸುರು ಮಾಡ್ದೊ. ವಿಚಾರಣೆಗೆ ಬಂದೊವು ಉಸಿರ್ಲ್ಲದೆ ವಾಪಾಸ್ ಹೊದವೆ. ಇಪ್ಪೊತ್ತಿಗೆ ದೊಡ್ಡನೂ ಕಾಣೆ! ಬೆಳ್ಳಿನ ಮೊದುವೆ ಚಪ್ಪರಂದ ಸುಡ್ಕುಳಿಗೆ ತಕಂಡ್ಹೋದವೆ! ದೊಡ್ಡ ಆ ಮೇಲೆ ಆರ್ ತಿಂಗ ಕಳ್‌ದ್ ಬಂದದೆ. ಅವಂಗೆ ಬೇರೊಂದ್ ಗೂಡೆನೊಟ್ಟಿಗೆ ಮದ್ವೆ ಆದೆ ಇದ್ ನಮ್ಮೂರ್‌ಲೇ ನಡ್ದ ಜೀವಂತ ಕತೆ! ಕುಟುಂಬದೊವು ಊರ್ನವು ಮರ್ತ ಈ ಕಣ್ಣೀರ್‌ನ ಕತೆನ-ಕವಿ ಗ್ಯಾನಲಿ ಇಸಿಕಂಡ್ ಈ ಕಾವ್ಯನ ಬರ್ದೊ

ಬೇಡಿಕೆ (ಪ್ರಾರ್ಥನೆ): ಶಿವ-ನಾರಾಯಣರ್ ಅವರ ಅವತಾರಲಿ ಯಾವ ಅನ್ವನ ಆಸರೆ ಪಡ್ದಿದೊನೋ ಆ ಅನ್ವ ಬಂದ್ ಹರ್ಸಲೀತ ಕೇಳ್ಕಂಬೊದೇ ಸುರುನ ಹಾಡ್.

"ಕಡಲಲಿಯುನೇಂ ಮಗುವೆ? ಪಾಲ್ಗಡಲ ತೊಟ್ಟಿಲಲಿ
ಬಿಡದೆ ತೂಗಲಿ! ಬೆಟ್ಟಳಿಯು ಬಳಿವ ಕೂಸೆ॥
ತಡೆಯಿರದ ಬಾನ್ಬಯಲೊಳಾಡಲೇಂ? ಮಗಳಲ್ತೆ
ನುಡಿವೆಣ್ಣೆ ಕಯ್ಗೊಳಿಸಿ ಬಾತಾಯೆ ಪರಸೆ"

ಇದರ ಅಭಿಪ್ರಾಯ ಹೀಂಗೆ: ಸಮುದ್ರ ರಾಜನ ಮಗಳ ಕೈ ಹಿಡ್‌ದ ನಾರಾಯಣ ದೇವ್ರು, ಪರ್ವತ ರಾಜನ ಅಳಿಯ ಪಾರ್ವತಿನ ಗಂಡ ಶಿವ, ಜಗನ್ಮಾತೆನ ಮಕ್ಕ. ಅವರ ದೇವ್ರೂಂತ ಮಾಡ್ದ ಸರಸ್ವತಿ ಗ್ರಂಥಗಳ್‌ಲಿ ಹೇಳ್‌ದವೆಲ್ಲ ವಾಗ್ದೇವನ ಮುದ್ರೆಗ ಆದ ಅಕ್ಷರಗಳ್‌ಂವ ಮುದ್ರಿತ ಆಗಿ ರೂಪುಗೊಂಡದ್ದರ್‌ಂದ ಕಥಾ ವ್ಯಕ್ತಿಗ ಎಲ್ಲಾ ನುಡಿ ತಾಯಿನ ನಂಬಿ ಬೆಳ್ದ ನಡೆನುಡಿಗಳ್‌ನ ಬೀದ್ರೋರ್‌ತೇಳಿ, ಕವಿನ ಭಾವಗಳ್‌ನ ಲಾಯ್‌ಕ್‌ಲಿ ದೇವ ಭಾವಗಳ್ನೇ ಒಂದು ಹೊಸ ಹಜ್ಜೆಲಿ ಕೊಂಡ್‌ಹೋದವೆ.

ನುಡಿ ಬಾಸೆ: ಕಾಲೂರ ಚೆಲುವೆದ್ ನುಡಿ ದೇಸಿ; ಸೆರಿಯಾದ ಸಂಸ್ಕೃತ ಪದಗಳ ಸಮ್ಮಂದ ಇಲ್ಲೆ. ಬಳಕೆಂದ ಬುಟ್ಟ್‌ಹೋದ ನೂರಾರ್ ನುಡಿ ಮುತ್ತ್‌ಗ ಇದರ್ಲಿ ಒಳೊ. ಕನ್ನಡ ಚರಿತ್ರೆಕಾರರ್ ಕನ್ನಡ ನುಡಿಲೇ ಬರ್ದ ಒಂದ್ ಸಣ್ಣ ಪುಸ್ತಕನೂ ಇಲ್ಲೇಂತ ಹೇಳ್‌ವ ಕೊರತೆನ ಇದ್ ಹೋಗ್ಸಿಟು. ಕನ್ನಡಕ್ಕೆ ಶಕ್ತಿ ಉಟ್ಟು; ನಾವು ಕಂಡುಂಡ ಪೊರ್ಲ್-ರುಚಿಗಳ ಕನ್ನಡಲೇ ಬರ್ದ್ ತೋರ್‍ಸಕ್ಕ್ಂತ ಇದ್ ತೋರ್‍ಸಿದೆ. ಕನ್ನಡದ ನುಡಿಯೊಡವೆಗಳ್‌ನ ಹೇಂಗೆ ಮೈಗೂಡ್ಸಿ ಬರೆಕ್ಕ್ಂತ ತೋರ್‍ಸುವ ಕೆಲ ಉದಾರಣೆಗ—

ಉಂಡು ಹಸಿದಿಹ ಬೆಳ್ಳಿ ದೊಡ್ಡರಿಬ್ಬರ ಸುಗ್ಗಿ
ಯುಂಡಿಗೆಯೊಳಗಲೆ ಮೊಗ್ಗರಿಸೆ ಮುಗಿಲೊಗ್ಗಿ
ಕಂಡರಸಿದರಳಿಗಳ ತಪ್ಪಾದ ತೆಪ್ಪಗಳ
ಕೊಂಡಲೆವುದೆನೆ ಬಂತು ಮಳೆವೊಳ್ತು ಹಿಗ್ಗಿ
ಕನಲಿಪುದು ಬಿರುವೆಲರ್ ಮರಗಿಡಂ ಬಾನ್ನೆಲಂ
ತೊನೆದಾಡಿ ನಡುಗಿದುದು ಮೊದಲಾಯ್ತು ಮಳೆಗೆ
ಒನಲುತಿರೆ ಕಾರ್ಮೋಡ ಪನಿವರಲ್ ಚೆಲ್ಲಿದುದು
ಹೊನ್ನಾಗಿ ಹೊಲವಾಗಿ ಬೆಚ್ಚಾಯ್ತು ಕೊನೆಗೆ
ಬರವನುಂ ಬಿಸಿಲನುಂ ಬಡಿವಂತೆ ತೋರ್‍ದುದು
ಕೆರೆತೊರೆಗಳತ್ತ ಸಾಲಂ ಮುಗಿದುದೆಲ್ಲಂ
ಮೊರೆವ ಮಳೆ ಪಗಲಿರುಳ್ ಕಲ್ಮಣ್ಣು ಕೆಸರಾಗೆ
ನೆರೆಯಿಂದ ಮುಗಿಯದಿದೆ ಕಡಲತ್ತ ಸಾಲಂ.

ಸುಗಿವ ಮಳೆ ಹಳೆಯುಗೆಯೊಳಡಗಿರ್ಪ ಬೇರ್ಗಳಿಂ
ಚಿಗುರಿಸಿತು ತಾಯ್ನೆಲದ ಹಸುರುಡುಗೆಯೊಡಲಂ.
ಬಗಿದುಡೆಯಃ ಬಿಡಳಡಕೊ ಹುಟ್ಟು ಸಾವುಗಳಿಂದ
ಆಗಳುಂ ಪುರುಡಾಗಿ ನೆಲವೆಣ್ಗೆ ಮೋಹಂ

ಸುರುನ ಮಳೆಂದ ಕೆರೆ, ತೋಡು, ಹಳ್ಳಗಳ ಸಾಲ ತೀರ್‍ಸಿದ್ಹಂಗೆ ಕಂಡರೂ, ನೆರೆ ಬಂದರೂ, ಸಮುದ್ರಂದ ತೆಕಂಡ ಸಾಲ ಮುಗಿಯದ್ಹಂಗೆ ಕಂಡತ್. ಹಗ್ಲ್‌ರಿಳ್ ಹುಟ್ಟು-ಸಾವುಂದ ಸೂತಕ ಆಗಿ ಎಲ್ಲವರ ಅವ್ವ ಆದ ಭೂಮಿತಾಯಿ ಮೀಕಂಡೆ ಇರಿಕಾತ್. ಇವೆಲ್ಲ ಅಚ್ಚಗನ್ನಡಲೇ ಹೇಳ್ದ ಪೊರ್ಲ್‌ನ ನುಡಿಗ.

ಮೊದುವೆಗಾಗಿ ಗೂಡೆಗಳ್ನ ಹೊಂದ್‌ಸ್ ವವರ ಮಾತ್‌ಗ–

ಒಬ್ಬ: ನನ್ನವಳ ತಂಗಿಯೊರ್ವಳ್ ಚೆಲುವೆ ಕಪ್ಪಿನಿಸು
ನನ್ನಿಯಿದು ಪೊನ್ನಿತ್ತು ಪೆಣ್ಣೀವರಹುದು.

ಇನ್ನೊಬ್ಬ: ಇನ್ನೊಬ್ಬನೇಂ ಬರ್ದಿಲದ ಚೆಲ್ವೆಯೊಡವೆಣದು
ಪೊನ್ನೊಡೆಯ ನೊಡೆತನಂ ಬಪ್ಪುದಂ ಪೇಳ್ದಂ.

ಹೊತಾರೆ: ಪಕ್ಕೆಯಿಂದೇಳುತಿರಲುಳ್ಗುತಿಹ ಬಾನ್ನೆಲದ
ರೆಕ್ಕೆ ಮಡಚಿದಲಂಪು ಚೆಂಬಸುರ ಸೊಂಪು
ಹಸುರು ಹೊಲದುಸಿರಾಗಿ ಬೀಸುತಿರೆ ತಂಗಾಳಿ
ಸುಸಿಲು ಮೈವಡೆಯುತಿದೆ ಪೊಸವೊಗರಪೆಂಪು

ಸಳಿಹೊತ್ತ್‌ಲಿ: ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವಗಾಳಿ
ಬೇಕಾದುದಂ ಮೊದಲೆ ಹುಡುಕುತ್ತಿರುವಂತೆ
ಕಂಪಲಂಪುಗಳಿಂಗೆ ಮಿಡಿವುದೆನೆ ಮರಗಿಡವ
ನೂಕುತಲುಗಿಸುತಿರ್ಪುದೆಚ್ಚರಿಸುವಂತೆ

ಬೇಟೆಗೆಂತ ಹೈದಂಗ ಹೊರ್‌ಡಿಕನ:
ಪುಲಿಗಾಗಿ ಕೆಲರೇಳೆ ಕೆಲರಡಗಿಗೆನೆ ನಡೆಯೆ
ಕೆಲರಡಗದಿರಲಾಗದೊತ್ತಂಬದಿಂದಂ
ಕೆಲರು ಪೊಸಕೋವಿನಾಯ್ಗಳಿಗಾಗಿ ಮರವಳಿಗೆ
ಮಲೆ ಜೇನ್ಗೆ ಪೊರಟಿಹರ್ ಬಗೆಯಿಃ ತೊಂದೊಂದಂ

ಅಚ್ಚಗನ್ನಡದ ಈ ಪೊರ್ಲ್‌ನ ಹಾಡ್‌ಗೆಲ್ಲ ವೇದ ತೂಕದ ಮಾತ್‌ಗ.

ಒಂದ್ ಹಂದಿ ಓಡ್ದುದು :

> ಸೊಕ್ಕಿದೆಕ್ಕಲನೊಂದು ಕಲ್ಗುಂಡು ಬಾಳ್ವಡೆದು
> ಬಿಕ್ಕಳಿಸಿ ಗಾಳಿಯಂ ಪಿಡಿದೋಡುವಂತೆ.
> ಮುಕ್ಕುರಿಪ ನಾಯ್ಗಳಂ ಕೆಕ್ಕರಿಸಿ ಘುರುಗುಟ್ಟೆ
> ಸಿಕ್ಕದೋಡಿತು ಕಾಡೆ ಕೆಳದೋಡಿದಂತೆ,

ಹಿಡಿದ ಕೋವಿಯು ನಿಲಿಸಿ ಕಣ್ಬಗೆಗಳಂ ಮುಂಚೆ
ಸಿಡಿದೊಡಲ ಕರಿಮಿಂಚು ಗುಡುಗುತಿರುವಂತೆ.
ಅಡಗಿತುವ ಬಾಳ್ದಲೆಯು ಸವಿನಾಲಗೆಯು ತುಳಿದು
ಅಡಗು ತುಂಬಿದ ಪೊರೆಯು ಕೊಂಡೋಡಿತಂತೆ.

ಮೇಲೆನ ಮಾತ್‌ಗ ಆ ಚಿತ್ರಗಳ್ನ ಕಣ್ಣೆದ್‌ರ್‌ಲಿ ಕಟ್ಟುವ್ಹಂಗೆ ತಂದ್ ನಿಲ್ಸಿದೆ.

ರಸ (ಇರ್ಪು) ಕಾವ್ಯಲಿ ರಸಕ್ಕೆ ಮೊದಲ ಸ್ಥಾನ. ಕಬ್ಬ್‌ಲಿ ಸೀ ರಸ ಇದ್ಹಂಗೆ ಕಾವ್ಯಲಿ ರಸನೇ ಗುರಿಂತೇಳ್ರೆ ತೊಪ್ಪಾಕಿಲ್ಲೆ. ಕಾಲೂರ ಚೆಲುವೆಲಿ ಶೃಂಗಾರ ರಸ ಹೇಂಗೆ ಬಂದ್‌ಟೂಂತ ನೋಡೊನೊ.

ಹೊಸೂರ್‌ಲಿ ನಡೆವ ಒಂದು ಮೊದುವೆಗೆ ಬೆಳ್ಳಿ ಬಂದಿದ್ದಡೆ. ಅಲ್ಲಿಗೆ ದೊಡ್ಡನೂ ಮತ್ತೆ ಬೇರೆ ಸುಮಾರ್ ಹೈದಂಗ ಸಾ ಬಂದಿದ್ರೊ. ಬೆಳ್ಳಿನ ನೋಡ್ದ ಕೆಲೊವ್ ಹೈದಂಗಳ ಮನ್ಸ್‌ನ ಚಿತ್ರಣ ನೋಡಿ–

> ಮದುವೆಯಾಗಿಹ ಕೆಲರು ಕೈಹೊಸೆದು ನೋಡಿದರು
> ಮದುವೆ ನಿರದಿಹ ಕೆಲರು ತಲೆಯ ಸವರಿದರು
> ಒದಗದಿರೆ ತಮಗೆ ಬೇಕಾದ ಪೆಣ್ ಕೆಲಕೆಲರು
> ಪದಪಿನಿಂ ನೋಡಿ ತನ್ಮನುವ ಮೆಚ್ಚಿದರು

ಕೆಲೊವ್ ಆತುರಂದ ತಮಗೆ ಒಪ್ಪದ ಗೂಡೆಗಳ್ನ ಲಾಯಿಕ್‌ಲಿ ವಿಚಾರ್ಸದೆ ಮದ್ವೆ ಆಗಿ ಸೋತ್‌ಕಂಡೊಂತ ಕೈ ಗಿಮಿಚಿಕಂಡೊ. ಕೆಲವುಕೆ ಮದ್ವೆಗೆ ಗೂಡೆಗಳ ನಿಗಂಟ್ ಆಗಿತ್. ಮೊದುವೆ ಇನ್ನೂ ಆಗಿತ್‌ಲೆ ಅಂತೊವು ಅವರ ಯೋಚನೆನ ಬದ್‌ಲ್ಸಿರೇನ್‌ಂತ ತಲೆ ಪೂಜಿಕಂಡೊ. ಇನ್ನ್ ಕೆಲವು ಕಣ್ಣಿಗೆ ಎಣ್ಣೆ ಹಾಕಿ ಹುಡ್ಕಿರೂ ಸರ್‍ಯಾದ ಗೂಡೆಗ ಕಣ್ಣಿಗೆ ಬೀತ್‌ಲಾಗಿತ್. ಅಂತೊವು ಬೆಳ್ಳಿನ ನೋಡಿ ಅವಳ ಪೊರ್ಲುಗೆ ಸೋತ್ ಮೊದುವೆ ಆಗದಕ್ಕೆ ತಮ್ಮ ಭಾಗ್ಯನ ಮೆಚ್ಚಿಕಂಡೊ.

ಹಂಞ ದಿನ ಕಳ್ದಮೇಲೆ ದೊಡ್ಡನ ಅಯ್ಯೆ-ಅಪ್ಪ ಗೂಡೆನ ನೋಡಿಕೆಂತ ದೊಡ್ಡನ ಹೊಸೂರಿಗೆ ಕಳ್ಸದೊ. ದೊಡ್ಡ ಹೋತು ಅಂವ ಹೋದೇನ್? ಅಂವ ಹೋಕೆ ಮುಂದೆನೇ ಅವನ ಮನ್ಸ್‌ನ ಕಳ್ಸಿತ್. ಬೆಳ್ಳಿ ಗದ್ದೆ ಪುಣೆಲಿ ನಿತ್ ಹಂಗೋ ದೊಡ್ಡನ ನೋಡಿಬುಟ್ಟತ್. ನಾಚಿಕೆಂದ ಅದ್‌ನ ಸೆರ್‌ಗ್ ತುದಿನ ಕಚ್ಚಿ, ಯದೆ ಮೇಲೆಂದ ಜಡೆನ ತೆಗ್ದ್ ಹಿಂದೆ ಹಾಕಿ ಎಲ್ಲೋ ಅಡ್‌ಂಗಿತ್.

ಹಳ್ಳಿ ಗೂಡೆಗಳ ವಯ್ಯಾರನ ಈ ಹಾಡ್ ಎಷ್ಟೊಂದು ಲಾಯಿಕ್‌ಲಿ ತಿಳ್ಸದಲಾ ? !

ಬೆಳ್ಳಿನ ನೋಡಿಕೆ ಬಂದ ದೊಡ್ಡಂಗೆ ಅದರ ಅಯ್ಯೆಪ್ಪ ಸಮ್ಮಾನ ಮಾಡುವೆ. ಆಗ ಬೆಳ್ಳಿ ಕೋಂಬರೆಂದ ಕೊತ್ತಿ ಬೆಣ್ಣೆನ ನೋಡುವಂಗೆ ದೊಡ್ಡನ ನೋಡ್ದೆ. ದೊಡ್ಡ ಈ ಗುಟ್ಟುನ ತಿಳ್ಕಂಡ್ ಅಡ್‌ಂಗಿದ ಕೋಳಿಪಿಳ್ಳೆನ ಹದ್ದ್‌ನ್ಹಂಗೆ ನೋಡಿತ್ ಮಾರ್ನೇ ದಿನ ಬೆಳ್ಳಿ ಎಲ್ಲವುಕ್ಕಿಂತ ಮುಂದೆ ಎದ್ದ್ ಯಾರಿಗೂ ಗೊತ್ತಾಗದ್ಹಂಗೆ ಬಾವಿಂದ ನೀರ್ ತಾಕೆ ಹೊರ್ಟತ್. ದೊಡ್ಡ ಅದ್ಕಿಂತ ಮುಂದನೇ ಎದ್ದ್ ಕುದ್ದ್‌ಕಂಡ್ ಬೆಳ್ಳಿನ ನೋಡಿಬುಟ್ಟತ್; ಅವಂಗೆ ನೆಗೆ ಬಾತ್.

> ಹುಡುಕುತಿಹ ಕಳ್ಳತಾಂ ಕಣ್ತಪ್ಪಿಸುತಲಿರಲ್
> ಪಿಡಿದ ಕಟ್ಟಾಳಂತೆ ದೊಡ್ಡ ನಗೆ ಬೀರ್ದಂ.

ಕಣಜಂದ ಕದ್ದ್ ಕಾಳ್ ತಿಂಬಕೆ ಬಂದ ಗಿಣಿ ಬಲೆಗೆ ಬಿದ್ದಂಗ್ಹಾತ್. ಇಬ್ರೋರು ನೋಡಿಕಂಡ್ ಮೆಚ್ಚಿಕಂಡವೆ. ಊರಿಗೆ ಬಂದ ದೊಡ್ಡ. ಅಯ್ಯೆಪ್ಪನೊಟ್ಟಿಗೆ–ನಂಗೆ ಗೂಡೆ ಆದುಂತ ಹೇಳ್ತ್. ಅಂತೂ ಒಂದು ಜೋಡು ಸಮ್ಮಕೆ ಮುಂದೆ ಮೊದುವೆ ನಿಗಂಟ್ ಆತ್.




"ನೀರಿಲ್ಲೇತಾ ಯಾಕೆನೆ ಬಡ್ಕಂಡಿಯಾ...
ಧನಿಗಳ ಮನೆ ಟೀವಿಲಿ ಮಳೆ ಸುರ್ದ್‌ದೆಗಡ
ಹೋಗಿ ಅಲ್ಲಿಂದ ತಗಂಡ್ ಬಾ "

ಕಾಲೂರ ಚೆಲುವೆಲಿ ಬಂದ ವೀರರಸ ಸನ್ನಿವೇಶಗಳ
ನೋಡೊನೊ-ಸಳಿಗಾಲಲಿ ಮೊದುವೆ ಆಕೆ ಸೇರಿ ಮುಹೂ
ರ್ತ ಸಿಕ್ಕದೆ ಸುಗ್ಗಿಲಿ ಮೊದುವೆ ಮಾಡ್ದುಂತ ಆತ್.
ಸಳಿಗಾಲಲಿ ಮರಗಿಡಗ ಹನಿ ಉದುರ್ಸ್ಸದರ ನೋಡ್ರೆ
ಮೊದುವೆ ಮುಂದೆ ಹೋತೂಂತ ಮರ್ಗ್ಯವಂಗೆ ಕಾಂಬೊ
ತ್ತಿತ್ತ್. ಹಿಂಗಿಕ್ಕನ ನೆಲ್ಲೂರ್‌ಲಿ ಹುಲಿ ಕಾಟ ಸುರು
ಆತ್. ದೊಡ್ಡ ಪಾರ ಕುದ್ದ್ ಒಂದ್ ಹುಲಿನ ಕೊಂದ
ರೂ ಇನ್ನೊಂದ್ದುಲಿ ಊರಿಗೆ ಬಾಳ ಕಿರುಕುಳ ಕೊಡ್ತಿತ್.
ಹಂಗಾಗಿ ಹೈದಂಗೆಲ್ಲ ಸೇರಿ ಬೇಟೆಗೆ ಹೊರ್‍ಟ್ವೊ. ಕಡ್ವೆ-ಜಂ
ಕೆಗ ತೊಪ್ಪಿಸ್ಕಂಡೊ; ಕಡೆಗೂ ಹುಲಿ ಕಾಂಬಕೆ ಸಿಕ್ತ್.
ದೊಡ್ಡ ಹೆದ್ರದೆ ಹಕ್ಕಲೆಂದಲೇ ಗುಂಡ್ ಹೊಡ್ತ್. ಹುಲಿ
ಸತ್ತತ್ಲೆ; ಗಾಯ ಆಗಿತ್ತ್. ದೊಡ್ಡಂಗೆ ತೊಪ್ಪಿಸಿಕೆ
ದಾರಿ ಇಲ್ಲದ್ದಂಗಾತ್ ಹುಲಿ ಮೇಲೆ ಹಾರ್‍ತ್.

ಇಂಬಿಲ್ಲ ಮರವೇರೆ ದೊಡ್ಡನೇಂ ಮಾಡುವಂ
ತುಂಬಿಲ್ಲ ಕೋವಿಯುಂ ಕುರುವಾಳ ಸೆಳೆದಂ
ಹಂಬಲದಿ ಬಾಳ್ವೆಯೇ ನೆಂಟಿರ್ದೆಹುಂಗುಟ್ಟಿ
ತುಂಬಿದಳವಿಂ ಕನಲಿ ಹುಲಿ ಬಾಯ ತಿವಿದಂ

ನೆತ್ತರೊಡೆದುದು ಹುಲಿಯ ಕೂರುಗುರ್ಕೀರಿದುವು
ಮತ್ತೊಮ್ಮೆ ತಿವಿದನವನೆದೆಗೊಟ್ಟ ಹುಲಿಯುಂ.
ಅತ್ತಿತ್ತ ತರಿಯಿರಿತ ಕೂರುಗುರ್ಗಳ ಕೊರೆತ
ಮುತ್ತಿದುವು ನಾಯ್ಗಳುಂ ಕಚ್ಚಿದುವು ಪುಲಿಯುಂ.

ಅಬ್ಬರಿಸಿ ಕಾಳಗದ ನಾಯ್ಗಳಂ ತೂಳ್ದುತ
ನ್ನಬ್ಬಟೆಗೆ ನೆಲನಡುಗೆ ಹೆಬ್ಬಲ್ಲ ತೆರೆದು
ಹೆಬ್ಬುಲಿಯು ಹಿನ್ನೆಗೆದು ದೊಡ್ಡನಂ ಕಾಯ್ಪಿನಿಂ
ತಬ್ಬಿತಿವಿದಂ ಕಾಣ್ಕೆಯಿಂದವಂ ಮೊರೆದು

ಪರಚಿ ಪುಲಿಕಚ್ಚಿದುದು ಕೂರುಗುರ್ಪಲ್ಗಳಿಂ
ಮೊರೆದು ದೊಡ್ಡಂ ತಿವಿದು ಮರೆದುತನ್ನಿರವಂ
ಅರರೆ! ಗುಂಡಾದ ಹುಲಿ ಬನ್ನಿ ಬನ್ನಿ ಮೆನುತ್ತೆ
ಕರೆದ ಕೆಚ್ಚೆದೆಯುವರ ತನ್ನವರ ನೆರವಂ

ಉಬ್ಬಿನಿಂ ದುಗುರ್ಗಳ್ಗೆ ಮೈಗೊಟ್ಟು ತಿವಿತಿವಿಯೆ
ಬೊಬ್ಬೆಯಿಂದಾರ್ದುಪುಲಿ ಬಿದ್ದುದಾಕಡೆಗೆ
ಮಬ್ಬಿನಿಂ ದೇರಾಟದೊಳ್ಕುಣಿದು ಕೆನ್ನೆತ್ತ
ರಬ್ಬಿಯೊಳ್ ದೊಡ್ಡನುಂ ಬಿದ್ದನೀಕಡೆಗೆ

ಈ ಹುಲಿ ಬೇಟೆ-ವೀರ ರೌದ್ರರಸಗಳ ಹೊಳೆನೇ
ಹರ್‌ಸಿಬುಟ್ಟುಟು. ಇಲ್ಲಿ ದೊಡ್ಡನ ಹೆಸ್‌ರ್‌ನ್ನಂಗೆ ಅವನ
ಶೌರ್ಯ ಧೈರ್ಯನೂ ದೊಡ್ಡದ್‌ಂತ ಗೊತ್ತಾದ. ಹುಲಿ
ಬೇಟೆ-ದೊಡ್ಡನ ಎಂಟೆದೆನ ಬಿಚ್ಚಿ ತೋರ್‍ಸಿದೆ. ಹುಲಿನ
ಕೊಲ್ಲ್‌ಕನ ಅದ್ ಅವಂಗೆ ಪರ್‌ಚಿದೆ. ಹೀಂಗೆ ಹಣೆ
ಲೊಂದು ದೊಡ್ಡ ಗಾಯ ಆಗಿ ಮೈಮೇಲೆಲ್ಲಾ ಹೂವು
ನ ಎಸ್ಳ್‌ನ್ನಂಗೆ ಗಾಯ ಆಗಿ ದೊಡ್ಡ ಯುಚ್ಚರ ತೊಪ್ಪಿ
ಬಿದ್ದದೆ. ಅವನ ಕಡೆವೆಲ್ಲಾ ಬಂದ್ ನೋಡಿ ಅಂವ ಸತ್ತೇ
ಹೊತೂಂತ ಗ್ರೈಸಿವೆ. ಆದರೆ ಅಂವ ಬೊದ್ಕಿತ್ತ್; ಹುಲಿ
ಮಾತ್ರ ಸತ್ತ್ ಬಿದ್ದಿತ್ತ್. ಕಾಡ್ ಬೊಳ್ಳಿಗಳ ಪಡಿಲಿ
ಕೆಲೊವು, ದೊಡ್ಡನ ಹೊತ್ತ್‌ಕಂಡ್ ಬಂದವೆ. ಇನ್ನೊಳ್ದ
ವು ಹುಲಿನ ಕೈ ಕಾಲ್ ಕಟ್ಟಿ, ಗಟ್ಟಿ ಬೊಡಿಗೆಗೆ ಸಿಕ್ಕಿಸಿ
ಹುಲಿನ ಹೊತ್ತ್ ತಂದವೆ.

ಪೊತ್ತವರ್ ಪುಲಿಯತಲೆಯೆತ್ತೆಲ್ಲಿ ಪಿಡಿದೆ, ಮೊರೆ
ಕತ್ತು ಮುರಿಯುವುದೆಂಬ ಪುರುಳ ಪುಲಿಯರಿದು
ಎತ್ತು ಮೊರೆ, ಕತ್ತುಮುರಿವಣಕವುಂ ತಾಳದೆನೆ
ಸತ್ತು ತಪ್ಪೊಪ್ಪದೆನೆ ತಲೆಯಾಡುತಿಹುದು.

ಹುಲಿನ ಹೊತ್ತ್ ತಾಕನ ಆದರ ತಲೆ ಅತ್ತ-ಇತ್ತ
ಅಲ್ಲಾಡ್‌ತ್ತಿತ್ತ್. ಹುಲಿನ ಹೊತ್ತೊವು ಬಾರಿಂದ ಒಬ್ಬ
ಮತ್ತೊಬ್ಬನ ಹಕ್ಕಲೆ "ತಲೆಯೆತ್ತು; ಎಲ್ಲಿ ಹಿಡಿದೆ-
ಮೊರೆ, ಕತ್ತು ಮುರಿವುದು"ಂತ ಹೇಳ್ಕನ ಅವು ಹೇಳ್ದರ
ಅರ್ಥ ಮಾಡ್ಕಂಡ ಹುಲಿ ನನ್ನನ ಹಂಗುಸುವೇಂತ ತಿಳ್ದ
"ಹಂಗ್‌ಸ್ ಬೊಡಿ; ನಾ ಕೇಳಿಕೆಲ್ಲೆ, ತೊಪ್ಪು ಒಪ್ಪಿಕೆಲ್ಲೆ"ಂತ
ಹೇಳ್‌ವಂಗೆ ತಲೆ ಆಡ್ಸಿತ್ತ್‌ಂತ ಹೇಳ್‌ವ ಕವಿನ ಮಾ
ತ್‌ಗ ನೆಗೆ ತರ್‌ಸಿದೆ. ಕಾಲೂರ ಚೆಲುವೆಲಿ ಶೃಂಗಾರ
ರಸಕ್ಕಿಂತ ಹೆಚ್ಚ್ ಕರುಣಾರಸ; ಇದ್ ಉಳ್ದ ರಸಗಳ
ಕರ್‍ಗಿಸಿಕಂಡ್ ಆಳಲಿನ ಕಡಲ್‌ನ ಸೇರ್‍ದ್.

"ದೊಡ್ಡಿಯೊಳ್ ಸೊಡರಾಗಿ ಮನೆಯವರ ತಾಯಾಗಿ"
ಇದ್ದ ಮನೆ ಹಸ್‌ನ ಹುಲಿ ತಿನ್ತ್‌ಂತತಿಳ್ದ "ನಿನ್ನ ಕರುವಂ
ದಣಿಸಿ ನಮಗೆಲ್ಲ ಹಾಲುಣಿಸಿ ಚೆನ್ನನೀಂ ಪೋದೆಯೇಂ?
ಪುರುಳಿನೊಂದೊರತೆ ನಿನ್ನ ಕಾಲ್ತುಳಿತದಿಂ ಹಟ್ಟಿ ಮನೆ
ತುಂಬಿತ್ತು ಇನ್ನೇನೊ?

ಪೋದೆಯೇಂ ಕರುವನೇಂ ಮರೆತೆ?'ಂತಾ ದೊಡ್ಡ
ಗೋಳಾಡಿಕನ ಕರುಣಾರಸದ ಚಿಲುಮೆನೇ ಚಿಮ್ಮಿ
ದ್ದಂಗಾದೆ.

ಕೊನೆ ಭಾಗಲಿ ಲಂಚ ತಿಂದ ಪಡೆಯಿಲರ್‌ಗ ಬೋ
ಳನ ಸುಳ್ಳ್ ಹೇಳಿಕೆನ ಕೇಳಿ, ಮೊದುವೆ ಮನೆಗೆ ಬಂದ್
ಕೊರಗನ ಸಿಡ್ಲ್‌ನ್ನಂಗೆ ಹೆದ್ರಿಸಿ, ಕಾಳನ ಬೆನ್ನ್ ಮುರಿ
ವ್ವಂಗೆ ಗುದ್ದಿ, ಕರಂಪ ದಾತಿಲ್ಲದ ಬೆಳ್ಳನ ಅವರ ಹತ್ರ

ಕರ್ಸಿ ದೆವ್ವ ಹಿಡ್ದವರ್ಥಂಗೆ ಅವಳ ಗದ್‌ರಿಸಿ ಬಲಾಗಿ ಬೊಡ್ದ್, ತಬ್ಬಿಕಂಡಿದ್ದ ಅವ್ವನ ಕೈ ತೊಪ್ಪಿ ಗಿಡಂದ ಹೂ ಬೀಳ್ವ್ಥಂಗೆ ಬೀಳ್ಸಿದ ಆ ಚಿತ್ರ ಕಲ್ಲ್‌ನ ಕರ್ಗ್‌ಸ್‌ವಂತದ್.

ತಡೆಯಬೇಕೆಂಬ ತಾಯಿಯ ಬಯಕೆ ಪಾಲುಂಡು
ಕೆಡೆಯೆ ಗಿಡದಿಂ ಬೆಳ್ಳಿ ಹೂ ಬೀಳುವಂತೆ
ಪಡೆದೊಬ್ಬ ತಾಯಿಯಿಂ ಸಿಡಿದು ಮತ್ತೊಬ್ಬಳಂ
ಪಿಡಿದು ಬಾಳ್ ಪೊರೆಕಯ್ಯ ಮಾರ್ಪಡಿಸುವಂತೆ

ಬೆಳ್ಳಿ ಕಡೆ ಉಸ್‌ರೆಳ್‌ದ್ ಬಾಳ್ಮ್ಗಿಸ್ಕನ:-

ಇನ್ನುಲಿಗಳಂದೆಮ್ಮ ಮನೆಯ ತುಂಬಿದೆ ಮಗಳೆ
ನಿನ್ನ ಕರೆವೀ ಬಾಯ್ಗೆ ಮಣ್ಣಾಯ್ತೆ ಮಗಳೆ
ಪೊನ್ನೊಡವೆಯುಡೆಗಳಿಂ ಬೆಳಗುವೊಡಲಿಂ ಬರ್ಪ
ನಿನ್ನ ನೋಡುವ ನೋಟ ಕಳಿವಾಯ್ತೆ ಮಗಳೆ

ಹೆಗಲಿನೊಳ್ ಹೊತ್ತು ಸಾಕಿದೆನೊಲ್ಮೆಯಿಂದೆನ್ನ
ಮಗಳೆ ನಿನ್ನಂ ಕಾಡಿಗೆಸೆವೆನೆಂದಂ ಅಂತ ಹೇಳ್ಕಂಡ್ ಮರ್ಗ್ದಕನ.-

ನಗುತ ಕೈಪಿಡಿದವನ ನೆರಳಾಗಿ ಬಪ್ಪುದಂ
ಮೊಗೆದು ನೋಡುವ ಬಯಕೆ ಕನಸಾದುದೇನು ?

ಹಿಂಗೆ ಹಂಬಲಿಸ್ಕನ ಕಾಳು ಹಂಗೆ ಮೇಲೆನ ಪ್ರೀತಿಂದ:-

ಇಂದುವರೆಗಂ ತಂಗಿಯೆಂದು ಕರೆದಿಹ ಬಾಯ್ಗೆ
ಮುಂದೆ ಮಣ್ಣಾಯ್ತೆ ಹಾ ತಂಗಿಯೆಳೆಂದಂ

ಹಂಗೆ—

ಬೆಂಗೊಂಡು ಬಾಳ್ವೆಯೊಳ್ ಹೊರಲಾರದಿಹ ಹೊರೆಗೆ
ತಂಗಿ ತಲೆಗೊಟ್ಟ ನೀ ನೆರವಿತ್ತೆಯೆನಗೆ
ಹಂಗಿರದೆ ಹೊಲದ ಗೈಮೆಯ ಮುಗಿಸಿ ಬಾಳದೆವು
ಕಂಗೆಡಿಸಿ ಪೋದೆಯೇಂ ಕಲ್ಲಿಟ್ಟು ತಲೆಗೆ

ಹಿಂಗೆ-ತಂಗೆನ ನೆಂದ್ ಹೇಳ್‌ವಲ್ಲಿ ತದೆ.ಕ ಭಾವ ನೆಂದ ತಲ್ಲೀನ ಆದ ಕವಿಗಳ ಕಣ್ಣೀರ್ ಕಾವ್ಯವಾಗಿ ಹರ್ದ್‌ಟೊಂತ ಹೇಳ್‌ವ್ಥಂಗೆ ರಸಭರಿತಾಗಿ ಉಟ್ಟ್. ಬೆಳ್ಳಿನ ಕೊನೆಗಾಲದ ನೋಟ, ದುಃಖಿಸುದು, ಸುಡ್‌ದು-ಇದೆಲ್ಲಾ ಓದ್‌ಕನ ಕಣ್ಣೀರೇ ಬಂದದೆ!

ಮೆಲ್ಲಂಗೆ ಕಾಲೂರು ಎಲ್ಲವರ್‌ನ ಮರ್ಗ್ತತ್. ಆದರೆ ಬೆಳ್ಳಿ ಮರೆ ಆತ್‌ಲ್ಲೆ ಅದ್ ಪ್ರಕೃತಿಯ ಪೊರ್ಲುಲಿ ಸೇರಿ ಕಂಡದೆ. ಅದರ ಪೊರ್ಲುನ ನಾವು ಇಲ್ಲಿ ಕಂಡನೆ.

ಹೂಗಳಿಂ ನಗೆಯೆರೆವೆ ತೊರೆಗಳಿಂ ನುಡಿಯೊರೆವೆ
ಕೂಗೆ ಗಿಳಿನಾಲಗೆಯೊಳೊಲವ ನೀನುಲಿವೆ
ತೂಗಿ ಹಗಲಿರುಳುಗಳ ಬೆಸೆದ ಚೆಲ್ವಿನೊಳಾಡಿ
ಬಾಗಿ ಬರೆಹದೊಳುಳಿವೆ ಕಾಲೂರ ಚೆಲುವೆ

ಒಡಲ ಪುರುಳಂ ಬಿಡದೆ ತೊಡವಡಿಗಳಂ ಬೆಳಗಿ
ಪಿಡಿದ ಬಾಳ್ದಲೆ ಗೆರೆಯ ಪೂಗರುಳಿಸಿ ಚೆಲುವೆ
ಕಡೆದ ಬರೆಗಡಲಿತ್ತ ಸವಿದಿರ್ಪನೊಸೆದೆರೆದು
ಕಡೆ ಸಾಲ ಮುಗಿಸಿದಳ್ ಕಾಲೂರ ಚೆಲುವೆ

ಹೀಂಗೆ ಕಣ್ಣೀರ ಸಮುದ್ರಲಿ ಒದುವೊಂದರ ಮನ್‌ಸ್‌ನ ಮುಳ್ಗಿಸಿ ಕಾಲೂರ ಚೆಲುವೆ ಕಾವ್ಯ ಮುಗ್ದದೆ.

"ಕಡೆ ಸಾಲ ಮುಗಿಸಿದಳ್ ಕಾಲೂರ ಚೆಲುವೆ" ಈ ನುಡಿಗೆ ತುಂಬ ಅರ್ಥ ಉಟ್ಟ್.

೧. ತನ್ನ ಜೀವರೇಖೆನಾ ಕಾಂತಿನ ಉಳ್‌ಸಿ ಕಡೆ ಸಾಲ ತೀರ್‌ಸುವ್ಥಂಗೆ ಕಾಲೂರ ಚೆಲುವೆ ತೀರ್‌ತ್. ಕಾಲೂರ ಚೆಲುವೆ ಕಾವ್ಯದ ಕಡೇ ಸಾಲ್ (ಅಂತಿಮ ಪಾದ) ಸಾ ಮುಗ್ಸಿ ಆತ್.

೨. ಇದನ್ನ ಬರ್ದ್-ಕವಿನ ಮೇಲೆ ಕನ್ನಡ ನುಡಿನ ಮಾತಾಡಿಕೆ, ಬರಿಯಕೆ ಕಲ್‌ತಂದ್‌ಂದ ಇದ್ದ ಆ ಋಣ ಈ ಮೂಲಕ ಮುಗ್ಸ್‌ಂತೇಳ್ದ್ ಆದೆ.

೩. ಕಡೆ ಸಾಲ ಎಂಬ ಶಬ್ದ ರಂಗೋಲಿಂತೇಳ್ವ ಅರ್ಥನ ಕೊಟ್ಟದೆ. ಈ ಕಾವ್ಯದ ಪ್ರತಿ ಪದ್ಯದ ಸಾಲ್‌ಗ ರಂಗೋಲಿನ ಗೆರೆನಂಗಿದ್ದ್- ಈ ಸಾಲ್ ಅದರ ಕಡೇ ಗೆರೆ ಎಂಬ ಅರ್ಥನೂ ಕೊಟ್ಟದೆ.

ಈ ಕಾವ್ಯಲಿ ಕೆಲೋವು ಗಾದೆ ಮತ್ತೆ ಒಳ್‌ನುಡಿಗ-

"ಸರಿಯೆ ಹುಡುಕಿದ ಮಚ್ಚು ಹೆಗಲಿನೊಳಗಿತ್ತು"

"ಹೊತ್ತಿನುಲಿಯಾಗದೊಡೆ ಆಟ ಮೊದಲಾಗುವುದೆ?"

"ಮುಕ್ಕಣ್ಣನೊಲಿದೊಡನೆ ನಂಜುಪಾಲ್ ಮಾರ್ಪಾಗಿಸಿಕ್ಕುಗುಂ"

"ತೊಡೆಯಲಪ್ಪುದೆ ನೊಸಲ ಬರೆಹಗಳ ಕುಂದಂ"

ಇವೆಲ್ಲ ಕಂದದ-ಕುಂದದ ನುಡಿಮುತ್ತುಗ.

ಹೆಸ್‌ರ್‌ಗಳ ಮಹತ್ವ :- ಈ ಕಾವ್ಯಲಿ ಬಂದ ಹೆಸ್‌ರ್‌ಗ ಹಳ್ಳಿ ಜೀವನದ ಅರ್ಥಯುಕ್ತ ನುಡಿಗ-

ಕೊರಗು : ಇಂವ ಬೆಳ್ಳಿನ ಅಪ್ಪ. ಅವನ ಬದ್‌ಕ್‌ಲಿ ಸಂತೋಸಕ್ಕಿಂತ ದುಃಖನೇ ಜಾಸ್ತಿ. ಕೊರಗ್ - ಅವಂಗೊಬ್ಬಂಗೇ ಮಾತ್ರ ಅಲ್ಲ-ಹಳ್ಳಿನ ಎಲ್ಲಾ ಬಡ ಬೇಸಾಯಗಾರರ್ ಕಡೆ ಇಲ್ಲದ ಕೊರಗ್‌ಂದ ಕರ್‌ಗ್ಗಿವೆ. ಅವರ ಪ್ರತಿನಿಧಿ ಈ ಕೊರಗು.

ಮಸೆ : ಬೆಳ್ಳಿನ ಅವ್ವ, ಹಳ್ಳಿ ಜೆನಗಳ ಜೀವನ ಯಾಗೊಳು ಸಾವು, ಕಷ್ಟ, ನಷ್ಟ, ಅನ್ಯಾಯ-ಇವುಗಳೊಟ್ಟಿಗೆ ತಿಕ್ಕ್‌ತ್ತಿದ್ದದೆ ಅದರ ತಿರ್‌ಳನಂಗೆ ಇರ್‌ವ ಹೆಸ್‌ರೇ-ಮಸೆ.

ಬೆಳ್ಳಿ-ಹೊನ್ನ : ಇವು ಹಳ್ಳಿಯೊವರ ಧನ ಸಂಪತ್ತ್‌ನ ಸೂಚಿಸಿದೆ. ಬೆಳ್ಳಿಂತೇಳ್ವ ಹೆಸ್ರ್ ಶುಕ್ರ ನಕ್ಷತ್ರಕ್ಕೂ ಉಟ್ಟು. ಈ ಕಾಲೂರು ಚೆಲುವೆನ ಬೆಳ್ಳಿ ಆ ಬೆಳ್ಳಿನ್ಹಂಗೆ ಹೊಳ್ದದೆ ಮತ್ತೆ ಶಾಶ್ವತ ಸಾ.

ದೊಡ್ಡ : ಹಳ್ಳಿ ಜೆನಗಳ ಹೃದಯ-ವೈಶಾಲ್ಯ-ಘನತೆನ ಈ ನುಡಿ ಪಡಿ ಮೂಡ್ಸಿದೆ

ಕಾಳು : ಧಾನ್ಯ ಸಂಪತ್ತ್‌ನ ಸೂಚಿಸುವ ಶಬ್‌ದ ಇದ್.

ಬೋಳೆ : ಯಮುಂಗೆ ಇದ್ ಸಾ ಒಂದ್ ಹೆಸ್ರ್. ಇದರ ಸಾಂಕೇತಿಕ ಅರ್ಥ ಹೀಂಗಿರೋಕು-ಹಳ್ಳಿ ಜೆನಗಳಿಗೆ ಕಾಡ್‌ಂದಳೇ ಸಾವು ಜಾಸ್ತಿಂತ ಆಗಿರೋಕು ದಕ್ಷಿಣ ಕನ್ನಡ ಜಿಲ್ಲೆಲಿ ಇಂತ ಹೆಸ್‌ರ್‌ಗ ಸಾಮಾನ್ಯಂತ ನಾವು ಗಮನಿಸಕ್.

'ಕನ್ನಡಲಿ ಏನುಟ್ಟು?' : ಕನ್ನಡಲೇ ಬರೆಯಕ್ಕಾಂತ? ಕೇಳ್ವ ಪ್ರಶ್ನೆಗೆ ಕಾಲೂರು ಚೆಲುವೆನ ಬರ್ದ ಕೊಳಂಬೆ ಪುಟ್ಟಣ್ಣಗೌಡ್ರು "ಕನ್ನಡಲೇ ಬರೆಯಕ್ಕ್"ಂತ ಬರ್ದ್ ತೋರಿಸ್ಯಳೊ. ಓದ್‌ವವರ ಅರ್ಥ, ಗ್ರಹಣ ಶಕ್ತಿನ, ಕಾವ್ಯ ವ್ಯಾಸಂಗ ಆಸಕ್ತಿನ ಈ ಕಾವ್ಯ ಹೆಚ್ಚಿಸಿದೆ. ಓದಿದಷ್ಟೂ ಹೊಸ್ತ್ ಹೊಸ್ತಾಗಿ ಕಂಡದೆ. ಓದಿ ಬುಡುವ ಕಳಪೆ ಪುಸ್ತಕ ಅಲ್ಲ; ಬಾಸೆ ಮತ್ತೆ ಶೈಲಿಂದ ಮೇಲ್ಮಟ್ಟಲಿರ್‌ವ ಈ ಕೃತಿನ ಕೈಲೆ ಹಿಡ್ಕಂಡ್ ಓದಿ ಸಂತೋಸ ಪಡಕ್. ಬೇರೆ ಬಾಸೆಗಳ ಮೋಹಲಿ ನಮ್ಮ ಮಾತ್‌ನೇ ಮರೆವ ಈ ಕಾಲಲಿ ಅಚ್ಚಗನ್ನಡದ ಕೃತಿನ ಕನ್ನಡ ಅಯ್ಯೆನ ಕಾಲಡಿಲಿ ಇಟ್ಟ ಕೊಳಂಬೆಯೊವರ ಸಾಹಿತ್ಯ ಸೇವೆ ಹೊಗ್ಳುವಂತದ್. ಇಂತ ಒಂದ್ ಪುಸ್ತಕಕ್ಕೆ ಸರ್ಕಾರಂದ ಯಾವ ಪ್ರೋತ್ಸಾಹನೂ ಸಿಕ್ಕಿತ್ಲೆ!

ನಮ್ಮ ಸಮಾಜದೊವಾರೂ ತಮ್ಮ ಸಂಣತನನ ಬುಟ್ಟ್ ಪ್ರತಿ ಭಾವಂತರ ಗುರ್ತಿಸಿ ಪ್ರೋತ್ಸಾಹಿಸ್‌ವ ವಿಶಾಲತೆನ ಬೆಳ್ಸಿಕಂಡ್ರೆ, ಕರ್‌ಟ ಬೀಳ್‌ವ ಎಷ್ಟೋ ಹೂವುಗ ಅರ್ಳ್ ಪರಿಮಳ ಬೀರ್ವೊಂತೇಳ್‌ದರ್ಲಿ ಸೊಂಸಯನೇ ಇಲ್ಲೆ.

---

# ವರದಕ್ಷಿಣೆ (ಬದಿ) ವಿರೋಧಿ!

ಮೊನ್ನೆ
ನಮ್ಮೂರ್ಲ
"ಬದಿ ವಿರೋಧಿ ಸಂಘ"ದ ಅಧ್ಯಕ್ಷೆ
ಪ್ರಾಯದ ಕುಮಾರಿ,
"ಇಪ್ಪತ್ತ್" ಸಾವಿರ ರೂಪಾಯಿ ಬದಿ
ಕೇಳ್ದ-ಉದ್ಯೋಗಸ್ಥ ರೂಪವಂತ
ಗಂಡ್
ಬಾಕನ-ಇವರ ಬುಟ್ಟರೆ ಇನ್ನಾದುಲೆಂತ
ಅಪ್ಪನ
ಕಾಡಿ, ಬೇಡಿ, ಹಟ ಮಾಡಿ
ಬೆದ್‌ರಿಕೆ ಹಾಕಿ
ಮೊದುವೆ ಆಗಿಯೇ ಬುಟ್ಟತ್!

—ಮು. ಸುಬ್ರಾಯಗೌಡ, ಗುತ್ತಿಗಾರು

# ನಮ್ಮ ಸಮಾಜಲಿ ಹೆಣ್ಣ್

—ಪುರುಷೋತ್ತಮ, ಬಿಳಿಮಲೆ

ನಮ್ಮ ಸಮಾಜ ಪುರ್‌ಷ ಪ್ರಧಾನ ಮೌಲ್ಯಗಳ್ನ ರೂಢಿಸಿಕಂಟು. ಹೆಣ್ಣ್ ಯಾವುದರ್ನೂ ಪ್ರಶ್ನೆ ಮಾಡದ್ಹಂಗೆ ಮಾಡಿಬುಟ್ಟ್‌ಟು. ಹುಟ್ಟ್‌ಂದ ಸಾಯಾಲ್ಲಿವರೆಗೆ ಅವುಳು ಎರ್‌ಡ್ನೇ ದರ್ಜೆ ಪ್ರಜೆಯಾಗಿದ್ದದೆ. ಒಂದು ಕುಟುಂಬದ ಬೆಳ್ವಣಿಗೆಲಿ ಅವುಳ್ದೇ ಪ್ರಧಾನ ಪಾತ್ರ ಹವುದಾದರೂ, ಅವುಳ್ನ ನಾವಿನ್ನೂ ಗುರ್ತಿಸಿಕಂಡತ್ಲೆ. ಗುಲಾಮಾಳಂಗೆ ಅವುಳ್ನ ನಡ್ಸಿಕಂಬೊದರ ಮುರೆ ಮಾಡಿಕ್ಕಾಗಿ ಅವಳ-ಭೂಮಿಗೆ ತಾಯಿಗೆ, ಹೋಲ್ಸುವೆ.

ಮನೆಲಿ ಸಣ್ಣದರ್‌ಂದಳೇ ಗಂಡ್ ಮಕ್ಕಳ ಬಾಳ ಮುದ್ದು ಮಾಡುವೆ. ಹೆಣ್ಣ್ ಕೂಸಾದರೆ ಅವುಳ ಅಡಿಗೆ ಮನೆ ಕಡೆ ದೂಡುವೆ. ಹೆಣ್ಣ್ ಕೂಸುನ ಅಣ್ಣ ತಮ್ಮಂದರ್ ಗದ್ದೆ-ತೋಟಗಳ್ಲಿ ಆಡ್‌ಕಾಕನ ಇವುಳು ಹೊಳೆಬದಿಲಿ ಬಟ್ಟೆ ಒಕ್ಕಂಡೋ, ಪಾತ್ರೆ ತೊಳ್ಕಂಡೋ ಇರ್ದು ನಮಿಗೆ ಕಂಡದೆ. ಇದ್ ಎಲ್ಲಿವರೆಗೆ ಬೆಳ್ದುಟುಂತೇಳ್ರೆ ಹೈದಂಗ ಅಡಿಗೆ ಮನೆಗೆ ನುಗ್ಗಿರೆ ಸಾಕ್-"ಏನ್‌ನೇ ಗೂಡೆಗಳ್ಹಂಗೆ ಅಡಿಗೆ ಮನೆಗೆ ನುಗ್ಗಿಬುಟ್ರೊಳ...? ಅಂತ ತಮಾಸೆ ಮಾಡುವೆ. ಒಟ್ಟಿಗೆ ಗೂಡೆಗ ಮಾತಾಡ್ರೆ ಸಾಕ್ 'ಗಂಡ್‌ಬೀರಿ'ಂತೇಳಿ ಅವುಳಿಗೆ ಬಿರ್ದು ಕೊಟ್ಟವೆ. ಇವರ್‌ಂದ ಹೆಣ್ಣಿಗೆ ಮಾತಾಡಿಕಾಗದ ಓಡಾಡಿಕಾಗದ ಸ್ಥಿತಿ ಆವುಟುಟು. ನಮ್ಮ ಸಮಾಜಲಿ ಹೆಣ್ಣಿಗಿರ್ವ ಸ್ಥಾನಮಾನ ಏನ್‌ಂತೇಳ್ದರ ಜಾಸ್ತಿ ವಿವರ್ಸದೆ ಪಟ್ಟಿಮಾಡಿ ಮಾತ್ರ ಕೊಟ್ನೆ ಅಷ್ಟೆ. ನಾವೆಲ್ಲ ಕುದ್ದ್ ಆಲೋಚನೆ ಮಾಡಕಾದ ಸಂಗತಿಗ ಇವು—

1. ಹೆಣ್ಣ್ ಕೂಸು ಹುಟ್ಟಿರೆ 'ಬೆಲ್ಲ' ಹಂಚುವೆ; ಗಂಡ್ ಕೂಸು ಹುಟ್ಟಿರೆ 'ಸಕ್ಕರೆ' ಹಂಚುವೆ.
2. ಅವೊ ದಿನ ಹೆಣ್ಣ್ ಕೂಸುನ ಕಯ್‌ಗೆ ಎರ್ಡ್ ರೂಪ್ಯಾ ಕೊಟ್ಟವೆ; ಗಂಡಾದರೆ 'ಐದ್' ರೂಪ್ಯಾ ಕೊಟ್ಟವೆ.
3. ಗಂಡ್ ಕೂಸಾದರೆ ಅದರ ನಾಲಿಗೆಗೆ 'ಹುಲಿತುಪ್ಪ' ಮುಟ್ಸುವೆ; ಹೆಣ್ಣಾದರೆ ಏನೂ ಬೇಕಿಲ್ಲೆ!
4. ಹಿಂದೆ ಎಲ್ಲಾ ಗೂಡೆಗ ಹೊಲೆ (ಋತು) ಕಾಂಬಕೆ ಮುಂದೆ ಮೊದುವೆ ಆಕು, ಇಲ್ಲರೆ ಕಾಡಿಗೆ ಅಟ್ಟ್‌ತ್ತಿದ್ದೋಗಡ! ಅದೂ ಕಣ್ಣಿಗೆ ಬಟ್ಟೆಕಟ್ಟಿ!! ಆದರೆ ಈಗ ಹಾಂಗೆಲ್ಲ ಇಲ್ಲರೂ ಸಾ ಹೊಲೆ ಕಂಡ್ ಒಂದೆರ್ಡ್ ವರ್ಸಲಿ ಮೊದುವೆ ಆತ್‌ಲ್ರೆ ಜೆನ ಬಾಯಿಗೆ ಬಂದ್ಹಂಗೆ ಏನಾರ್ ಮಾತಾಡಿಕಂಡವೆ.
5. ಹಿಂದೆ ಧರ್ಮಸ್ಥಳಲಿ ಹೊಲೆ ಕಂಡ ಗೂಡೆನ ಅಲ್ಲೇ ಬುಟ್ಟ್ ಬರೊಕೂಂತಿತ್ತ್. ಕೆಲವು ಗೌಡರ ಗೂಡೆಗ ಅಲ್ಲಿ ಹಾಂಗೇ ಬಾಕಿ ಆಗೊಳೊ. ಈಗ ಸಾ ಗೂಡೆಗಳಿಗೆ ಅಣ್ಣಪ್ಪ ದೇವ್ರುನ ನೋಡಿಕೆ ಬುಡ್ದುಲೆ
6. ಹೊಲೆ ಕಂಡ ಗೂಡೆಗ ಮೈತುಂಬಾ ಸೆರ್ಗ್ ಹೊದ್ದ್‌ಕಂಡ್ ಗಂಡ್ ಜೆಗನಳಿಗೆ ಮುಖ ತೋರ್ಸದೆ ಮಾತಾಡೊಕು; ಆದ್ ನಡೆಕನ ಭೂಮಿ ಅದ್‌ರಕೆ ಬೊತ್ತ್.
7. ಮುಟ್ಟಾದ ಹೆಳ್ಮಕ್ಳ ನಮ್ಮ ಜಾತಿಲಿ ಕೊಟಗೆಲಿ ಮೊಲ್ಗುವೆ. ಮನೆಗೆ ಬಾಗ್‌ಲೇ ಇಲ್ಲದ ಜೆನ ಸಾವಿರಾರ್ ಒಳೊ. ಮತ್ತೆ' ಕೊಟಗೆ ಹೇಂಗೆ ಇದರ್ಣಂತ ನಾವೇ ಆಲೋಚನೆ ಮಾಡೋಕು. ದನಗಳ್ಹಂಗೆ, ನಾಯಿಗಳ್ಹಂಗೆ, ಕೋಳಿಗಳ್ಹಂಗೆ ಹೆಣ್ಣ್ ಜೀವ ಮೂರ್ದಿನ ಮನೆಂದ ಹೊರಗೆ ಮೊಲ್ಗುದು ನೋಡ್ರೆ ಎದೆ ಬೆಂದದೆ. ಆದರ್‌ಂದ ಇದಿಕೆ ಸರ್ಯಾದ ಒಂದು ವ್ಯವಸ್ತೆ ಆಕು. ಇಂತ್ಹ ಸಮೆಲಿ ಅವುಳ್ನ ಒಬ್ಬುಳ್ನ ಹೊರಗೆ ಮಲ್‌ಗ್ಸದೆ ಅವಳ ರಕ್ಷಣೆ ಮತ್ತೆ ಆರೋಗ್ಯದ ಬಗ್ಗೆ ಎಚ್ಚರ ವಯಿಸೋಕು.
8. ಕೆಡ್ಡಾಸ ದಿನ ಮುಟ್ಟಾದ ಹೆಳ್ಮಕ್ಳ ಉಪಾಸ ಇರೊಕು. ಆ ಮೂರ್ದಿನ ಅದ್ ಮೊಂದ್ರಿಲಿ ಮೊಲ್ಗಿಕೆ ಆಗದ್‌ಗಡ! ಹಸಿ ಮಡ್ಲ್‌ಲಿ ಮೊಲ್ಗೊಕು. ಆದ್ ತಿಂದ ಎಂಜ್ಲ್ ಸಾ ನೆಲಕ್ಕೆ ಮುಟ್ಟಿಕಾಗದ್‌ಂತ ಹೇಳಿ ಅದ್ ಉಂಡ ಬಾಳ್ಲೆನ ಮರಕ್ಕೆ ಕಟ್ಟುವೆ!
9. ಸುಳ್ಯದ ಹಕ್ಕಲೆ ಇರ್‌ವ ಪೆರಾಲು, ಕೊಂರ್ಬಡ್ಕ ದುಗ್ಗಳಗಳ್ಳ ಭೂತದ ನೇಮ ಆಕನ ಆ ಊರ್ಲ

ಮುಟ್ಟಾದ ಹೆಣ್ಮಕ್ಕ ಯಾರೂ ಇರಿಕೆ ಆಗದ್‌ಗಡ! ಅವರ್‍ನೆಲ್ಲ ಬೇರೆ ಊರಿಗೆ ಕಳ್ಸುವೆ. ಮುಟ್ಟಾದ ಹೆಣ್ಮಕ್ಕ ಮೊಲ್ಗಿದ ಜಾಗಕ್ಕೆ ಸಗ್‌ಣಿ ಹಾಕಿ ಅದೇ ಸಾರ್ಸೊಕು.

10. ಮೊದುವೆ ಆದ ಮೇಲೆ ನಾಗೋಳಿ ಸಾಸ್ತ್ರಲಿ ಹೈದ ಗೂಡೆನ ತಲೆಗೆ ತುಂಬೆ ಹೂ ಮುಡ್ಸುವ ಸಂಪ್ರದಾಯ ಉಟ್ಟು. ಆಗ ಹೈದ 'ಎಡ್ದ ಕಯ್‌ಲಿ' ಹೂ ಮುಡ್ಸಿದೆ! ಮತ್ತೆ ಹೆಣ್ಣ್ ಯಾಗೋಳೂ ಗಂಡನ ಎಡ್ದ ಬಾಗಲೇ ಕುದ್ರೊಕು. ನಮ್ಮ ಸಂಸ್ಕೃತಿಲಿ 'ಎಡ್ದ್ ಕೆಟ್ಟದ್', ಎಡ್ದ ಕಯ್‌ಲಿ ಕೊಡಿಕಾಗದದ್, ತಕಂಬಕಾಗದ್, ನಮಸ್ಕಾರ ಮಾಡಿಕಾಗದ್, ಹೆಣ್ಣ್ ಮಾತ್ರ ಎಡ್ದ ಬಾಗಲೇ ಕುದ್ರೊಕು!

11. ಮಂಜನ ಧಾರೆನ ಅಯ್ಯೆ ನೋಡಿಕಾಗದ್. ಇಂದಿಗೆ ಸಾ ಅಯ್ಯೆ ಮಂಜನ ಧಾರೆ ಸಮೆಲಿ ಒಳಗೆ ಇದ್ದದೆ. ಹೆತ್ತವ್ವನೇ ಮಂಜನ ಧಾರೆನ ನೋಡಿಕಾಗದ್‌ಂತಾದರೆ ಇದ್ ಕುರುಡು ಶಾಸ್ತ್ರ ಅಲ್ಲದೆ ಮತ್ತೆಂತ?

12. ಕುತ್ತಿಗೆಲಿರ್‌ವ ತಾಳಿ ತುಂಡಾದರೆ ಅದರ ಮತ್ತೆ ಕಟ್ಟ್‌ಕನ ಮುಟ್ಟ ಹೆಣ್ಣ್, ಮಡೆ ನೀರ್ ನುಂಗಿಕಾಗದ್. ಉಂಬಕೆ ಬೊತ್ತೇ ಬೊತ್! ಗದ್ದೆ ಕೆಲ್‌ಸ ಮಾಡ್ಕನ ಅವಳ್ದುಂಗೇ ಅವಳ ತಾಳಿ ಸಾಸನ್ದದೆ.

13. ಮೊದುವೆಲಿ ಹೈದಂದ ಗೂಡೆಗೆ ಪ್ರಾಯ ಕಮ್ಮಿ ಆಕೂ ಮತ್ತೆ ಸಾಯೆಕನ ಅದ್ ಗಂಡಂದ ಮುಂದೇ ಸಾಯೊಕು; ಇಲ್ಲರೆ ಅವಿಕೆ ಸ್ವರ್ಗ ಇಲ್ಲೆಗಡ! ಹೇಂಗುಟ್ಟು ನಮ್ಮ ಶಾಸ್ತ್ರ?

14. 'ನಾ ಅವಳ ಮೊದುವೆ ಮಾಡಿಕಂಡೆ'ಂತ ಹೇಳುವೆ. ಇಲ್ಲಿನ 'ಮಾಡಿಕಂಡೆ' ಕನ್ನಡದ 'ಮಾಡಿಕೊಂಡೆ'ಯು ಹಂಗೇ ಇರ್‍ವಂತದ್ದ್. 'ಕೊಂಡೆ' ಶಬ್ಧ 'ಕೊಳ್' ಧಾತುಂದ ಬಂದದ್. 'ಕೊಳ್'ಂತೇಳ್ರೆ-। To Size; to lay hold of; to take away; to buy -ತೇಳ್ವ ಅರ್ಥ ಉಟ್ಟು. ಅಂದರೆ ಮೊದುವೆನ 'ಯಾಪಾರ' ಮಾಡಿಬುಟ್ಟೆಳೊ. ಇಂದ್ 'ಡೌರಿ' ಕೊಡ್ವ ಬಂಗ ನೋಡ್ರೆ ಖಂಡಿತ ಇದ್ ಸುಳ್ಳಲ್ಲ. ಕನ್ನಡಲಿರ್‌ವ ಸಂಸ್ಕೃತ ಪದಲಿ 'ವಿವಾಹ'ಂತೇಳ್ರೆ (Carryng off) ಹೊತ್ತುಕೋಂಡು ಹೋಗು ಎಂಬ ಅರ್ಥ ಉಟ್ಟು. ಇಲ್ಲಿ ಹೆಣ್ಣ್‌ನ ಒಂದು 'ಅಂಗ್‌ಡಿ ಸಾಮಾನ್' (Commodity) ನಂಗೆ ಮಾಡ್ಯೆಳೊ. ಮಾನವಿಯತೆ ಎಲ್ಲ್ಯುಟ್ಟು?

15. ಉಂಗ್ರ ಶಾಸ್ತ್ರಲಿ ಗಂಡೇ ಗೆಲ್ಲಕೂಂತ ಉಟ್ಟು; ಹೆಣ್ಣ್ ಗೆದ್ದರೆ ಮತ್ತೆ ಅದ್ 'ಶುದ್ರೆ' ಜಾತಿ ಆಗಿಬುಟ್ಟದೆ ಗಡ!

16. ಕೆಲವು 'ಬಳಿ'ಂದ(ಗೋತ್ರ)ಗೂಡೆನ ತಂದರೆ ಮನೆ ಗಂಡಾಂತ್ರ ಹೋದೆಗಡ! ಇನ್ನ್ ಕೆಲವು 'ಬಳಿ'ಂದ ಗೂಡೆ ತಂದರೆ ಹಿರಿಯೊವ್ಕೆ ಆಯುಸ ಕಮ್ಮಿ ಆದೆಗಡ!

ಇವೆಲ್ಲ ನಮ್ಮ ಸಮಾಜಲಿ ನಾ ಕಂಡದ್; ನನ್ನ ಅಕ್ಕ-ತಂಗೆಕ, ಅಯ್ಯೆ ಅನುಭವಿಸಿದ್. ಅಡಿಗೆ ಮನೆಲಿ ಹೊಗೆ ತಿಂದ್‌ಕಂಡ್ ಕಣ್ಣೀರ್ ಸುರ್ಸುವ ಹೆಣ್ಮಕ್ಕ ಜಗ್ಲಲೇ ಕುದ್ರೊಕಲೆ, ಭೂತದ ಎದ್ರ್ ಬಾಡ್ಲಲೆ; ಗಂಡ್‌ಜೆನ ಮಾತಾಡ್ಕನ ಬಾಯಿ ಹಾಕುಲೆ. ಗಂಡನೊಟ್ಟಿಗೆ ಮೊಲ್ಗುದು, ಮಕ್ಕಳ ಹೆರ್ದು, ಜೀವಮಾನ ಇಡೀ ಮಡ್ದು-ಇದೇ ಹೆಣ್ಣ್ ಜೀವನ; ಕೆಲವು ಸಂಪ್ರದಾಯಗ ಧಾರ್ಮಿಕ ದೃಷ್ಟಿಲೂ ಮತ್ತೆ ವೈಜ್ಞಾನಿಕ ದೃಷ್ಟಿಲೂ ಸರಿತಾ ಕಂಡ್ರೂ, ಹೆಣ್ಣಿಗೆ ಬಂಗ ಬಾವಂತ ಕೆಲವು ಕುರುಡು ಸಂಪ್ರದಾಯಗಳ ಮಾತ್ರ ಖಂಡಿತಾ ಹೋಗಲಾಡ್ಸೊಕು. ಇನ್ನಿಕೆ ಹೆಣ್ಮಕ್ಕ ಮುಂದೆ ಬಾಕು, ಗಂಡ್‌ಜೆನ ಸಹಕಾರ ಕೊಡೋಕು. ಅಂದರೆ ಮಾತ್ರ ನಮ್ಮ ಸಮಾಜಲಿ ಸಮಾನ - ಉಂಟಾಕೆ ಸಾಧ್ಯ.

---

* ಮನೆಲಿ ಒಂದು ತೊಟ್ಲ್ ತೂಗ್‌ಪತೆಗೂ ಗಂಡ-ಹೆಣ್ಣ್‌ನ 'ವೈವಾಹಿಕ' ಜೀವನ ಮಕ್ಕಳ ಆಟದಂಗೆ.

* ನಮ್ಮ ಸಂತಾನಗಳ್‌ಲಿ ಅಯ್ಯೆಪ್ಪನ ಗುಣದ ಪ್ರಭಾವ ಹೆಂಗೆ ತಾನೆ ಇದ್ದದೆ? ಅವು ಕುಡಿವ ಹಾಲ್ ಡಬ್ಬದ್ದ್, ಶಿಕ್ಷಣ ಸರಕಾರದ್ದ್!

# ಹೊಸ ದೇವ್ರು

—ಕೊಳಂಬೆ ವೀರಪ್ಪಗೌಡ, ಚೊಕ್ಕಾಡಿ

## ಹ ಟ್ಟೆ ೯

ಶ್ರೀಮನ್ನಾರಾಯಣಂತೇಳುವ ಹಳೇ ದೇವ್ರ ಹಳ್ಳಲಿ ಬುಟ್ಟೊ; ಹೊಸ ದೇವ್ರ ಪಾಲಿಸ್‌ಮಾಡಿ ಸಿಂಗಾರ ಮಾಡ್ದೊ. ಹೊಸ ದೇವ್ರ ಹೊಸ ಬೀಜನ ನೀರ್ಲಿ ಬಿತ್ತಿದೊ, ಅಲ್ಲಿ ಹೊಸಸ ಕ್ರಿಮಿ ಕೀಟಗ ಉಂಟಾದೊ. ಅಲ್ಲಿಂದ ಮರಗ, ಮಂಗಗ, ಹೊಸ ಪ್ರಾಣಿಗ ಉಂಟಾದೊ. ಆಮೇಲೆ ಮೊಯಿಂಸರ್, ದೇವತೆಗ ಉಂಟಾದೊ.

---

**ಹೊಸ ವಿಜ್ಞಾನಿಗಳ್ಂದ ಹೊಸಸ ಪ್ರಯೋಗ ನಡಿತಾ ಉಟ್ಟು, ಮಯೂರ ಧ್ವಜನ ಸಿಗ್ದಾಂಗೆ, ಒಂದು ಗಂಡ್‌ನ ಮೇಲ್ಬಾಗಂದ—ಹೆಣ್ಣ್‌ನ ಕೆಳ ಬಾಗಂದ ಕಸಿ ಕಟ್ಟಿದ್ದಾಂಗೆ ಮಾಡಿ, ಎರ್ಡ್ ಶರೀರನ ಒಂದು ಮಾಡ್ವೆ! ಸರ್ಕಾರಕ್ಕೆ ಬೇಕೂಂತಾಕನ ಮಾತ್ರ ಮಕ್ಕ !!**

---

ಹೀಂಗೆ ಇಕ್ಕನ ಒಂದರ ಇನ್ನೊಂದು ಹೊಂದಿದ್ದಿರಿಕೆ ಸುರುಆತ್. ಬೂಮಿಲಿದ್ದ ಮೊಯಿಂಸ ಮಾಡ್ದ್ ಹೋಮ, ಹೊಸ್ತ್ ಯಾಗಗಳ್ಂದ ಅವರ ಜೀವನ. ದೇವತೆಗಳಿಗೆ ನಿದ್ದೆ ಇಲ್ಲೆ, ಹಸಿವೆ ಇಲ್ಲೆ, ಬೆಗರ್ ಇಲ್ಲೆ, ಹುಡ್ಗರೂ ಅಲ್ಲ, ಅಜ್ಜಂದ್ರೂ ಅಲ್ಲ; ಸಾಯದುಲ್ಲೆ-ಹುಟ್ಟುದುಲ್ಲೆ. ನಾವ್‌ಗೆ ಅವು ಬೇಕ್-ಅವ್ಕೆ ನಾವು ಬೇಕ್ ಒಂದರ ಆಶ್ರಯಂದ ಇನ್ನೊಂದು ಬದ್ಕುದು. ನಾವು, ಕೂಡಾ ದೇವತೆಗಳ್ಹಾಂಗೆ ಆಕೆ ಸಾಧ್ಯ ಉಟ್ಟು. ಕೆಲವು ಜೆನ ಆಕಂಡೂ ಒಳೊ, ಆಗ್ವ ಅಬಿಪ್ರಾಯಲಿ ಒಳೊ. ದೇವತೆಗಳಿಗೆ ಬೋಳೆಯರ್ಂತ ಹೆಸ್ರುಉಟ್ಟು, ಬೋಳು ತಲೆವುಕೆ ನಮ್ಮಲ್ಲಿಯೂ ಏನ್ ಕಮ್ಮಿ ಇಲ್ಲೆ, ತಾನ್ ಬೋಳಾಗಿದ್ದ್ ಬೇರೆವರ್ನ ಬೋಳು ಮಾಡೊವು ಇಲ್ಲಿಯೂ ಬೇಕಷ್ಟ್ ಒಳೊ, ಬಾಳ ಹಿಂದೆ ಬೋಳು ತಲೆಯು, ವರ್ಂದ ನಮ್ಮ ದೇಶ ಬೋಳಾಗುಟೂಂತ ಹೆಚ್ಚಿನವುಕೆ ಗೊತ್ತುಟು. ನಮ್ಮಲ್ಲಿ ಹಲವಾರ್ ರೀತಿನ ಬೋಳು ತಲೆವು ಒಳೊ. ಹಳೆ ಬೋಳು ತಲೆಯುವರ್ಂದ ನಮ್ಮ ದೇಶಕ್ಕೆ ಅಪಾಯ ಉಟ್ಟುಂತ ಕೆಲವು ಬೋಳಗಳಿಗೆ ಗೊತ್ತ್‌ಲೆ. ನಾವು ದೇವತೆಗಳ್ಹಾಂಗೆ ಆಕುಂತಾದರೆ ಬೇರೆವು ಮಾಡ್ದರ ನಾವು ತಿನ್ನೋಕು; ಬೇರೆವರ ಕೈ ನಮ್ಮ ಬಾಯಿಗೆ ಬರೋಕು; ಹೀಂಗೆ ಮಾಡ್‌ದರ್ಲೆ ಇರ್ದು ಬುದ್ಧಿವಂತಿಕೆನ ತಿರ್‌ಳ್. ಹೀಂಗೆ ಮಾಡ ಮಾಡದ್ದರೆ ಈಗನ ಕಾಲಲಿ ಬೊದ್ಕಿಕೆ ಬೊತ್ತ್.

ಮಣ್ಣ್‌ಂದ-ಬೂಮಿ, ಬೂಮಿಂದ-ನೀರ್, ನೀರ್‌ಂದ-ಮೀನ್, ಬಡವಂದ-ದೊಡ್ಡಂವ, ಕೊಡ್‌ವವಂದ-ಪಡಿವಂವ, ನಾಡವರ್ಂದ-ಬೇಡಿ ತಿಂಬವು, ಹೆಣ್ಣ್‌ಂದ-ಗಂಡ್, ಗಂಡಾಂತ್ರಂದ-ತಾಯಿಗಂಡ, ರೋಗಿಂದ-ವೈದ್ಯ, ಹಳ್ಳಿಯವರ್ಂದ-ಪಳ್ಳಿಯುವು, ಉರ್ಂದ-ಉಗ್ರಾಣಿ, ಆಕ್ಕಂದರ್ಂದ-ಅಕ್ಕಸಾಲಿಗ, ಕಲಿಯುವರ್ಂದ-ಕಲ್ಸೊವು, ಪೋಲಿಗಳ್ಂದ-ಪೋಲಿಸ್, ಕಷ್ಟಗಾರಂದ-ಲೊಟ್ಟೆಗಾರ, ಮಂಗ್ಳೂರ್‌ನವರ್ಂದ-ಬೆಂಗ್ಳೂರ್‌ನವು, ಬೇಸಾಯಗಾರರ್ಂದ-ಬ್ಯಾಂಕ್‌ನೊವು, ಇಲ್ಲಿಯುವರ್ಂದ-ಡಿಲ್ಲಿಯೊವು, ಹೀಂಗೆ ಹೊಂದಿಕೆ ಒಂದಕ್ಕೆ ಇನ್ನೊಂದು ಬೇಕೇ ಬೇಕು. ಮೊಯಿಂಸ – ದೇವತೆ – ದೇವ್ರು ಎಲ್ಲಾ ಹೊಸ್ತಾತ್, ಜಾತಿ ಎಲ್ಲಾ ಒಂದಾತ್, ನೀತಿ ಕರೆಲೇ ಒಳ್ತ್, ನೀತಿ ಬಾಲ ಹೋದಾ ಕೋತಿ ಆತ್. ಗೈದ್ ತಿಂಬವು ಕಮ್ಮಿ ಆತ್-ಬರ್ದ್ ತಿಂಬವು ಹೆಚ್ಚ್‌ತ್, ಕೈಗೆ ಕೆಸ್ರಾತ್-ಬಾಯಿಗೆ ಹೆಸ್ರಾತ್, ಪೆನ್ನ್‌ನ ಕೈಗೆ ಚಿನ್ನ ಸಿಕ್ಕಿತ್, ತಂತ್ರ ಮಾಡಿ ಮೊಂತ್ರಿ ಆದೊ, ನೋಟು ತೋರ್ಸಿದೊ-ವೋಟು ಕೇಳ್ದೊ, ವೋಟಗೆ ವೋಟು ಎದ್‌ರಾತ್, ಪೇಟೆ ಪೇಟೆ ಲೂಟಿ ಆತ್, ಲಾರೀ ಪೆಟ್ಟ್ ಕಡೆಗೆ ಸಿಕ್ತ್. ಕಾಡ್‌ನವಂಗೆ ಬೇಡ್ದ್ ಸಿಕ್ತ್, ಕಡೇಲಿದ್ದಂವ ಕೊಡಿಗ್ಹೊತು-ಕೊಡಿಲಿದ್ದವನ ನಡೂಗೆ ಹಾಕಿದೊ, ನಡೂನವನ ಕಡೇಗೆ ನೂಕಿದೊ, ಕೊಡಿನವಂಗೆ ಸೆಡೇಲಿ ಇಕ್ಕಿದೊ, ಇಕ್ಕಿ ಒಳ್ದದ್ ಕಡೇನವಂಗೆ ಸಿಕ್ತ್. ಸಣ್ಣವಂಗೆ ಮಣ್ಣಾತ್-ಮಣ್ಣ್‌ನಂವ ಹಣ್ಣಾತ್, ದೊಡ್ಡಂವನ ಅಡ್ಡ ಹಾಕಿದೊ, ಮಾಡ್ದವಂಗೆ ಬೇಡಾದ್ ಸಿಕ್ಕಿತ್, ಬೇಡುವವು-ಬೀಡಿಯವೂ ಹೆಚ್ಚಾದೊ, ಬೇಸಾಯದಂವ ಸಾಯಕಾತ್, ಅನ್ಯಾಯ ಮಾಡ್ದಂವ ಅನ್ನ ತಿಂತ್, ಧರ್ಮ ಮಾಡ್ದಂವ ದಾರಿಲಿ ಬೀತ್, ರಾತ್ರೆ ಹಗ್‌ಲಾತ್, ವಿಜ್ಞಾನ ಮುಂದೆ ಹೋತ್, ಮೊಯಿಂಸ ಹಕ್ಕಿಯಾಂಗೆ ಹಾರ್ತ್-ಇಂದ್ರ

ನಾಂಗೆ ಚೆಂಪ್ರನಲ್ಲಿಗೆ ಹೋತ್, ವಿೂನಾಗಿ ನೀರೊಳಗೆ ಇಳ್ತ್, ಕ್ರಯು ಒಂದಕೆ ತೊಂಬತಾತ್, ಜೆನ ಒಂದಕೆ ಒಂಬತ್ತ್ ಹೆಚ್ಚಾತ್. ಸರ್ಕಾರ ಕಾನೂನು ಮಾಡ್ತ್-ಹೊಸ ದೇವ್ರುಗೆ ತಲೆ ಬಿಸಿ ಆತ್, ಕಾನೂನಿಗೆ ದೇವ್ರುಗೆ ವಿರೋಧ ಆತ್, ಹೀಂಗೆ ಆಗಿ ಜಟಾಪಟಿ ಆತ್-ಜಟಾಪಟಿ ಆಗಿ ಕಂಡಾ ಬಟ್ಟೆ ಆತ್; ಇಲ್ಲಿ ಹೊಸ ವಿಸಯ ಹೊರಗೆ ಬಾತ್, ಈಗ ಇಲ್ಲಿ ಹೊಸ್ತ್ ಸಂಗ್ತಿ ಕುತ್ತಿಗೆ ಹಿಡ್ತ್.

ಬೋಳಪ್ಪನ ಹೆಣ್ಣ್ ಕಾಳಮ್ಮನ ನಾಕನೆ ಹೆರಿಗೆನ ಕೂಸು ಗಂಡ್, ಅದರ ಹೆಸ್ರ್ ಬೆಳ್ಯಪ್ಪಂತ ದೇವ್ರು ಬರ್ತ್; ಮುದ್ದನ ಹೆಣ್ಣ್ ಮುದ್ದಮ್ಮಳ ಒಂಬತ್ನೆ ಹೆರಿಗೆನ ಕೂಸು ಹೆಣ್ಣ್, ಅದರ ಹೆಸ್ರ್ ಸಿದ್ದೂಂತ ಬರ್ದದೆ; ಇವ್ರು ಗಂಡ ಹೆಚ್ಚಾಗಿರೊಕುಂತ ಇದ್ದದೆ. ಮೇಲೆ ಹೇಳ್ದ ಕಾಳಮ್ಮ ಹೆಂಗ್ಸ್, ಎರ್ಡ್ನೆ ಹೆರಿಗೆಲಿ ಸರ್ಕಾರದ ವತ್ತಾಯಕ್ಕೆ ಕೊಯ್ಸಿಕಂತ್; ನಂತ್ರ ಹೆರಿಗೆಲಿ ಹುಟ್ಟುವ ಸಿದ್ದು ಗೂಡೆಗೆ ಗಂಡ ಇಲ್ಲೆ. ಈಗ ಕಾಳಮ್ಮ ಹೆಂಗ್ಸ್‌ನ ಬಾಕಿ ಎರ್ಡ್ ಹೆರಿಗೆನ ಒಂದು ಮಾಪುಳ್ಳೆನ (ಮುಸ್ಲಿಂ ಹೆಂಗ್ಸ್) ನ ಹೊಟ್ಟೆಗೋ ಇಲ್ಲರೆ ಬೇರೆ ಯಾರರ ಹೊಟ್ಟೆಗೋ ಹಾಕಿ; ದೇವ್ರ ಲೆಕ್ಕಾಚಾರ ಸರಿ ಆದೆ. ಆಗ ಇಲ್ಲಿ ನಡೆವ ಸಂಗ್ತಿ ಕರ್ನಕುತ್ತ! ಬರ್ದವರ ತಿದ್ದಿಕಾಲೆ; ಹಿಂಗಾಗಿದ್ದ್ ಕೆಲು ಗೂಡೆಗಳಿಗೆ ಗಂಡ ಇಲ್ಲೆ-ಕೆಲು ಹೈದಂಗಳಿಗೆ ಗೂಡೆ ಇಲ್ಲೆ, ಹೀಂಗಾಗಿ ಕೆಲವುಕೆ ಧಾರೆ ಮೊದುವೆನೂ ಅಲ್ಲ-ರಿಜಿಸ್ಟ್ರಿಂತೇಳ್ವ ಅರ್ಧಮರ್ಧ ಮೊದುವೆನೂ ಅಲ್ಲಾ! ಮನಸ್ಸ್ ಒಂದಾತ್, ಗಂಡ್-ಹೆಣ್ಣ್ ಒಟ್ಟು ಕೂಡೊತ್ತ್; ಒಸಿಯು ಸಮೆಯ ಕಳೆಕನ ಈ ಹೆಣ್ಣಗೆ ಒಂದು ಪುಂಡಿ ಮಣ್ಣ್ಂತೇಳಿ ಹೈದ ಓರೆ ದಾರಿಲಿ ಹೋದೆ; ಗಂಡ ಬರೇ ದಂಡಂತೇಳಿ ಹೆಣ್ಣ್ ಬೇರೆ ದಾರಿಲಿ ಹೋದೆ; ಈಗ ಬೇರೆ ಬೇರೆ ದಾರಿಗ ಬೇಕಷ್ಟ್ ಒಳೊ. ಅಡ್ಡ ನೀಟಾ ಪೂರಾ ದಾರಿಗಳೇ! ಕಡೆಗೆ ದಾರಿ ಸಿಕ್ಕದೆ ದಾರಿಲಿ ಬೀಳ್ವ ಪ್ರಸಂಗವೂ ಉಟ್ಟು, ದಾರಿಲೇ ಬಾಳ ದೂರ ಹೋಗಿ ತಿರ್ಗಿ ಬಾಕೆ ದಾರಿ ಸಿಕ್ಕದಿದ್ದೂ ಉಟ್ಟು. ಗಂಡ ಹೆಣ್ಣಾಗಿದ್ದ್ ಹಿಂದೆನಾ ದಾರಿನ ಮುಚ್ಚಿ ಬೇರೆ ದಾರಿ ಮಾಡಿಕಂಬವೂ ಒಳೊ. ಕೆಲವುಕೆ ಸೊರ್ಗಕ್ಕೆ ಹೋಕೆ ದಾರಿ ಸಿಕ್ನುದ್ಲೆ, ಯಮನಲ್ಲಿಗೂ ಸಿಕ್ಕುದ್ಲೆ, ಹಿಂಗಾಗಿ ತ್ರಿಶಂಕು ಸೊರ್ಗ ಆದೂ ಉಟ್ಟು.

ಆಚೆ ಈಚೆ ದಾರಿಲಿ 'ಓಡಿ' ಓಡಿ ಸಾಕಾಗಿ ಓಡಿ ಕಂಡ್ ಬಂದದೆ ನಾ ಗೌಡ ಜಾತಿಲಿ ಹುಟ್ಟಿದಂವ, ನನ್ನ ಹೆಸ್ರ್‌ನ "ಓಡೀ"ಂತ ಕರ್ದವೆ, ನಾ ಮುಂದೆ ದೊಡ್ಡ ಬಂಗ್ಲೆಲಿ ಇದ್ದಂವ. ನಾ ಬಂಗ್ಲೆಲಿ ಇರ್ಕನ ಗದ್ದೆ ಆರ್ ಮುಡಿ ಇತ್ತ್, ಅದರ ಬೇರೆವುಕೆ ಗೇಣಿಗೆ ಕೊಟ್ಟಿದ್ದೆ. ಹೊಸ ಸರ್ಕಾರದ ಹೊಸ ಕಾನೂನ್ ಬಾತ್, ಗೇಣಿ ಕೊಡ್ಕಿಲೆ-ಗದ್ದೆ ಬುಡ್ಕಿಲೆ, ನಂಗೆ ಓಡಿ ಓಡಿ ಸಾಕಾತ್, ಗದ್ದೆನ ಮುದ್ದೆ ಮಾಡಿ ನುಂಗಿದ್ದ್ ನನ್ನ ಒದ್ದ್ ಹೊರಗೆ ಹಾಕಿದೊ. ಈಗ ಬಂಗ್ಲೆ ಕೆಲ್‌ಸವೂ ಇಲ್ಲೆ, ನಂಗೆ ಸರ್ಕಾರದ ದಬರ್‌ದಸ್ತ್ ಅಲ್ಲದೆ ಯಾವ ಸೌಲತ್ತೂ ಇಲ್ಲೆ. ಹಾಂಗಾಗಿ ಬಾವ ಜನ್ಮಕಾರೂ ಏನಾರ್ ಒಳ್ಳೆ ದಾರಿ ಆದೆಯೋ ನೋಡೊಕೂಂತ ಉಟ್ಟು. ಹಾಂಗೆ ಹೊಸ ದೇವ್ರುಗೆ ಹೊಸ ರೀತಿನಾ ಅರ್ಜಿ ಕೊಡೋಕುಂತ ಗ್ರ್ಯಸಿ ಅಲ್ಲಿವರೆಗೆ ಹೊರ್ಟದ್. ಹೊಸ ಬಂಗ್ಲೆಲಿ-ಹೊಸ ಕುರ್ಚಿ ಮೇಲೆ ಹೊಸ ದೇವ್ರು ಕೈಕಾಲ್ ನೆಟ್ಟಂಗೆ ನೀಡಿ ಕುದ್ದಳೊ; ಸಾಮಿ......ಕೇಳಿ ನಾ ಕೈ ಮುಗ್ದನೆ.

ಹೊಸ ದೇವ್ರು :- ಓಡಿ...ಏನಾಗಿ ಬಂದ? ನನ್ನಂದ ನಿಂಗೆ ಏನಾಕೂ ಹೇಳ್, ನಿಮ್ಮಂತವಕ್ಕಾಗೇ ನಾ ಇದ್ದ್...

ಸಾಮಿ... ನೀವು ದೊಡ್ಡ ಮೊನ್ಸ್‌ಮಾಡಿ ನಂದೊಂದು ಸಣ್ಣ ಕೆಲ್‌ಸನ ಮಾಡಿಕೊಡೊಕು.

ಹೊಸ ದೇವ್ರುಗೆ ನಂದೊಂದು ಅರ್ಜಿ ಉಟ್ಟು, ನಾ ಗೌಡ ಜಾತಿಲಿ ಹುಟ್ಟಿ ಬಾವುಲಿನಾಂಗೆ ಆಗೋಳೆ; ಜಾತಿಲಿ ಕೀಳೂಅಲ್ಲ-ನೀತಿಲಿ ಮೇಲೂ ಅಲ್ಲ, ಸರ್ಕಾರಂದ ದಬರ್‌ದಸ್ತ್ ಅಲ್ಲದೆ ಸೌಲತ್ತ್ ಏನೂ ಇಲ್ಲೆ, ಹಾಂಗಾಗಿ ಬಾವ ಜನ್ಮಕ್ಕರೂ ಏನಾರೊಂದು ಸೌಲತ್ತ್ ಸಿಕ್ಕುದೊಂತಾ ನಿಮ್ಮತ್ರ ಬಂದದ್.

ಹೊಸ ದೇವ್ರು :- ನಾವು ಎಂತಾ ಅರ್ಜಿನೂ ತಕಂಡವೆ, ಬೇರೇ ಕೈಲಿ ಅರ್ಜಿ ಕೊಟ್ಟರೆ ಬೇಗಕ್ಕೆ ಕೈ ಇಲ್ಲೇಂಕಾದೆ. ನೋಟು ನೋಡ್ದ ಮೇಲೆ ಮತ್ತೆ ಆಟ ನೋಡ್ದು, ರುಸುಂ ಇಲ್ಲದೆ ಯಾವ ಕೆಲ್‌ಸವೂ ಆದುಲ್ಲೆ, ದುಡ್ಡೇ ದೊಡ್ಡಪ್ಪ, ಬಂಡಾಯ ಇಲ್ಲದ ಅರ್ಜಿ ಕುಂಡೆ ಅಡಿಗೆ.

ಓಡಿ. ಇತ್ತ ಕೇಳ್ ಈಗ ಸಣ್ಣ ಕೆಲ್‌ಸಾಂತ ಯಾವುದೂ ಇಲ್ಲೆ; ಬರಿವ ಯಾವ ಕೆಲ್‌ಸವೂ ಸಣ್ಣದಲ್ಲ. ಈಗ ಸಣ್ಣ ಕೆಲ್ಸಂತೇಳ್ರೆ ಪಿಕ್ಕಾಸಿಲಿ ಎಳ್ಪುದು, ಸಬ್ಬಲಿಲಿ ಜರ್ಸುದು, ಹೆಡಿಗೆಲಿ ಹೊರ್ದು, ಕೊಯ್ಯೊದು, ಕೂಡ್ದು, ಹೀಂಗೆ ಎರ್ಡ್ ಕೈಲಿ ಮಾಡ್ವ ಕೆಲ್‌ಸ ಸಣ್ಣದ್. ಬರ್ಯೋದು ಹಾಂಗಾದುಲೇ, ಒಂದೇ ಕೈಲಿ ಆಕು.... ನಾವುಗೆ ರಾವಣನಾಂಗೆ ಇಪ್ಪತ್ತ್ ಕೈ ಇಲ್ಲೆ; ಐವತ್ತ್ ಕಡೇಂದ ಬಂಡದರ ಒಂದೇ ಕೈಲಿ ಮುಗ್ಸೊಕು. ಬರ್ದದ್ ಹೆಚ್ಚಿದಾಂಗೆ ತಲೆ ಬಿಸಿಯಾಗಿ ತಲೆ ತಿರ್ಗಕೆ ಸುರು ಆದೆ; ಹಾಂಗೆ

ಆಗುಟು ಈಗ, ಆಗ ನೋಟ್‌ನ ಕಟ್ಟ್ ಕೋಟ್‌ನ ಕಿಸೆಗೆ ಬಿದ್ದರೆ ಆ ಕಡೆಗೆ ಮೊರೆ ಮಾಡಿ ತಿರ್ಗುವ ತಲೆ ಸಿಡ್ತದೆ.

ಹೊಸ ದೇವ್ರೆ... ಒಂದು ಸಾವಿರ ಈಗ ಕೊಟ್ಟನೆ, ಕೆಲ್‌ಸ ಆದ ಮೇಲೆ ಕೈ ಮೊಗ್ಚಿದ್ ನಿಮ್ಮ ಸೆರಿ ಮಾಡ್ನೆ ಈಗಕ್ಕೆ ಸೆರಿ ಮಾಡಿಕಾಕು...

ಆತ್ ಇತ್ತ ಕೊಡು, ...

ಅರ್ಜಿ ನೋಡೊನೊ, ಹೋ.... ಗಿರಿಜನ ಅಪ್ಪನಾಗಿಯೂ, ಹರಿಜನ ಅವ್ವನಾಗಿಯೂ, ಬಾವ ಜನ್ಮಕ್ಕೆ ಆವಾಂಗೆ ಅದರೊಟ್ಟಗೆ ಒಂದು ಕೈ ಕಾಲಿಲ್ಲದ ಕೂಸುನೂ..

ಈ ಅರ್ಜಿನ ತೆಕಂಕೇ ಸಾಧ್ಯ ಇಲ್ಲೆ, ತೆಕಂಕೆ ಕಾನೂನ್ ಇಲ್ಲೆ, ಯಾಕೇಂತಕೇಳ್-ಹೊಸ ವಿಜ್ಞಾನಿಗಳ್‌ಂದ ಹೊಸಸ ಪ್ರಯೋಗ ನಡಿತಾ ಉಟ್ಟ್, ಮಯೂರ ದ್ವಜನ ಸಿಗ್ದಾಂಗೆ, ಒಂದು ಗಂಡ್‌ನ ಮೇಲ್ಬಾಗಂದ ಹೆಣ್ಣ್‌ನ ಕೆಳ ಬಾಗಂದ ಕಸಿ ಕಟ್ಟಿದ್ದಾಂಗೆ ಮಾಡಿದ್ದ್, ಎರ್ಡ್ ಶರೀರನ ಒಂದು ಮಾಡ್ವೆಗಡ! ನಡೂಲಿ ಕರೆಂಟ್ ಇಸುವೆ; ಸರ್ಕಾರಕ್ಕೆ ಮಕ್ಕ ಬೇಕೂಂತಾಕನ ದಿನಕ್ಕೊಂದರಂತೆಯೋ ಇಲ್ಲರೆ ಹೆಚ್ಚಿಗೆ ಮಕ್ಕಳ ಹೊರ ತೆಗ್ದವೆ. ಇದರ್‌ಂದ ತುಂಬಾ ಉಪಕಾರ, ಎಂಬತ್ತ್ ಕೋಟಿ ಜೆನಸಂಖ್ಯೆ ನಲ್ವತ್ತಾದೆ, ಜೆನ ಕಮ್ಮಿ ಆದೆ-ಜಾಗೆ ಹೆಚ್ಚಾದೆ; ಮೊದುವೆ ಇಲ್ಲೆ, ಬದಿ ಇಲ್ಲೆ (ಡೌರಿ) ಜಾತಿ ಇಲ್ಲೆ, ಹೆರಿಗೆ ಇಲ್ಲೆ....!!

ನೀ ಈಗ ಅರ್ಜಿ ಕೊಟ್ರೆ ಹೆಚ್ಚಾಗಿದ್ದ್ ಸೋತ್ ಬೀಳ್‌ವ ಪರ್‌ಸಂಗ ಉಟ್ಟ್. ಈಗ ನಿನ್ನ ಅರ್ಜಿಗೆ ಬೆಲೆ ಇಲ್ಲೆ, ನೀ ಈಗ ಹೋಗು-ನಾ ಆಲೋಚನೆ ಮಾಡಿದ್ದ್ ಹೆಳ್ನೆ....

ಆತ್, ಹಾಂಗರೆ ನನ್ನ ದುಡ್ಡ್ ಕೊಡಿ...

ಮುದ್ದ್‌ನ ಪಂಡಿತಂಗೆ, ವಕೀಲ್ರಿಗೆ, ಲಂಚ ಕೊಟ್ಟದ್, ಸುಡಿಕೆ ಹೋದ ಹೆಣ ಇವಿಷ್ಟ್ ಹಿಂದಕೆ ಬಾವ ಕ್ರಮ ಇಲ್ಲೆ. ಬಂದದ್ ಇಲ್ಲೆ – ಬಾಕೂ ಆಗದ್, ನೀ ಹಿಂದೆ ಹೋಗು ಅರ್ಜಿ ಪ್ರಯೋಜನ ಇಲ್ಲೆ – ದುಡ್ಡ್ ವಾಪಾಸ್ ಇಲ್ಲೆ, ನಿನ್ನ ಬಾಸೆನೂ ನಡಿದುಲೆ ನೋಡು.




"ತ... ತ.... ತೊಪ್ಪಾತ್ ಗೌಡ್ರೆ,
ತ್ಯಾಗಶೀಲರ್‌ತೇಳಿ ಆಕಾಯಿತ್
ಈ ಹಾಳ್ ಪ್ರಿಂಟ್‌ಂದ ಶೀಲತ್ಯಾಗಿಂತ
ಆವುಟುಟು..."

---

## ಲೊಟ್ಟೆ

ಹಾಕಿತ್ ಅಂವ ಖಾದಿ ಬಟ್ಟೆ  
ಹೊಡ್‌ತ್ ಜೆನಂಗಳ ಮುಂದೆ ಲೊಟ್ಟೆ  
ಸರಕಾರಂದ ಸಿಕ್ಕಿತವಂಗೆ ಪುಕ್ಸಟೆ  
ರಾಜ್ಯದ ಸುಖದ ಮಂತ್ರಿ ಪಟ್ಟೆ.

ಕುಯ್ಯಮುಡಿ ಮಾದಯ್ಯ ಸುಶೀಲ

# ಮಿಂಚಿ ಹೋದ ಮ್ಯಾಲೆ...

ನಾ ಮರ್ತ್ತಾಲೆ ಗೆಳೆಯಾ
ನನ್ನದೆನ ಹೊಕ್ಕ್ ನೀ
ಅಲ್ಲಿ ಮನೆ ಕಟ್ಟಿದರ

ನಾವಿಬ್ಬರೆ ಎಲ್ಲರ ಮರ್ತ್
ಸೊರ್ಗಕ್ಕೆ ಕಾಲಿಟ್ಟದರ...
ಮಧ್ಯಲಿ ಊರ್ವಶಿ ಬಾಕನ ನೀ

ನನ್ನ ಅಲ್ಲಿಂದ ಕೆಳಗೆ ದೂಡ್‌ದರ
ಬೇಡಾಂತೇಳೊ್ರ ನೆನ್‌ಪಾದೆ;
ಕಾಲ ಕಳ್ದ್ ಹೋಗುಟು

ಊರ್ವಶಿ ನಿನ್ನ ಬುಟ್ಟ್ ಹೊಗುಟು;
ಗೆಳೆಯಾ....
ನಿಂಗೀಗ ನಂದ್ ನೆನ್‌ಪಾಗುಟು

ಆದರೆ, ನಿಂಗೆ ಗೊತ್ತುಟಾ ?
ಅಂದ್ ನೀ ನನ್ನದೆಲಿ ಕಟ್ಟಿದ ಮನೆ
ಅದಿಕೆ ಇಂದ್ ಗೆದ್ಲ್ ಹಿಡ್ದುಟು.

—ಕು|| ಪಿ. ಎಸ್. ಆರತಿ, ಉಜರೆ.

---

# ನಾಯಿಗ

ಊರ್‌ಲೆಲ್ಲ ತುಂಬಿ ಹೋಗೊಳೊ ಕಂತ್ರಿ ನಾಯಿಗ
ದೊಡ್ಡ ದೊಡ್ಡ ಕರಿಯು, ಬಿಳಿಯು, ಕ್ರಾಸ್ ನಾಯಿಗ.
ನೋಡ್‌ಕಾಕನ ಹೆದ್ರಿಕೆ ಆದೆ, ಇವು ಕಚ್ಚಿ ಬುಡ್‌ವೊಂತ

ಬೊಗ್ಗುದು ಕೇಳಿರೆ ಯಾರ್ ಹೇಳ್‌ವೊ, ಇವು ತಿಂದ್‌ಬುಡ್‌ವೊಂತ.
ಗುರ್ತ ಇಲ್ಲದ ಜೆನಂಗ ಕಂಡರೆ ಹೆದ್‌ರಿ ಓಡೊಕು
ಸಾವ್‌ಗೆ ನೋಡಿ ನೋಡಿ ಅಚ್ಚೆಸ ಆಗುಟು ಇಂತನಾಯಿಗಳ.

ಮೊದುವೆ ಗಿದುವೆ ಇದ್ದರೆ ಇವು ಓಡಿ ಬಂದವೆ
ಇವುಕೆ ನಮ್ಮ ಹಾಂಗೆ ಮೊದುವೆಗೆ ಹೋಕೆ ಕಾಗದ ಬೇಕಯಾ ?
ಮುನ್ಸಿಪಾಲಿಟಿಯೊವು ಹೀಂಗೆ ಸುಮ್ಮನೆ ಕುದ್ದರೆ ಹೇಂಗೆ ಆದುಯಾ ?

ಏನ್ ಆದರೂ ನಾ ಹೆದ್‌ರಿ ಕುದ್ರಿಕಿಲೆ ಯಾಕೆ ಗೊತ್ತುಟಯಾ
ನಾವು ಬಾವ ಹಾದಿಲೆಲ್ಲಾ ಇವು ತುಂಬಿ ಹೋಗೊಳೊಯಾ
ಅದಿಕ್ಯಾಗಿ ಇವುಕೆ ನೀವು ಹೆದ್ರಿ ನಿಲ್ಲ್ ಬೊಡಿಯಾ...

ಯಾಕೆ ಗೊತ್ತುಟೊ...?
ಇವ್ಕೆ ಬೆರೀ ಬೊಗುಳ್‌ದುಂತೇಳ್ರೆ ಮಾತ್ರ ಗೊತ್ತ್‌ಯಾ
ಬೊಗ್ಗುವ ನಾಯಿ ಕಚ್ಚ್‌ದುಲೆಂತೇಳಿ ಎಲ್ಲೊವುಕೆ ಗೊತ್ತುಟುಯಾ.

—ಯತಿ, ಭೂತಕಲ್ಲು.

# ಗ್ರಾಚಾರ

—ಶ್ರೀಮತಿ ಕುಂದಲ್ಪಾಡಿ ಲೀಲಾವತಿ ದಾಮೋದರ

ಜೀವನಲಿ ಬಾವ ಎಷ್ಟೋ ಕಷ್ಟ, ನಷ್ಟ, ಬೇನೆಗಳ ಸಮೆಲಿ ನಾವು ಸಾಮಾನ್ಯ ಕೇಳ್‌ವ ಒಂದು ಮಾತ್ 'ಗ್ರಾಚಾರ'. ಅಂದರೆ ಕಷ್ಟನಷ್ಟಗಳಿಗೆ ಕಾರಣ ಯಂತತ ಕಂಡ್ ಪರಿಯಾರ ಮಾಡಿಕೆ ಸಾಧ್ಯ ಇಲ್ಲೆತಾಕನ ನಾವು ಸುಲ್ಬಲಿ ಆದೆಲ್ಲ ಅವರವರ ಗ್ರಾಚಾರಂತೇಳಿವೆ. ನಮ್ಮ ಜೀವನದ ಆಗ್ ಹೋಗುಗಳ ಮೇಲೆ ಗ್ರಹಗಳ ಪ್ರಬಾವ ಉಟ್ಟುಂತೇಳ್ವ ನಂಬಿಕೆ ಸೋಲು ಗೆಲುಗಳಿಗೆ ಕಾರಣ. ಕೂಸು ಹುಟ್ಟದ ಕೂಡ್ಲೆ ಜಾತಕ ಬರ್ಸುವ ಕ್ರಮು ಹಿಂದೂ ಸಂಪ್ರದಾಯಲಿ ಉಟ್ಟು; ಹಾಂಗಾಗಿ ಈ ಪದ್ದಿಷ್ಟ ನಮ್ಮ ಗೌಡ ಜಾತಿಲಿ ಸಾ ಬೆಳ್ದ್ ಬಂದುಟು. ಬರೀ ಭಾರತಲಿ ಮಾತ್ರ ಅಲ್ಲ, ಬೇರೆ ದೇಶಗಳ್‌ಲಿ ಸಾ ಭವಿಷ್ಯನ ತಿಳ್ ಕಂಬಕ್ಕಾಗಿ ಗ್ರಹ ಜೋತಿಷ್ಯದ ಮೊರೆ ಹೋದವೆ. ಆದರೆ ಜ್ಯೋತಿ ಶಾಸ್ತ್ರಲಿ ಒಮ್ಮತ ಇಲ್ಲೆ, ಹಾಂಗೂ ಹಲವಾರ್ ಪದಿಷ್ಟಗ ಕೂಡಾ ಒಳೊ.



"ಎಲ್ಲದಕೂ ಬೆಲೆ ಏರ್ದ ಈ ಕಾಲಲಿ ವೋಟಿಗೂ ಜಾಸ್ತಿ ರೇಟ್ ಹೇಳೊಕುಂತೊಳೆ; ನೀವೆನೇಳ್ರಿ..."?

ಹುಟ್ಟದ ಸಮೆಲಿ ಇದ್ದ ಆಕಾಶ ಕಾಯಗಳ ಸಾಪೇಕ್ಷ ವಿನ್ಯಾಸದ ದಾಖಲೇ ಜಾತಕ. ಇದರ ಆದಾರದ ಮೇಲೆ ಕೂಸು ಒಳ್ಳೆ ನಕ್ಷತ್ರಲಿ ಹುಟ್ಟಿಟು ಒಳ್ಳೆದಾದ್ದೆ, ಕೆಟ್ಟ ನಕ್ಷತ್ರಲಿ ಹುಟ್ಟಿಟು ಕೆಟ್ಟದಾದ್ದೆ, ಹೀಂಗೆಲ್ಲ ಲೆಕ್ಕಾಚಾರ ಹಾಕಿವೆ. ಗ್ರಹಗಳ್‌ಂದಾಗಿ ಬಾವ ದೋಸಗಳಿಗೆ ಪರಿಯಾರ ಕೂಡಾ ಉಟ್ಟು. ಅದರ ಜಾತಕ ಬರಿಯುಂವ ತೇಳ್ರಿ-ಜೋಯ್ಸ ಹೇಳ್ದ್, ತಾನೇ ಪರಿಯಾರ ಕೂಡಾ ಮಾಡ್ದೆ. ಅದಿಕೆ ಬೇಕಾದಸ್ಟ್ ಕಾಣಿಕೆ, ದಕ್ಷಿಣೆತ ವಸ್ಲ್ ಮಾಡ್ದೆ, ಅವನ ಹೊಟ್ಟೆ ತುಂಬಿದೆ, ಸಂಸಾರಕ್ಕೂ ಉಂಬಕೆ ಬೇಕಸ್ಟ್ ಆದೆ.

ಮನೆಗಳ್ಲಿ ಏನಾರ್ ಕಷ್ಟ ನಷ್ಟ, ತೊಂದರೆಗ ಬಂದೇ ಬಂದವೆ; ಆಗ ಹೆಚ್ಚಿನ ಜೆನ ಜೋಯ್ಸನ ಹಕ್ಕಲೆ ಹೋದವೆ. ಇವನ ನೋಡ್ದ ಕೂಡ್ಲೆ ಅಂವ ಅಂದಾಜಿ ಮಾಡ್ದೆ ! ನಿನ್ನ ಮನೆಲಿ ಒಂದು ಜೀವಹಾನಿ ಆಗುಟು, (ದನೋ, ನಾಯೋ, ಕೋಳಿ ಸತ್ತಿರಿಕೂ ಸಾಕ್) ಸನಿ ದೊಸ ಉಟ್ಟು, ಶಾಂತಿ ಮಾಡ್ಸದೆ ಇದ್ದರೆ ಮನೆವರ ಜೀವಕ್ಕೂ ಹಾನಿ ಉಟ್ಟು! ಹೀಂಗೆ ಹೇಳ್ಕನ ಇಂವ ಕೆಬಿ ನೆಟ್ಟಂಗೆ ಮಾಡಿ ಆಲ್ಸಿ, ಹೆದ್ರಿ ಶಾಂತಿ ಮಾಡ್ಸಿದೆ. ದುಡ್ಡುನು ಸಾಕಸ್ಟ್ ಕರ್ಚಾತ್; ಜೋಯ್ಸನ ಹೊಟ್ಟೆ ತುಂಬಿದೆ. ಜೋಯ್ಸ ಎಲ್ಲಾ ಸರಿ ಮಾಡಿಟು ಇನ್ನ್ ನಂಗೆ ಯಾವ ಬಂಗ ಇರ್ಕಿಲೆಂತೇಳಿ ಇಂವ ಮನ್ಸ್‌ಲಿ ಕುಶಿ ಪಟ್ಟ್‌ಕಣ್ದೆ.

ಏನಾರ್ ಒಂದು ಅಪಘಾತ; ಬಸ್ಸ್ ಅಪಘಾತತೇ ತಕಮ್ಮೊನೊ, ಆದರೆ ಅದಿಕೆ ಕಾರಣ ಗ್ರಾಚಾರತ ನಂಬುವ ಜೆನ ಕಮ್ಮಿ ಇಲ್ಲೆ. ಬಸ್‌ನ ಯಂತ್ರದ ತೊಂದರೆನೊ, ಡ್ರೈವರ್‌ನ ತೊಪ್ಪೊಂತೇಳಿ ವಿಚಾರ ಮಾಡೊವು ಕಮ್ಮಿ. ಒಂದ್ ವೇಳೆ ಬಸ್ ಬಿದ್ದದ್ ಯಂತ್ರದ ತೊಂದರೆಂದತ ನಂಬಿರೂ, ಅದರ್ಲಿದ್ದ ಜೆನಗ ಸತ್ತದ್ ಅವರವರ ಗ್ರಾಚಾರಂದಾಗಿ! ಒಂದು ಗೂಡೆ ಮೂಲ ನಕ್ಷತ್ರಲಿ ಹುಟ್ಟಿರೆ ಅದ್ ಎದುರ್ಸಕಾದ ಸಮಸ್ಯೆ ಎಷ್ಟೊ. ಜಾತಕಲಿ ಕುಜ ದೋಸ ಇದ್ದರೆ ಮೊದುವೆ ಆಕೆ ಹಿಂದೆ ಮುಂದೆ ನೋಡ್ವ ಜೆನ ಎಷ್ಟೋ; ಇಂತ ಸಂದ್ರಪಗ ಜೀವನಲಿ ಬಾಳ ಬಂದವೆ.

ನಮ್ಮ ಜೀವನದ ಎಲ್ಲ ಆಗು ಹೋಗುಗಳ ಒಳ್ಳೆದ್ ಕೆಟ್ಟದ್, ಎಲ್ಲಾ ಗ್ರಹಗಳ್‌ಂವಳೇ ನಿಯಂತ್ರಿತ ಆದವೆತೇ

ಸಂಬೊನೊ. ಸಾದಾರ್ಣ ಬರಿವ ಜಾತಕಗಳ್ಲಿ ಶೇ. ೮೦ ತೊಪ್ಪುಗಡ; ಆಂದರೆ ಹುಟ್ಟಿದ ಹೊತ್ತ್ನ ಸರಿ ಆಗಿ ದಾಖ್ಲೆ ಮಾಡದರ್‌ಂದಾಗಿ ಆದ ತೊಪ್ಪು ಲೆಕ್ಕಾಚಾರ. ಆ ತೊಪ್ಪು ಲೆಕ್ಕಾಚಾರದ ಪಲಾ ಪಲಗಳ್ನೇ ನಂಬಿ ಪರಿಯಾರ ಮಾಡೊವ್ಕೆ ಎಂತ ಪಲ ಸಿಕ್ಕಿದ್ಯೊ! ಇನ್ನ್ ಒಳ್ದ ಶೇ. ೨೦ ಸರಿ ಆದ ಜಾತಕಗಳ್ನೇ ತಕಂಡ್ರೂ ಎಷ್ಟೋ ಜ್ಯೋತಿ ವರ್ಸ ದೂರ ಇರ್‍ವ ಗ್ರಹಗ ನಮ್ಮ ಮೇಲೆ ಪ್ರಬಾವ ಬೀರ್‍ವುಲೆತ ವಿಜ್ಞಾನಿಗ ಹೇಳಿವೆ. ಆದರೂ ಕೂಡಾ ಚೆಂದ್ರ ಸೂರ್ಯ ಬೂಮಿನ ಮೇಲೆ ಪ್ರಬಾವ ಬೀರುವ ಹಾಂಗೆ, ಒಳ್ದ ಆಕಾಶ ಕಾಯಗ ಸಾ ಯಾಕೆ ಬೀರಿಕೆ ಆಗದ್? ನಾವು ಕೆಟ್ಟ ಗ್ರಹಗತ ನಂಬುವ ಮಂಗಳ, ಶನಿ ಈ ಗ್ರಹಗ ಯಾಕೆ ಕೆಟ್ಟದ್ ಮಾಡಿಕೆ ಆಗದ್‌ತ ಕೇಳೊವು ಕೂಡಾ ಒಳೊ. ಆದ್ರೂ ಈ ಗ್ರಹಗ ಮೊಯಿಂಸರ ಕೊಲ್ಲುವೊ, ಬಸ್‌ನ ಬೀಳ್ಸುವೊ, ಒಬ್ಬ ವಿದ್ಯಾರ್ಥಿನ ಪೇಲ್ ಮಾಡುವೊ ಇಲ್ಲರೆ ಪಾಸು ಮಾಡುವೊತ ನಂಬುದು ಹೇಂಗೆ?

ಹಾಂಗರೆ ಒಂದು ಕೆಲ್‌ಸ ಮಾಡ್‌ಕನ ಒಳ್ಳೆ ಮೂರ್ತ ನೋಡದೆ ಮಾಡಿಕೆ ಆಗದ್‌ಂತೆಂಳ್ವ ಪ್ರಶ್ನೆ ಎದ್ದದೆ, ಇದರ ನಾವು ಒಂದು ಸತ್ಸಂಪ್ರದಾಯ ತೇಳ್‌ವಂಗೆ ಪಾಲ್ಸೊಕು. ದಿನಾ ದೇವ್ರುಗೆ ಕೈ ಮೊಗ್ವವೆ, ಗುರುಗಳ್ನೊ, ಹಿರಿಯರ್‍ನೊ ಕಂಡರೆ ನಮಸ್ಕಾರ ಮಾಡಿವೆ. ನಮ್ಮ ಆಯ್ಯಪ್ಪ ಒಳ್ಳೆದಾಗಲಿತ ಆಶೀರ್ವಾದ ಮಾಡಿವೆ, ಈ ಸಂಪ್ರದಾಯಗ ನಮ್ಮಲ್ಲಿ ಒಳ್ಳೆ ಬಾವನೆಗಳ ಉಂಟು ಮಾಡ್ವೆ. ಧೈರ್ಯಂದ ಕುಶಿಂದ ಕೆಲ್‌ಸ ಮಾಡಿಕೆ ಆದೆ. ಹಾಂಗೇ ಒಂದು ಒಳ್ಳೆ ಕೆಲ್‌ಸ ಸುರು ಮಾಡ್ಕನ ನಕ್ಷತ್ರ ನೋಡಿ ಸುರು ಮಾಡ್ರೆ ಕಂಡಿತ ಆದೆಂತೇಳ್ವ ಧೈರ್ಯ ಬಂದದೆ; ಹುರ್ಪುಲಿ ಕೆಲ್‌ಸ ಮಾಡಿಕೆ ಆದೆ. ಅಷ್ಟೇ ಹೊರ್ತ ಮೊಯಿಂಸನ ಪಾಪ ಪುಣ್ಯಗಳ ಲೆಕ್ಕ ಇಸಿ ಅವಂಗೆ ಒಳ್ಳೆ ಕೆಟ್ಟ ಪಲ ಕೊಡ್ವ ಹಾಂಗೂ ಅವನ ಬವಿಷ್ಯ ನಿಗಂಟ್ ಮಾಡ್ವ ಯಾವ ಅತಿ ಮಾನುಷ ಶಕ್ತಿ ಕಂಡಿತಾ ಇಲ್ಲೆ; ಹಾಂಗೆ ಉಟ್ಟುಂತಾದರೆ ಮೊಯಿಂಸನ ಬುದ್ದಿ ಶಕ್ತಿಗೆ ಪ್ರಯತ್ನಕ್ಕೆ ಏನೂ ಅರ್ಥ ಇಲ್ಲೆತಾತೆಲೆ! ನಮ್ಮ ಹಿಂದೆನವರ ಖಗೋಳ ಜ್ಞಾನ ಈ ವಿಜ್ಞಾನ ಯುಗಲಿರ್‌ವ ನಾವ್‌ಗೆ ಆಶ್ಚರ್ಯ ಹುಟ್ಟಿಸಿದೆ. ಆಕಾಶದ ಲೆಕ್ಕ ಇಲ್ಲದಸ್ಟ್ ಕಾರ್ಯಗಳ ಬಗ್ಗೆ ಶೋಧನೆಗ ಆಕಂಡೇ ಒಳೊ. ಈ ಬಗ್ಗೆ ವೈಜ್ಞಾನಿಕ ತಿಳ್ವಳಿಕೆ ಪಡ್ಕಂಬೊದು ಬುಟ್ಟ್ ಗ್ರಾಚಾರದ ಬಗ್ಗೆ ತಲೆ ಕೆಡ್ಸಿಕಂಬೊದು ಜೀವನದ ಕಠೋರ ಸತ್ಯಗಳ ಎದುರಿಸಿಕೆ ಆಗದಂತ ಪಲಾಯನ ವಾದಂತೇಳಕ್.

---

## ಹೆಡ್ಡ

ಶಾಲೆ ಕಾಲೇಜಿಲಿ ಕಮ್ಮ ಕಲಿಯಕೆ ಬೊಡ್ಡ
ನೋಡಿರೆ ಪೊರ್ಲಟ್ಟ್ ಬೆಳ್ಸಿ ಇಂವ ಗಡ್ಡ
ಗೂಡೆಗ ಆಂವನೊಟ್ಟಿಗೆ ಬಾಳ ಪ್ರೀ...
ಕರ್ತೊರ್ನಮ್ಮ ಗೂಡೆ, ಇವನ ಒಳಗೆ ಬನ್ನಿರೀ...

## ಸ್ವಜ್ಞಾನ

ಕೂಸಿಗೆ ಹೇಳ್ತವ್ಮ ಇವು ನಿನ್ನ ಅಪ್ಪ
ಹಾಂಗೆತ ಹೇಳ್ರೆ ಅವಂಗೇನ್ ಗೊತ್ತ್ ಪಾಪ
ಈಗವಂಗೆ ಹುಟ್ಟಿಟು ಪೊರ್ಲ್ನ ಕೂಸು
ಗೊತ್ತಾತೀಗ ಇದೇ, ಅಪ್ಪ ಕೂಸ್‌ನ ಸರ್ಕಸ್.

ಎನ್. ಕೆ. ದಯಾನಂದ, ಕನಕಮಜಲು

ಸಾಹಿತ್ಯ ಲೋಕದ ಕ್ಯಾತಿ ಪುರ್‌ಸ

# ಪ್ರೊ॥ ಕೋಡಿ ಕುಶಾಲಪ್ಪ ಗೌಡ್ರು

—ಪಿ. ಜಿ. ಅಂಬೆಕಲ್, ಚೆಟ್ಟಳ್ಳಿ



ತಮಿ:ಳ್ ತಲೆಗಳ ನೊಡುಲಿ ಕನ್ನಡದ ತೂತ್ತೂರಿನ ಇಂದ್ ಉರ್‌ಗ್‌ತ್ತಾ ಇಗೊವು ನಮ್ಮ ಪ್ರೊ॥ ಕೋಡಿ ಕುಶಾಲಪ್ಪಗೌಡ್ರು. ಆಕಾಶಕ್ಕೆ ಗುರಿ ಇಸಿರೆ ಮರಕ್ಕಾರೂ ತಾಂಗುದುಂತೇಳ್ವ ದೋರಣೆಂದ ಪ್ರೊ॥ ಕೋಡಿಯವರ ಮುಂದೆ ತಂದೊವ್, ಅವರ ದೊಡ್ಡಣ್ಣ ಕೋಡಿ ಮಲ್ಲಪ್ಪ ನೊವು "ಯಾವ ಕ್ಲಾಸ್‌ಲಿಯಾರ್ ಪೇಲಾದರೆ ಅಲ್ಲಿಗೆ ನಿನ್ನ ಶಾಲೆನ ನಿಲ್ಸುದು"ಂತೇಳ್ದ ದೊಡ್ಡಣ್ಣನ ಕಷ್ಟನ ಕಮ್ಮಿ ಮಾಡಿಕೆ ನಾ ಪರೀಕ್ಷೆಲಿ ಪೇಲಾದರೂ ಆಗಿದ್ದರೆ ದೇಪ್ರೆಂತ ನ್ಯೆನ್ಸಿಕಂಡಿದ್ದೊವು ಇಂದ್ ಒಂದು ವಿಶ್ವವಿದ್ಯಾನಿಲಯುದ ಕನ್ನಡ ವಿಭಾಗದ ಮುಖ್ಯಸ್ತ ಆಕಂಡ್ ಇರ್ದು ನಮ್ಮ ಜನಾಂಗಕ್ಕೇ ಒಂದು ಹೆಮ್ಮೆ.

ಪ್ರೊ॥ ಕೋಡಿಯೊವು ತಾ॥ ೨೦-೫-೧೯೩೧ರಲ್ಲಿ ಮಡಿಕೇರಿ ತಾಲೋಕ್‌ನ ಪೆರಾಜೆಲಿ ಕೋಡಿ ಕೃಷ್ಣಪ್ಪ ಮತ್ತೆ ಕೋಡಿ ಗೌರಮ್ಮನವರ ಸುಪುತ್ರ ಆಗಿ ಹುಟ್ಟಿದೊ. ಇವು ಪೆರಾಜೆ ಮತ್ತೆ ಸುಳ್ಯಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಶನ ಮುಗ್ಸಿ, ಪುತ್ತೂರು 'ಬೋರ್ಡ್' ಹೈಸ್ಕೂಲ್‌ಲಿ ಎಸ್. ಎಸ್. ಎಲ್. ಸಿ.ವರೆಗೆ ಓದಿದೊ. ಮಡಿಕೇರಿ ಗೌರ್ಮೆಂಟ್ ಕಾಲೇಜ್‌ಲಿ ಇಂಟರ್‌ಮೀಡಿಯೇಟ್ ಓದಿದ ಇವು ತಮ್ಮ ಹೆಚ್ಚಿನ ವಿದ್ಯೆನ ತಮಿಳ್‌ನಾಡ್‌ಲಿ ಪಡ್ದೊ. ಮದ್ರಾಸ್‌ನ ಪ್ರೆಸಿಡೆನ್ಸಿ ಕಾಲೇಜ್‌ಲಿ ಬಿ.ಎ. ಆನರ್ಸ್ ಮತ್ತೆ ಎಂ.ಎ.ನ ಫಸ್ಟ್‌ಕ್ಲಾಸ್‌ಲಿ ಪಾಸ್‌ಮಾಡ್ದೊ. ಆಗನ ಕಾಲಲಿ ನಮ್ಮ ಜನಾಂಗಲೇ ಇವು ಸ್ನಾತಕೋತ್ತರ ಪದವಿ ಪಡ್ದ ಎರಡ್ನೇ ವ್ಯಕ್ತಿಗಡ! ಆ ಮೇಲೆ ಅಣ್ಣಾಮಲೈ ವಿಶ್ವವಿದ್ಯಾನಿಲಯುಲಿ ಬಾಸಾವಿಜ್ಞಾನಲಿ ಡಿಪ್ಲೊಮಾ ಪಡ್ದ ಇವು ಅದೇ ವಿಶ್ವವಿದ್ಯಾನಿಲಯುಂದ ಎಂ. ಲಿಟ್ ಮತ್ತೆ ಪಿ.ಎಚ್‌ಡಿ. ಪದವಿಗಳ್ನೂ ಪಡ್ದೊಳೊ. ಇಸ್ಟುಮಾತ್ರ ಅಲ್ಲದೆ ಇಂಗ್ಲೆಂಡ್‌ನ ಮೇಂಚೆಸ್ಟರ್ ವಿಶ್ವವಿದ್ಯಾನಿಲಯುಲಿ ಒಂದು ವರ್ಸ ಬಾಸಾವಿಜ್ಞಾನಲಿ ವಿಶೇಸ ಅಧ್ಯಯನ ಮಾಡ್ದ ಕೀರ್ತಿ ಇವರ್‌ದ್.

**'ಗೌಡ ಕನ್ನಡ' ಬಾಸೆನ ಹೊರದೇಶದ ಬಾಸಾ ವಿಜ್ಞಾನಿಗಳಿಗೆ ಪರಿಚಯು ಮಾಡಿ, ಹೊರ ದೇಶದವು ಕೂಡಾ ನಮ್ಮ ಬಾಸೆನ ವೈಶಿಷ್ಟತೆನ ಮೆಚ್ಚಿಕಂಬಂಗೆ ಮಾಡ್ದ ಕೀರ್ತಿ ಪ್ರೊ॥ ಕೋಡಿ ಕುಶಾಲಪ್ಪ ಗೌಡ್ರುದ್. ಇವರ ಸಾಹಿತ್ಯ ಸೇವೆ ಎಸ್ಟ್ ಆಗಾಧಂತೇಳ್ರೆ ಇವು ನಮ್ಮ ಜನಾಂಗದ ಒಂದು ಅಮೂಲ್ಯ 'ರತ್ನ'**

೧೯೫೫ರಲ್ಲಿ ಮಿತ್ತಮಜಲ್ ಎಳ್ಯಣ್ಣಗೌಡ್ರ ದೊಡ್ಡ ಮಗ ಕಮಲ ತೇಳವರ ಮೊದುವೆ ಆಗಿ, ಮೂರು ಹೆಣ್ಣ್ ಮಕ್ಕಳ ಪಡ್ದೊ. ಈಗಳೇ ಇಬ್ಬರ ಸ್ನಾತಕೋತ್ತರ ಪದವೀಧರೆಗಾಗಿಮಾಡಿ, ಆಕೇರಿ ಮಗಳ್ನ ಓದ್‌ಸ್‌ತ್ತಾ ಒಳೊ. ಮಿತ ಸಂಸಾರಲಿ ಹಿತ ಕಂಡ್‌ಕಂಡ್, ಆಡಂಬರ ಇಲ್ಲದೆ, ಸರಳತನ, ಸತ್ಯ, ನ್ಯಾಯು, ಧರ್ಮಂದ ನಡಿಯೋಕುಂತೇಳುವ ಗುರು ಹಿರಿಯುರ್‌ಂದ ಕಲ್ತ ಜೀವನದ ದೃಷ್ಟಿಂದ ಸಂತೃಪ್ತಿ ಜೀವನ ನಡ್‌ಸಿಕಂಡ್ ಬಂದವೆ.

ವಿದ್ಯಾಭ್ಯಾಸಕ್ಕೆ ಮದ್ರಾಸಿಗೆ ಹೋಗಿ ಸೇರ್ದ ಪ್ರೆಸಿಡೆನ್ಸಿಕಾಲೇಜ್‌ಲೇ ಕನ್ನಡದ ಅಸಿಸ್ಟೆಂಟ್ ಪ್ರೊಫೆಸರ್‌ಆಗಿ ೧೯೫೫ರಲ್ಲಿ ಚಾಕಿರಿಗೆ ಕಾಲಿಸಿದ ಪ್ರೊ॥ ಕೋಡಿಯೋವು ಮದನಪಲ್ಲಿ ಬೆಸೆಂಟ್ ಥಿಯೋಸೋಫಿಕಲ್ ಕಾಲೇಜಿಲಿ

ಕನ್ನಡ ಲೆಕ್ಚರ್ ಆಗಿ, ಅಣ್ಣಾಮಲೈ ವಿಶ್ವವಿದ್ಯಾನಿಲಯಲಿ ಬಾಸಾ ವಿಜ್ಞಾನದ ಲೆಕ್ಚರ್ ಹಾಂಗೂ ರೀಡರ್ ಆಗಿ ಕೆಲ್ಸ ಮಾಡ್ದೊ. ಈಗ ಮದ್ರಾಸ್ ವಿಶ್ವವಿದ್ಯಾನಿಲಯಲಿ ಕನ್ನಡ ಪ್ರೊಫೆಸರ್ ಮತ್ತೆ ಕನ್ನಡ ವಿಭಾಗದ ಮುಖ್ಯಸ್ಥ ಆಕಂಡ್ ೧೯೭೬ ರ್‌ಂದಲೇ ಸೇವೆ ಸಲ್ಲಿಸಿಕಂಡ್‌ಬಳದ್ ನಾವ್‌ಗೆ ಹೆಮ್ಮೆನ ಸಂಗ್ತಿ.

ಸುಮಾರ್ ಮೂರು ದಶಕಗಳ್‌ಂದ ಅಧ್ಯಾಪನದೊಟ್ಟಿಗೆ ಸಾಹಿತ್ಯ ಸೇವೆನೂ ಮಾಡಿಕಂಡ್ ಬಂದದಲ್ಲದೆ ಸುಮಾರ್ ಪುಸ್ತಕಗಳ ಇಂಗ್ಲಿಷ್ ಮತ್ತೆ ಕನ್ನಡಲಿ ಬರ್ದೊಳೊ. ನಮ್ಮ ಜನಾಂಗದ ಮನೆ ಬಾಸೆನ ಬಾಸಾ ವಿಜ್ಞಾನದ ರೀತಿಲಿ ವಿಶ್ಲೇಷಣೆ ಮಾಡ್ದ 'ಗೌಡ ಕನ್ನಡ' ತೇಳ್ವ ಇಂಗ್ಲಿಷ್ ಪುಸ್ತಕ ೧೯೭೦ರ್ಲಿ ಪ್ರಕಟ ಆಗುಟ್ಟು. ಕೊಡಗ್, ದಕ್ಷಿಣ ಮತ್ತೆ ಉ. ಕನ್ನಡ ಜಿಲ್ಲೆಗಳ ೧,೦೦೦-೧,೪೦೦ರ ವರೆಗೆನ ಕನ್ನಡ ಶಾಸನಗಳ ಆಧರಿಸಿದ 'ಕನ್ನಡ ವ್ಯಾಕರಣ'ತೇಳ್ವ ಇಂಗ್ಲಿಷ್ ಪುಸ್ತಕ ಬರ್ದೊಳೊ. ಶ್ರೀ ಅಗಸ್ತ್ಯಲಿಂಗಂ ತೇಳೊವರೊಟ್ಟಿಗೆ ಸೇರಿಕಂಡ್ ಇಂಗ್ಲಿಷ್‌ಲಿ 'ದ್ರಾವಿಡ ಭಾಷೆಗಳಲ್ಲಿ ವಿಭಕ್ತಿಗಳು'ತೇಳ್ವ ಪುಸ್ತಕನ ಸಂಪಾದಿಸಿಯೊಳೊ. 'ಕಂಬನ್' ತೇಳ್ವ ಇವರ ಇಂಗ್ಲಿಷ್‌ಂದ ಕನ್ನಡಕ್ಕೆ ಬಾಸಾಂತರ ಮಾಡ್ದ ಪುಸ್ತಕ. 'ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು' ಇದ್ ಶ್ರೀ ಕೆ. ಚಿನ್ನಪ್ಪಗೌಡ್ರೊಟ್ಟಿಗೆ ಸೇರಿ ಸಂಪಾದಿಸಿದ ಕೃತಿ. 'ಕನ್ನಡ ಭಾಷಾವಲೋಕನ' ಮದ್ರಾಸ್ ವಿಶ್ವವಿದ್ಯಾನಿಲಯು ಪ್ರಕಟ್ಸಿದ ಇವರ ಇತ್ತೀಚಿನ ಕೃತಿ. ಇಸ್ಟ್ ಅಲ್ಲದೆ 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ವಿವೇಚನೆ' ಮತ್ತೆ 'ಸಿಂಜಿನಿ' ತೇಳ್ವ ಸಾಹಿತ್ಯ ಲೇಖನಗಳ ಸಂಗ್ರಹ ಈ ಎರ್ಡ್ ಪುಸ್ತಕಗ ಪ್ರಿಂಟ್ ಆಕಂಡ್ ಉಟ್ಟು. ಸುಮಾರ್ ಐವತ್ತಕ್ಕೆ ಹೆಚ್ಚ್ ಸಂಶೋಧನಾ ಲೇಖನಗ, ಹನ್ನೆರ್ಡ್ ಕಥನಗ, ಹತ್ತ್ ಸಾಹಿತ್ಯ ಪ್ರಬಂಧಗ, ಮತ್ತೆ ಅನೇಕ ಲಘು ಬರಹಗ ಈಗಾಗಲೇ ಪ್ರಕಟ ಆಗುಟ್ಟು.

ಕನ್ನಡ ಬಾಸೆಗೆ ಅನ್ವಯಿಸಿ ಪೂರಾ ಅಧ್ಯಯನ ಮಾಡ್ದು, ವಿದ್ಯಾರ್ಥಿಗಳಿಗೆ ಬೋಧನೆ ಮತ್ತೆ ಮಾರ್ಗದರ್ಶನ ಮಾಡ್ದು ಈಗನ ಇವರ ಗುರಿ. ಈಗಳೇ ಇವರ ಮಾರ್ಗದರ್ಶನಲಿ ಆರ್ ಜೆನ ವಿದ್ಯಾರ್ಥಿಗ ಪಿ.ಎಚ್.ಡಿ ಪ್ರಬಂಧಗಳ ಬರ್ದ್ ಆ ಪದವಿನ ಪಡ್ದೊಳೊ. ೧೯೮೧ರ್ಲಿ ಮಡಿಕೇರಿಲಿ ನಡ್ದ ಅಖಿಲ ಭಾರತ ೫೪ನೇ ಕನ್ನಡ ಸಾಹಿತ್ಯ ಸಮ್ಮೇಳನಲಿ 'ಕೊಡಗಿನ ಹಿರಿಮೆ ಗೋಷ್ಠಿ'ನ ಉದ್ಘಾಟನೆ ಮಾಡ್ದ ಶ್ರೇಯಸ್ಸ್ ಇವರ್ದ್. ಇವು ಕನ್ನಡ ಬಾಸೆ ಮತ್ತೆ ಸಾಹಿತ್ಯಕ್ಕೆ ನೀಡ್ದ ಮಹತ್ವದ ಕೊಡುಗೆಗಾಗಿ ಇತ್ತೀಚೆಗೆ ಕಂಚಿ ಕಾಮಕೋಟಿ ಪೀಠದ ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಜಯೇಂದ್ರ ಸರಸ್ವತಿಯೊವು ಚಿನ್ನದ ಪದಕನ ಕೊಟ್ಟ್ ಸನ್ಮಾನ ಮಾಡಿಯೊಳೊ. ಇದ್ ಇವರ ಸಾಹಿತ್ಯ ಸೇವೆಗೆ ಕಳಸ ಇಸಿದಾಂಗೆ, ಅಲ್ಲದೆ ಇಡೀ ನಮ್ಮ ಜನಾಂಗಕ್ಕೆ ಕೀರ್ತಿ ತಂದ ವಿಚಾರ. ಅಂತಸ್ತ್‌ನ ಹಾಂಕಾರ, ಅಧಿಕಾರದ ದೊಡ್ಡಸ್ತಿಕೆ ಇಲ್ಲದೆ ನಮ್ಮ ಜನಾಂಗದವರೊಟ್ಟಿಗೆ ಎಲ್ಲಿ ಸಿಕ್ಕಿರೂ ನಮ್ಮ ಮನೆ ಬಾಸೆಲೇ ಮಾತಾಡ್‌ಸುವ ಬಾಸಾಬಿಮಾನಿ, ಜನಾಂಗ ಪ್ರೇಮಿ ಪ್ರೊ|| ಕುಶಾಲಪ್ಪಗೌಡ್ರ್‌ಂದ ನಮ್ಮ ಮನೆ ಬಾಸೆನ ಆನೆಂಕದ ಬಾಸಾ ವಿಜ್ಞಾನಿಗ ಕೂಡಾ 'ಗೌಡ ಕನ್ನಡ'ಂತ ಗುರ್ತುಸುವಾಂಗೆ ಆಗುಟ್ಟು. ಇನ್ನೂ ಇವರ್‌ಂದ ತುಂಬಾ ಒಳ್ಳ ಪುಸ್ತಕಗ ಹೊರಬಂದ್ ಕನ್ನಡದ ಮತ್ತೆ ನಮ್ಮ ಜನಾಂಗದ ಕೀರ್ತಿ ಪತಾಕೆನ ಬಾನದೆತ್ತರಕ್ಕೆ ಹಾರ್ಸುವಂಗಾಗಲಿ.

---

## ನಡ್ಕ

ಗೂಡ್ ಬೀರಿ ಹೆಣ್ಣ್‌ನ
ಕುದುರೆ ನಡಿಗೆ
ನನ್ನದೆನ ನಡ್‌ಗಿಸಿತ್
ಸಳಿ ಬುಟ್ಟ್ ಬೆವುರಿಳಿಸಿತ್.

—ಮಾಧವ ಪದೇಲ

---

* ಬೇರೆವರ ತೊಪ್ಪುನ ನೋಡ್‌ಕನ ಪ್ರತಿ ಒಬ್ಬನ ಕಣ್ಣ್‌ಗ ಹದ್ದ್‌ನ ಕಣ್ಣ್‌ನಂಗೆ ಇದ್ದದೆ.

# ಇಳ್ದ್ ಬಾ...

ಮಳೆರಾಯ ನೀ ಒಮ್ಮೆ ಇಳ್ದ್ ಬಾ
ಕನ್ನಡಾ ನಾಡ್‌ಲಿ ಕುಣ್ದ್ ಬಾ
ಹಸ್‌ರ್ ಬೆಳೆ ಸೀರೆನಾ ಉಡ್ಸ್ ಬಾ
ಬರಗಾಲ ರೋಗಾನ ತೊಳ್ದ್ ಬಾ
ಸುಭಿಕ್ಷೆ ಹೊಳೆನಾ ಹರ್ಸ್ ಬಾ.

ನಮ್ಮ ಕೃಷಿ ಜೀವನವೆ ನಿನ್ನನವಲಂಬಿಸಿಟು
ನಿನ್ನ ಹಂಬಲಿಸಿಕೆಂಡ್ ಕಾದ್ ಕುದ್ದೊಳೊ ನಾವು
ನೀ, ನಮ್ಮ ಬುಟ್ಟರೆ ಮತ್ತೆ ಗತಿಯೇನ್ ?
ಒಮ್ಮೆ ಬಂದ್ ಬುಡುಯಾ ಈ ನಮ್ಮ ನಾಡಿಗೆ.

ಕೊಳವೆ ಬಾವಿನ ನೀರ್ ಆರಿ ಹೋಗ್‌ತಾ ಬಾತ್
ಹಳ್ಳ ಕೆರೆಗಾ ನಿನ್ನ ಗ್ಯಾನ ಮಾಡಿಕಂಡೇ ಒಳೊ
ಜೀವ ರಾಶಿಗ ಎಲ್ಲಾ ನಿನ್ನ ಕಾದ್ ಕಂಡೇ ಒಳೊ
ಬಾವಿ ನೀರ್‌ನ ಕುಡ್ದ್ ಉಸ್ರು ಎಳೆವಾ ನಾವು
ಎಷ್ಟ್ ಕಾಯಕೋ ನಿನ್ನ ಅವತಾರಕ್ಕೆಂತಾ.

ಸೋತ್ ಹೋದೊ ಇಂದ್ ಕೃತಕ ಮಳೆನಾ ಕಾದ್
ಗೊತ್ತಾಗದೇ ಹೋತ್ ನಿನ್ನ ನೋಡ್‌ವ ದಾರಿ
ಶರಣ್ ಹೋಗದೆ ನಿನ್ನ, ಮತ್ತೆ ವಿಧಿಯೊಂದಿಲ್ಲೆ
ದಯ ತೋರ್ಸ್‌ಯಾ ಒಮ್ಮೆ ಮಳೆನ ಕಾಂಬ ಭಾಗ್ಯ.

ಮಳೆರಾಯ ಇನ್ನೊಮ್ಮೆ ಇಳ್ದ್ ಬಾ
ಮತ್ತೆ ಹೊಸ ಜೀವನನ ತುಂಬ್ ಬಾ
ಜೀವ ರಾಶಿಗಳ ಪೂರ ಉದ್ಧರ್‌ಸ್ ಬಾ
ನಾವ್ಗೆಲ್ಲಾ ಹೊಸ ಶಕ್ತಿ ಕೊಡಿಕೆ ಬಾ
ಕನ್ನಡದ ನಾಡ್‌ನ ಉಳ್ಸ್ ಬಾ.

— ತೀರ್ಥರಾಮ ಕುತ್ಯಾಳ

# ನಂಗೇಕೆ ಈ ಕರೆ

ಸಾವಿರಾರ್ ಬಾಸೆ ಈ ಪ್ರಪಂಚಲಿ ಗಡ
ಅದರ್ಲಿ ನಮ್ಮದ್ ಒಂದು ಬಾಸೆ ಗಡ;

ನಾನಿರುದು ನೋಡಿ ಅಲ್ಲಿ–ಆ ಹೊಳೆಕರೆ
ಕೆಲ್ಸ ನಂದ್ ಇಲ್ಲಿ ನೋಡಿ–ಈ ಗದ್ದೆ ಮೇಲೆ.

ಹರ್ಡಿನೆ ಗೊಬ್ಬರ–ಬಿತ್ತಿನೆ ಬೀಜ
ಹೂಡ್ನೆ–ನಟ್ಟನೆ–ಕೊಯಿದನೆ–ಹೊತ್ತನೆ;

ಹೊಡ್ಡನೆ ಕಳಲಿ ತೆಗ್ದನೆ ಬತ್ತ
ಕಟ್ಟನೆ ಅಟ್ಟದ ಕಡಿಕೆಲಿ ತುಂಬಾ.

ಇದ್ ಬುಟ್ರೆ ಮತ್ತೆ ನಂಗಿನ್ನೇನ್ ಕೆಲ್ಸ?
ಹೊಳೆಗೋಗಿ ಮುಳ್ಗಿ ಹಿಡ್ದನೆ ಮೀನ್ ;

ಕಾಡಿಗೋಗಿ ಹೊತ್ತನೆ ವಾಟೆವ್ ಕಟ್ಟ್,
ಮಾಡ್ನೆ ಅದ್ರ್ಲಿ ಪೊಡ-ಗೊರ್ಗ್-ಗೋರಿ-ತಟ್ಟೆ.

ಮಳೆ ಬಾಕನ ಓಡ್ನೆ ಕೂಳಿ-ಪೊಡ-ಹೊತ್ಕಂಡ್
ಗೋರಿ ತುಂಬಾ ಮೀನ್ ತನ್ನೆ ಜೋರ್ ಸಳಿ ಹಿಡ್ಕಂಡ್ ;

ಕುದ್ದನೆ ಸುಟ್ಕಂಡ್ ಒಲೆ ಬುಡಲಿ ಮೀನ್
ಎದ್ದನೆ ಮತ್ತೆ ಬಿಸಿ ಹತ್ತ್ಕನ ಬೆನ್ನ್.

ಹಿಂಗೇ ಕಳ್ದದೆ ನೋಡಿ ನನ್ನ ಬಾಳ್
ಕುಶಿ ನಂಗೆ ಬಾರಿ ಈ ಗಾಳಿ ಮಳೆಗಾಲ.

ಹಿಂಗಿರ್ವ ನನ್ನನಾ ನೀವೇಕೆ ಪೀಡ್ಸಿರಿ ?
ಕತೆ ಬರಿ-ಪದ ಬರಿ–ಸೋಬಾನೆತೇಳಿ ;

ಅಯ್ಯೋ ದ್ಯಾವರೇ ನಂಗೇಕೆ ಈ ಕರೆ
ಬುಡಿ ನನ್ನ ಪಾಡಿಗೆ ನಾನಿದ್ದನೆ ಹಿಂಗೇ.

— ಪಿ. ಡಿ. ಬೋಪಯ್ಯ, ಬಲಮು

# ಆ (ಅ) ನಾಥೆ

—ಶ್ರೀಮತಿ ಕನಕ ಸಿ. ಅಂಬೆಕಲ್, ಚೆಟ್ಟಳ್ಳಿ

**ಕತೆ**

ಸುಮಂಗಲಾ ಟೀಚರ್‍ನ ಮನೇಲಿ ಕೂಸು ಮರ್ಗು ದು ಕೇಳ್ದಿಗಡಾಂತ ಹೇಳ್ವ ಸುದ್ದಿ ಇಡೀ ಸ್ಕ್ಯಾಪಿಗೇ ಪ್ರ ಚಾರ ಆತ್. ಹೌದಾ! ನಾವ್ಗೆ ಗೊತ್ತೇ ಆತ್ಲೆಲೆ! ನಲ್‌ವತ್ತ್ರರ ಹಕ್ಕಲೆ ಪ್ರಾಯ ಆದ ಟೀಚರ್ ಸಾಜ ಆಗಿ ದಪ್ಪ ಆಗ್‌ತಿದ್ದದರ ನೆನ್ನಿಕಂಡ್ ಏನೊ ಇರೊಕುತ ಅಂದೇ ಗೇನಮಾಡಿದ್ದೆತೇಳಿ ಕೋಕಿಲ ಕಿಲಿಗುಟ್ಟಿತ್. ಆದರೆ ಯಾರೊಟ್ಟಿಗೂ ಉಸ್‌ರೇ ಬುಟ್ಟತ್ಲೆ. ಕಂಡಾಂಗಲ್ಲ ಜೆನಂತೇಳಿ ಒಬೊಬ್ಬರ್‌ಂದ ಒಂದೊಂದು ರೀತಿ ಪ್ರತಿಕ್ರಿ ಯೆಗ ಹೊರ್‍ಟ್ವೊ. ಕಡೆಗೂ ದೇವ್ರ್ ಕಣ್ಣ್ ಬುಟ್ಟಿತ್‌ತ ವಯ್ಸಾದ ಹೆಡ್ಮಾಸ್ಟ್ರ ಕಣ್ ಮುಚ್ಚಿ ಹೇಳ್ದೊ. ಸುಕ್ಕ್ ಕಟ್ಟಿದ ಅವರ ಮೋರೆ ಹಣ್ ಸಡ್ಲಾತ್.

---

**ಇಪ್ಪತ್ತ್ ವರ್ಷದ ನಂತ್ರ ಸುಮಂ ಗಲಾ ಟೀಚರ್‌ಗೆ ಒಂದು ಪೊರ್ಲುನ ಗಂಡ್ ಕೂಸು ಹುಟ್ಟಿತ್. ಇದ್ಕಿಂತ ಮುಂದೆ ಮನೆ ಹಕ್ಕಲೆ ಇದ್ದ ಕೆಸ್ರ್ ತುಂ ಬಿದ ಕೆರೆಲಿ ಸಿಕ್ಕಿದ ತಬ್ಬಲಿ ಗೂಡೆ ತಾವರೆಗೆ ಟೀಚರ್ ಹೇಳ್ತ್, ನಿಂಗೊಬ್ಬ ತಮ್ಮ ಆಡಿಕೆ ಬಂದುಟುತ್ತೇಳಿ.**

---

ಸೂರ್‍ಯೋದಯದ ಸಮೆಲಿ ಸುಮಂಗಲಾ ಟೀ ಚರ್ ನಿತ್ಯ ಕರ್ಮಕ್ಕಾಗಿ ಪಳ ಪಳ ಹೊಳೆವ ತಾಂಮ್ರದ ಚೊಂಬುಲಿ ನೀರ್ ಹಿಡ್‌ಕಂಡ್ ಮನೆ ಹಿಂದೆ ಪರ್ಲಾಂಗ್ ದೂರ ಹೋದರೆ ಸಿಕ್ಕುವ ನಿರ್ಜನ ಜಾಗೆಗೆ ಹೊರ್ಟದ್ದೊ. ಹಕ್ಲಲೆ ಕೆಸ್ರ್ ತುಂಬಿದ ಕೆರೆನ ರೂಪ ಕಾಂಬ ಹೊಂಡ ಒಂದಿತ್ತ್. ಹುದಿ, ಎಮ್ಮೆ, ಕೋಣಗ ಮನ್ಸ್ ಬಂ ದಾಂಗೆ ಪಳ್ಳ ಬೀಳ್‌ವ ಜಾಗೆ ಅದಾಗಿತ್. ಹಕ್ಕಲ್ಹಕ್ಕಲೆ ಆದಾಂಗೆ ಕ್ಷೀಣ ಸೊರ ಒಂದು ಕರ್ಲ್ ಹಿಂಡ್‌ವ ಹಾಂಗೆ ಬೊಳ್‌ಪುನ ತಂಗಾಳಿಲಿ ಕೇಳಿ ಬಾತ್. ಬೇಗ ಬೇಗ ಹಜ್ಜೆ ಹಾಕಿ ಹತ್ರ ಹೋಗಿ ನೋಡ್ನನ ತಾವರೆನೇ ನಾಚಿ ಸುಮಾಂಗಿದ್ದ, ಎಳೆ ಸೂರ್ಯನ ಕಿರಣಕ್ಕೆ ಮತ್ತಷ್ಟ್ ರಂಗೇರ್‍ದ ಕೂಸ್ ಒಂದು ಬಾಯಿಬುಡ್ತಿತ್. ನೋಡಿ ಅವಕ್ಕಾದ ಟೀಚರ್‍ನ ಮಾತೃ ಹೃದಯ ತುಂಬಿ ಬಾತ್. ಈ ರೂಪಲಿ ಬಂದಾ ಚಿನ್ನಾಂತೇಳಿ ಬಂದ ಕೆಲ್ಸನ ಮರ್‍ತ್ ಆ ಚಂದನದ ಗೊಂಬೆನ ಆದಷ್ಟ್ ಎದೆಗೆ ಒತ್ತಿ ಹಿಡ್‌ಕಂಡ್ ಮನೆಕಡೆ ದಾವುಕಾಲ್ ಹಾಕಿದೊ.

ಆ ಕೂಸ್‌ನ ತುಂಬಾ ಜಾಗ್ರ್‌ತೆಂದ ಸಾಂಕಿದೊ. ಮಕ್ಕ ಇಲ್ಲದ ಪಾಪಿಂತೇಳ್‌ವ ಬೇಜಾರ ದೂರ ಆಗಿ ತಾನ್ ಅವ್ವತ ಹೇಳ್‌ಸಿಕಂಡೆಲೇತ ಅವರ ನರನಾಡಿಲಿ ಹೊಸ ಚೈತನ್ಯ ಉಕ್ಕಿಕೆ ಸುರಾತ್. ನಲ್ವತ್ತರ ಗಡಿ ದಾಟಿಕಿದ್ದ ಅವರ ಪ್ರಾಯ ಹಿಮ್ಮುಖ ಆಗಿ ಇಳ್ದ್ ಮೂವತ್ತೈದರ ಯವ್ವನನ ಹೊರ ಸೂಸಿಕೆ ಸುರಾತ್. ಅವರ ಯಜ್ ಮಾನ್ರ್ ಆಗಾಗ ಈ ಬಡವನ, ದೇವಿಗ ಇನ್ನ್ ಮರ್ತಾಂ ಗೆತ ತಮಾಸೆ ಮಾಡ್‌ತ್ತಿದ್ದೊ. ನಿಜಾಗಿ ನೋಡ್ರೆ ರಾಯರ್ ಕೂಡಾ ಅವರ ಪ್ರಾಯನ ಹಿಂದಕ್ಕೆ ನೂಕಿದಾಂಗೆ ಕಾಂಬೊ ತ್ತಿದ್ದೊ. ಅಪ್ಪ ಆದ ತುಂಬು ತೃಪ್ತಿ ಅವರ ಸ್ಲೇಟ್‌ನ ಬಣ್ಣನ ಮತ್ತಷ್ಟ್ ರಂಗೇರ್ಸಿದಾಂಗೆ ಕಾಂಬೊತ್ತಿತ್ತ್.

ಹುಣ್ಣಮೆ ಚಂದ್ರನಾಂಗೆ ಕೂಸು ಬೆಳಿಯತಿತ್ತ್. ಕೂಸು ಮರ್ಗರೆ, ನೆಗಾಡ್ರೆ ಈ ಅಪ್ಪ ಅವ್ವನ ಹೃದಯ ಸಂತೋಸದ ಹೊಳೆ ಆತಿತ್ತ್. ಸುರುನ ಸರ್ತಿಗೆ ಕೂಸ್ ಮಾ...ಂತ ತೊದ್‌ಲ್‌ಕನ ನಾವ್ ಇನ್ನೂ ಈ ಕೂಸ್‌ಗೆ ಹೆಸ್ರೇ ಇಸಿತ್ಲೆ; ಕೆಸ್‌ರ್‌ಲಿ ಸಿಕ್ಕಿದ ಕೂಸ್, ತಾವರೆ ಕೆಸ್‌ರ್‌ಲಿ ಹುಟ್ಟಿರೂ ಪೂಜೆಗೆ ಯೋಗ್ಯ; ಅದ್ದಂರ್‍ದ ನಮ್ಮ ಕಣ್ಮಣಿನ ತಾವರೇಂತೇಳಿ ಕರಿಯೋನೋತ ಹಾಂಗೇ ಕರಿಯಕೆ ಸುರ್‌ಮಾಡ್ದೊ. ಚಿನ್ನ, ರನ್ನ ದೊಟ್ಟಿಗೆ ತಾವರೇಂತೇಳ್‌ವ ಹೊಸ ಹೆಸ್ರ್ ಸೇರ್ಪಡೆ ಆಗಿ ಒಂದೆರ್‍ಡ್ ಸರ್ತಿ ಕೂಸ್ ಗಲಿಬಿಲಿ ಆತ್. ಕಡೆಗೂ ತನ್ನ ಅವ್ವನ ಬಾಯಿಂದ ಬಾವ ಈ ಮಧುರ ದೊನಿ ತನಿಗೇತ ಅರ್ಥ ಮಾಡ್‌ಕಂಡಗೆ ಪ್ರತಿಕ್ರಿಯೆ ತೋರ್ಸಿಕೆ ಸುರ್ ಮಾಡ್ತ್.

ಕೂಸ್‌ನ ಬುಟ್ಟ್ ಸಾಲೆಗೆ ಹೊರ್ಡ್‌ಕನ ಮನ್ಸ್‌ಗೆ ಬಾರೀ ಬೇಜಾರಾಗ್ತಿತ್. ಈ ಎಳೆ ಕಂದನ ಕೆಲ್ಸದ ಗೂಡೆಗೊಪ್ಪಿಸಿ ಹೋಕೊಳೆ; ಕೂಸ್– ಮರ್‍ಗರೆ, ಹಾಲ್ ಕುಡ್ಸದೆ ಇದ್ದರೆ, ಹೀಂಗೆ ನೂರೆಂಟ್ ಬೇಜಾರ್‍ನ ಹಚ್ಚಿಕಂಡ್ ಕೊರ್‌ಗ್ತಿದ್ದೊ. ಮಧ್ಯಾನ ಮನೆಗೆ ದಾವ್‌ಸಿ ಬಾತಿದ್ದೊ

ಹೌದು. ಈಗ ಅವರ ಕೂಸ್ ಅಯಸ್ಕಾಂತ ಕಬ್ಬಿಣನ ಆಕರ್ಷಿಸುವ ಹಾಂಗೆ ಆಕರ್ಷಿಸಿದೆ. ಕಾಲ್‌ನ ಗೆಜ್ಜೆನ ಗಿಲಿಗುಟ್‌ಸಿಕಂಡ್ ಮನೆ ತುಂಬಾ ಓಡಾಡುವ ಪುಟ್ಟ ಪಾದನ ನೆನ್ಸಿರೇ ಮನ್ಸ್ ಪುಳಕಗೊಂಡದೆ. ಹೊಳಿವ ಜೋಡಿ ಕಣ್ಣ್‌ಗ ನಕ್ಷತ್ರಮಾಲೆ ಬೂವಿಗಿಳ್ದ್ ಬಂದಾಂಗೆ. ಮರ್ದುವ, ನೆಗಾಡ್ವ ಆ ಮುಗ್ಧ ಕೂಸ್‌ನ ಮುದ್ದು ಮೋರೆ ಕಣ್ಣ್‌ಮುಂದೇ ತೇಲ್ದಾಂಗೆ ಆದು. ಓಡೋಡಿ ಬಾಕನ ತೆರ್ದ ಬಾಗ್ಲ್ ರಾಯ್ರ್ ಬಂದೊಳೋತ ಸಾರಿ ಹೇಳ್ದ್. ಹೋಟ್ಲ್‌ನ ನೀರಸ ಊಟಂದ ಬಡ್ತಿ ಹೊಂದಿ ಮನೆಲಿ ಮನದೇವತೆ ಹಾಂಗೂ ಮುದ್ದ್ ಕೂಸುನೊಟ್ಟಿಗೆ ಉಂಬೊದು ವರ್ಸ ಕಳ್ದ್‌ಟು. ಇಪ್ಪೊತ್ತ್ ವರ್ಸಗಂಳ್ದ್ ಮನ್ಸ್‌ನೊಳಗೇ ಮತಿಸ್ತ್‌ದ್ದ ದಾವಾನಿಲ ಸ್ಫೋಟ ಆಗದೆ ತಣ್ಣಂಗೆ ಆಗ್‌ಟು.

ಸುಮಂಗಲಾ ಟೀಚರ್ ಈಗೀಗ ತುಂಬಾ ಪೂರ್ಲ್ ಕಂಡವೆ. ಅದ್ ತೃಪ್ತಿಂದ ಆಗಿದರ್ತ ಇದ್ದರೂ ಹೆಣ್ಣ್‌ನ ಕೀಟ್ಲೆ ಮಾಡಿಕೆ ಏನ್ ವಿಶೇಷ! ನುಗೂ ಹೇಳಿಕಾಗದಾತ ರಾಯ್ರ್ ತಮಾಷೆ ಮಾಡ್ದೊ. ಗಂಡನ ಈ ತಮಾಷೆ, ಟೀಚರ್ನ ಎಚ್ಚರ್ಸಿತ್. ತಿಂಗಳ ಲೆಕ್ಕ ತಪ್ಪಾಗ್‌ಟು. ಎರ್ಡ್ ತಿಂಗಳೇ ಕಳ್ದ್ ಹೋಗ್‌ಟು; ಕೂಸ್‌ನೊಟ್ಟಿಗೆ ಸಮಯ ಕಳ್ಸದೇ ಗೊತ್ತಾತ್ಲೆ. ಹೊಸ ಮೊದೊಳಿಗೆನಾಂಗೆ ನಾಚಿದ ಹೆಣ್ಣ್‌ನ ಪ್ರೀತಿಂದ ಒಮ್ಮೆ ನೋಡಿ ಡಾಕ್ಟ್ರಕ್ಕಲೆ ಹೋಗಿ ಕರ್ಕಂಡೇ ಬಂದೊ; ಡಾಕ್ಟ್ರಂದ ನಿಜ ಸಂಗ್ತಿ ತಿಳ್ದ್ ಸೊರ್ಗಕ್ಕೆ ಕಿಚ್ಚಿಕೊಡುವ ಸನ್ನಾಹ ರಾಯ್ರ್‌ದ್.

ಆದರೆ ಸೂಕ್ಷ್ಮ ಮನ್ಸ್‌ನ ಟೀಚರ್ ಆತಂಕಕ್ಕೆ ಒಳಗಾದೊ. ನಾನಿನ್ನ್ ಅವ್ವ ಆಕಿಲೇತೇಳ್ವ ದೃಢ ನಿರ್ಧಾರ ಸಡ್ಲ್‌ಕನ ಅವರ ಮನ್ಸ್ ನೋವ್‌ನ ನಲಿವ್‌ನ ಸಂಗಮ ಆತ್. ತನ್ಗೆ ಕೂಸ್ ಆದರೆ ಮುಂದೆನಾಂಗೆ ತಾವರೆನ ಪ್ರೀತಿಸ್‌ಕೆ ಸಾಧ್ಯ ಉಟ್ವಾ? ಒಂದ್ ವೇಳೆ ಪ್ರೀತಿಸ್ದೇ ಹೋದರೆ ಆ ಕಂದನ ಗತಿ ಏನ್! ತಬ್‌ಲಿ ಮಕ್ಕಳ ಹರ್ದ್ ಮುಕ್ಕುವ ಚಿಕನಂದರ ಕಂಡಿದ್ದೊ. ಛೆ! ಇದೆಂತ ವಿಧಿನ ವಿಚಿತ್ರ ಆಟ, ಕಡೆಗೆ ಚಿಗ್‌ರೆಲೆ ಜಿಗಿಂಬ್ರೆ ಹೇಂಗೇತ ಒಂದು ಪ್ರಶ್ನೆನ ಗಂಡನ ಮುಂದೆ ಇಸಿದೊ. ಹೌಹಾರ್ದ ರಾಯ್ರ್ ಬಗೆ ಬಗೆಲಿ ಬುದ್ದಿ ಹೇಳ್ದೊ. ಈಗ ಬಂದ ನಿನ್ನ ಈ ತಾಯ್ತನ ನಮ್ಮ ಸುಕೃತದ ಫಲ. ತಾವರೆಗೊಂದು ತಮ್ಮ ಬಂದರೆ ಒಳ್ಳೆದ್ ತಾನೆ!?

ಆದರೂ ಟೀಚರ್ನ ಸುಪ್ತ ಮನ್ಸ್ ಘಾಸಿಗೊಂಡತ್. ಅವ್ವಾತೇಳ್ಸಿಕಂಬೊದು ಸಂತೋಷ ನಿಜ. ಹತ್ ಹದ್ನೈದ್ ವರ್ಸಕ್ಕೆ ಮುಂದೆ ಈ ಭಾಗ್ಯ ಬಂದಿದ್ದರೆ ಅದೆಷ್ಟ್ ಸಂಭ್ರಮ ಇತ್ತ್? ಈ ಇಳಿ ವಯ್ಸ್‌ಲಿ ನಾಚಿಕೇತ ಒಮ್ಮೆ ಕಂಡರೆ ತಾವರೆನ ನೆನ್ಪೇ ಜಾಸ್ತಿ ಕಂಗೆಡ್ಸದು. ಏನೊಂದೂ ತಿಳಿಯದ ಹಸ್‌ಳೆ; ಮುಂದೆ ಬೆಳ್ದ್ ದೊಡ್ಡದಾದ ಮೇಲೆ ನಾನ್ ಒಂದು ಜಾರಿಣಿನ ಮಗಳ್‌ತ ಕೀಳರ್ಮೆ ಬಾರದೆ ಪುರುಷಾಮೃಗದ ಆಕ್ರಮಣಕ್ಕೆ ಒಳ್‌ಗಾದ ಬಲಿಪಶುನ ಒಡ್ಲ್‌ಂದ ಮೂಡಿಬಂದ ಚಿಗ್ರ್. ತಾನ್ ಇಂತ ಅನಾಥ ಮೊನ್ನರ ಕುಲನ ಉದ್ಧಾರ ಮಾಡ್‌ವ ಮೂರ್ತಿ ಆಕ್‌ತ ಸದ್ಭಾವನೆ ಮೂಡ್ಸಿಕೆ ಸಾಧ್ಯ ಉಟ್ಟೊ?

ದಿನಗ ಜಾರಿ ಹೋದೊ, ತಿಂಗಗ ದಾವ್‌ಸಿ ಬಂದೊ, ಟೀಚರ್ಗೆ ಮಾತ್ರ ನಿಶಕ್ತಿ ಜಾಸ್ತಿ ಆಗ್ತಾ ಬಾತ್; ಅವರ ಯೋಚನೆ ಎಡೆಬಿಡದೆ ಹರಿಯುತ್ತಿತ್ತ್. ಇಂಜೆಕ್ಷನ್, ಮದ್ದ್, ಹಾಲ್, ಹಣ್ಣ್‌ಗ, ಗಂಡನ ಪ್ರೀತಿ ವಿಶ್ವಾಸ ಎಲ್ಲಾ ತಿರ್ಗ್ ಬಾಣದಾಂಗೆ ಕೆಲ್ಸ ಮಾಡ್ತ್; ಕಣ್ಣ್‌ಗ ಗುಳಿಬಿದ್ದ್ ಸುತ ಕಪ್ಪುಗೆರೆ ಮೂಡ್ತ್. ಡಾಕ್ಟ್ರ ಮಾತ್ರ ನಿಧಾಸ ಆಗಿ ಬೊಸ್‌ರಿ ಆದ್ದಕ್ಕೆ ಹೀಂಗೆ, ಹೆರ್ಗೆ ಆದ ಮೇಲೆ ಸರಿ ಹೋದ್ದೇತ ಹೇಳ್‌ತಲೇ ಇದ್ದೊ. ನೆರೆಮನೆ ಅಜ್ಜಿ ಗಂಡ್‌ಕೂಸ್ ಆದ್ದೇತ ಬೊಚ್ಚ್ ಬಾಯ್ನ ಬಿಟ್ಟ್ ಕಳೆ ಕುಂದಿದ ಕಣ್ಣ್‌ಲಿ ಪ್ರೀತಿಂದ ನೋಡಿ ಹೇಳ್ತಿದ್ದೊ.

ಟೀಚರ್ ತಮ್ಮ ಬಾಳ್ವೆಲಿ ತುಂಬಾ ಅನುಭವ ಪಡ್ದಿದ್ದೊ. ತಾನ್ ತಾಯಾಕೆ ಹೀಂಗೆ ಹಿಂಸೆ ಪಟ್ಟನೇ? ಅವ್ಕೇ ಅರ್ಥ ಆದ್ಲೆ. ಕೂಸ್ ತಾವರೆನ ಭವಿಷ್ಯ ಕತ್ತಲೆ ಆಕೆ ಆಗದುತೋ, ಅಲ್ಲ ಈ ಇಳಿ ವಯ್ಸ್‌ಲಿ ಅವ್ವ ಆಕಲೆತೊ, ಒಟ್ಟ್‌ಲಿ ಅವರ ಸುಸಂಕೃತ ಮನ್ಸ್ ಮುದ್ದ್ ಕೂಸ್ ತಾವರೆಗೆ ಅನ್ಯಯ ಆಕೆ ಆಗದ್‌ತೇಳ್ದರ್ಕೇ ಹೆಚ್ಚ್ ಸಮರ್ಥಸ್‌ತ್ತಿತ್ತ್.

ಯೋಚನೆನ ಸುಳಿಲಿ ಮುಳ್ಗ್ ಏಳ್ತಿದ್ದ ಅವ್ವನ ಹೊಟ್ಟೆಲಿ ಕಂದ ಮೆಟ್ಟ್‌ನಾ ಇಲ್ಲಿ ಒಳೇಂತ ಎಚ್ಚರ್ಸ್‌ತ್ತಿತ್ತ್. ವರ್ಣಿಸ್ಕೇ ಬೊತ್ತದ ಆನಂದ ಆತಿತ್ತ್. ಒಂಬೊತ್ತು ತಿಂಗ ತುಂಬಿದ ಬೊಸುರಿ ಹೆಂಗ್ಸ್, ಎದ್ರಿಕೆ ಕುದ್ರಿಕೆ ಆಯಾಸಪಡ್ಕನ ರಾಯ್ರಮನ್ಸ್ ಚಡಪಡ್ಸ್‌ತ್ತಿತ್ತ್. ಅವು ವಿಶೇಷ ಅಕ್ಕರೆಂದ ಹೆಣ್ಣ್‌ನ ಉಪಚಾರ ಮಾಡ್ತಿದ್ದೊ. ಆರತಿಗೆ ಒಂದು ಮಗ್ಳ್ ಉಟ್ಟು, ಇನ್ನ್ ಕೀರ್ತಿಗೊಬ್ಬ ಮಂಜನ ಆಗಮನದ ಕುಶಿಂದ ಕಾಯ್ತಿದ್ದೊ. ಆದರೆ ಟೀಚರ್ನ ಮನ್ಸ್ ನೂರಾರ್ ಬಗ್ಗೆ ಗ್ಯಾನಮಾಡ್ತಲೇ ಇರ್ತಿತ್. ಸೃಷ್ಟಿನ ಈ ಸಹಜ ಕ್ರಿಯೆಲಿ ಹೆಣ್‌ಗೆ ಅದೆಷ್ಟ್ ಕಷ್ಟ. ಮನ್ಸ್‌ಗೆ, ಮೈಗೆ ಕಷ್ಟ ಸಿಕ್ಕದು ಹೆಣ್ಣ್‌ಗೇ. ಕೆಲವೊಮ್ಮೆ ಮೊದುವೆ ಆಗದೇ ತಾಯಾದವರ ಕಂಡಿದ್ದೊ. ಅವ್ಕೆಲ್ಲ ಈ ಬೇನೆ, ಸಂಕಟ ಆದ್ಲೆಯೋ?

ಬಹುಶ್ಯ ಆದ್ಲೇನೊ. ಈ ಪೀಡೆಂದ ಒಮ್ಮೆ ಬುಡ್ಗಡೆ ಆದರೆ ಸಾಕ್ತ ಒಂದೇ ಇರೊಕು. ಹದಿಮೂರು, ಹದ್ನಾಲ್ಕರ ಎಳೆಗೂಡೆಗ ಅವ್ವ ಆಗಿ ಕೂಸು ಬೇಕೇ ಬೇಕೂ ತೇಳಿ ತಾಯ್ತನದ ಪೂರ್ಲುನ ಸಮಾಜ ನಿಂದಿಸಿರೂ, ಲೆಕ್ಸ್ದೆ ಆ ಒಂದೇ ಒಂದು ಕರ್ಲ್ನ ಕೊಡಿಗಾಗಿ ಮತ್ತೆ ಮೊದುವೆ ಆಗದೆ ಇದ್ದವರ ಕಂಡೊಳೊ. ಆದ್ರೂ ಸಮಾಜಕ್ಕೆ ಹೆದ್ರಿ ತಿಪ್ಪೆಗೆ ಬಿಸಾಡವೇ ಜಾಸ್ತಿತ ನಿಟ್ಸ್ರು ಬುಟ್ಟೊ.

ತಿಪ್ಪೇತ ಹೇಳ್ದ ಕೂಡ್ಲೆ ತಾವರೆನ ನೆನ್ಪು ತಕ್ಷಣ ಬಾತ್. ತಾನೇನಾದ್ರ್ ಆ ಹೊತ್ತಿಗೆ ಹೋಗದಿರ್ತಿದ್ರೆ ಆ ಎಳೆ ಮಾಂಸದ ಮುದ್ದೆ ಬಿಸ್ಲ್ನ ಝಳಕ್ಕೆ ಸಿಕ್ಕಿ ಬಾಡಿ ಹೋತಿತ್ತ್; ಹೊಟ್ಟೆಸಿದ ನಾಯಿ, ಕುದ್ಕನ ಪಾಲಾಗ್ತಿತ್ತ್. ಈ ಗೇನಂದ ಟೀಚರ್ ಆ ದಿನ ಇಡೀ ಮಂಕಾಗಿಯೇ ಇದ್ದೊ. ಹೆಣ್ಣ್ನ ಒಂದು ಗಳ್ಗೆನೂ ಬುಟ್ಟಿರದ ರಾಯರ್ಗೆ ಹೆಣ್ಣ್ನ ಬಾಡ್ದ ಮೋರೆ ನೋಡಿ ಏನೋ ಗೇನ ಮಾಡ್ತಾ ಉಟ್ಟು ಕಂಡದೇತ ಆತ್. ಆ ರಾತ್ರಿ ಟೀಚರ್ ಕಣ್ಣೇ ಮುಚ್ಚಿತ್ಲೆ ಕಣ್ಣ್ ಮುಚ್ಚಿದ ಕೂಡ್ಲೆ ನಾಲ್ಗೆ ಹೊರಗೆ ಹಾಕಿ ದುರುಗುಟ್ಟ್ಸ ಕೂಸುನೇ ನೋಡುವ ಕುದ್ಕನೇ ಕಾಣ್ತಿತ್ತ್. ಹಾಂಗೇ ಜೊಂಪ್ ಹತ್ತಿತ್ತೇಳ್ಕನ ಕುದ್ಕ ಒಂದು ಇನ್ನೇನ್ ಕೂಸುಗೆ ಬಾಯಿ ಹಾಕಿತ್ತೇಳ್ಕನ ಕಿಟಾರತ ಕಿರ್ಚಿಕಂಡ್ ಮೂರ್ಛೆ ಹೋದೊ. ಎಚ್ಚರ್ಕೆ ಆಕನ ಹಕ್ಕಲೆ ಡಾಕ್ಟ್ರ ನಿತ್ಕಂಡೊಳೊ. ಎಂದೂ ನಗೆಂದ ವಂಚಿತರಾಗದೇ ಇರುವ ಗಂಡನ ಮೊರೆ ಬಾಡಿಟು. ನೆರೆಮನೆ ಅಜ್ಜಿ ಕಂಗಾಲಾಗುಟು. ತಾವರೆ ಮಾತ್ರ ನಿದ್ದೆಲೇ ನೆಗಾಡ್ತಿತ್. ಸಮಾಧಾನದ ನಿಟ್ಸ್ರು ಬುಟ್ಟೊ ಟೀಚರ್.

ಹೊಟ್ಟೆಲಿ ಅಸಾಧ್ಯ ಬೇನೆ; ಇಂಜೆಕ್ಷನ್ಂದ ಮತ್ತಷ್ಟ್ ಬೇನೆ ಹೆಚ್ಚಾದಂಗಾತ್. ಜೀವ ಹೋವಾಂಗೆ ಬೇನೆ ಬರ್ತಾ ಉಟ್ಟು. ಕೋಳಿ ಕೂಂಗುವ ಹೊತ್ತಿಗೆ ಕೂಸ್ನ ಕ್ಷೀಣ ದನಿ ಕೇಳ್ತ್. ಅದರ್ಲೂ ಮೊರ್ಸಿ ಕಂಚಿನ ಬಟ್ಲ್ನ ಝಣತ್ಕಾರ ಮನೆ ತುಂಬಾ ತುಂಬಿತ್ತ್ ಹೊರಗೆ ಶತಪತ ಹಾಕ್ತಿದ್ದ ರಾಯರ್ರ್ ತೆಗ್ದ ಬಾಗ್ಲ್ಂದ ಇಣ್ಕಿದೊ; ಮುದ್ದಾದ ಗಂಡ್ ಕೂಸ್ ಆಗಳೇ-ಅಜ್ಜಿನ ಅಂಗೈನ ಅಲಂಕರ್ಸಿಟು. ನಿದ್ದೆಂದೆದ್ದ ತಾವರೆ ತನ್ನ ಗೊಂಬೆನಷ್ಟೇ ದೊಡ್ಡದಾದ, ಆದ್ರೆ ಕಣ್ಣ್ ಮಿಟ್ಕಿಸ್ವ, ಕೈಕಾಲ್ ಕೊಣ್ಸುವ ಗೊಂಬೆನ ಕಂಡ್ ನೆಗಾಡ್ತ್ ಆಯಾಸಂದ ಕಣ್ಮುಚ್ಚಿ ಮಲ್ಗಿದ್ದ ಟೀಚರ್ ತಾವರೆನೊಮ್ಮೆ ನೋಡಿ ನಿಂಗೊಬ್ಬ ಆಡಿಕೆ ತಮ್ಮ ಬಂದುಟುತೇಳಿ ಹಕ್ಕಲೆ ಎಳ್ದ್ ಆ ಪುಟ್ಟು ಕೈಗೆ ಒಂದ್ ಮುತ್ತು ಕೊಟ್ಟೊ.



“ನೀ ಕದಿ ಬುಡು ಅದ್ ನಂಗೊತ್ಲೆ, ಆದರೆ ನನ್ನ ಮಾಮೂಲಿ ಮಾತ್ರ ತೊಪ್ಸಿಕೆ ಬೊತ್ತ್ ಗೊತ್ತಾತಲೆ....?”

---

* ಸಣ್ಣ ದೀಪಕ್ಕೆ ಗಾಳಿ ಶತ್ರು, ದೊಡ್ಡ ಜ್ವಾಲೆಗೆ ಅದೇ ಗಾಳಿ ಮಿತ್ರ.

* ತುಂಬಾ ಕುಶೀಲಿ ವಾಗ್ದಾನ ಮಾಡ್‌ಬಡ, ತುಂಬಾ ಸಿಟ್ಟ್‌ಲಿ ಕಾಗದಕ್ಕೆ ಜವಾಬು ಬರಿಬಡ.

* ನಮ್ಮ ಸುರುನ ಹಜ್ಜೆನ ಮೇಲೆ ಇಡೀ ಜೀವಮಾನದ ಭವಿಷ್ಯ ನಿತ್ತುಟು.

# ಪಿಂಡಿದಾಟ್‌ಕನ...

—ಮಹಾಲಿಂಗ ಕಳುಬೈಲ್

ಅಂದ್ ಒಂದಿನ ನಾ ಶಾಲೆಂದ ಬಾಕನ ಹಳ್ಳಲಿ ತುಂಬಾ ನೀರ್. ಹಳ್ಳ ದಾಟಿ ಒಂದು ಮೈಲ್ ನಡಿಯಕು ನಂಗೆ. ಹಳ್ಳ ಕಾಣೊಕರೆ ಹೇಂಗೂ ಒಂದು ಮೈಲ್ ಉಟ್ಟೆಲೆ-ಆಟ ತಿಂಗತ ಕಂಡದೆ; ನೀರ್ ಬಾಳಾ ಉಟ್ಟು. ಹೊವ್ರುದುಂತಾ; ನಂಗೆ ಹೆದ್ರಿ ಲೋಕ ಇಲ್ಲೆ. ನಾ ಆಗ ನಾಕ್ನೆಲಿ ಏನೋ ಕಲ್ತ್ ಕಂಡಿದ್ದೆ. ನೀರ್ ತುಂಬಾ ಬಾವ ಅಂದಾಜಿದ್ದರೆ ನಮ್ಮನ ಶಾಲೆಂದ ಬೇಗ ಬುಡ್ತಿದ್ದೊ. ನಾ ಬೇಗ ಬೇಗ ಬಂದಳೆ, ನೀರ್ ನೋಡಿಕನೆ ಹೆದ್ರಿಕೆ ಆತಿತ್ತ್. ಪಿಂಡಿ (ಚಿವಿಲಿ)ಗೆ ಹತ್ತಿ ಹಿಂದೆ ಹೋಗಿ ನಿತ್ತೆ; ನಂಗೆ ಆಡ್‌ಗಳ ಕಟ್ಟೆ ಹಾಕುದು-ಕೋಳಿ ಮುಚ್ಚಿಹಾಕುದು ಇದುವೆ ತಲೆಲಿತ್ತ್...

ಪಿಂಡಿಲಿ ಮಕ್ಕ ತುಂಬಾ ಹತ್ಯೊಳೊ, ಮೊಣ್ಕಾಲ್‌ಂದ ಮೇಲೆ ನೀರ್ ನಡುಲೇ ಇತ್ತ್. ನಾ ಹೇಂಗೂ ಹಿಂದೆ ನಿತ್ತಂವ; ಮೊಣ್ಕಾಲಿಗೆ ನೀರ್ ಬಾರದ್ದರೂ ನನ್ನ ಎದೆಲಿ ಮಾತ್ರ ಆವುಲಕ್ಕಿ ಕುಟ್‌ತಿತ್ತ್. ಎರ್ಡ್ ಮೂರ್ ಜೆನ ಸೇರ್ಯೊಳೊ ಪಿಂಡಿ ಎಳಿಯಕೆ. ಪಿಂಡಿ ಆಚೆ ಕರೆಗೆ ಹೋದೆ ತಡ...ಅಲ್ಲಿದ್ದ ದೂಪದ ಮರಕ್ಕೆ ಒಂದು ಇಸಿತ್; ಪಿಂಡಿ ಹೋದ ಬರಾಸಲಿ ಪಿಂಡಿಲಿದ್ದೊವೆಲ್ಲಾ ಒಮ್ಮೆಗೆ ಹಾಂ...ಹಾಂ....ಂತ ಕಿರ್ಚಿದೊ; ನಾ ಮಾತ್ರ ಅಲ್ಲಿತ್ತೆ!

ಹಞ ಹೊತ್ತ್ ಕಳ್ದ ಮೇಲೆ ನಾ ಹಳ್ಳದ ನೀರ್‌ಲಿ ಪಾಂಬಿನೆ! ನನ್ನ ಕೈಲಿದ್ದ ಬುತ್ತಿ ಪಾತ್ರೆ, ಕೊಡೆ, ಹೆಗ್ಲಲಿದ್ದ ಚೀಲನ ಮಾತ್ರ ಬುಟ್ಟತ್ತ್‌ಲೆ. ನಾ ಎರ್ಡ್ ಸರ್ತಿ ಮೇಲೆ ಕೆಳ್ಗೆ ಹೋಗೊಳೆ; ಮೂರ್ನೆ ಸರ್ತಿ ಹೋಕೆ ಮುಂದೆ ಕಲ್‌ಮುಟ್ಲ್ ಆನಂದಣ ನನ್ನ ಎತ್ತಿ ಹಿಡ್ಕಂಡೊಳೊ. ನೀರ್ಲಿ ನಾ ಹೊದೆಂತಾ ಗ್ರ[illegible]ಸಿದೆ; ಆದರೆ ಅವು ನನ್ನ ಹೋಕೆ ಬುಟ್ಟತ್ತ್‌ಲೆ- ಅವ್ಕೆ ಯೊಗೋಳು ಪಿಂಡಿ ಹಕ್ಕಲೆ ಬಂದ್, ನಿಲ್ಲುವ ಅಬ್ಬೆಸ. ಅದ್ ದೇವುರೆ ಕೊಟ್ಟದ್ ಅವ್ಕೆ. ಅಂತೂ ಆನಂದಣ ನನ್ನ ಬಚಾವ್ ಮಾಡ್ದೊ.

ನನ್ನ ಅಂಗಿ, ಚಡ್ಡಿ ಜೋಬುಲಿ, ಕೊಡೆಲಿ, ಚೀಲಲಿ ಎಲ್ಲಾ ನೀರೇ ತುಂಬಿಟು. ನಾ ಚೆಂಡಿ ಆದರೂ ಅಕ್ಕ್; ನನ್ನ ಪುಸ್ತಕ ಚೆಂಡಿ ಆತ್‌ಲೇಲಾಂತ ಬೇಜಾರ್ ಆತ್. ಒಂದ್ ಕಡೆಂದ ಹೆದ್ರಿಕೆನೂ ಆದೆ-ಇನ್ನೊಂದು ಕಡೆಂದ ಕತ್ತಲೆ ಆವುಟು. ನನ್ನ ಗುಡ್ಡೆಗೆ ಹತ್ತಿಸಿ ಆಕನ ಯಾರೋ ಒಬ್ಬ ಹೇಳ್ದೊ-ಈ ಮಕ್ಕಳಿಗೆಲ್ಲಾ ಹುಣ್ಸೆ ಅಡ್ರ್‌ಲಿ ಕೊಡೋಕುಂತ; ಮತ್ತೊಬ್ಬ ಹೇಳ್ದೊ ಯಾಕೆ-ಅಂವ ಯೇನ್ಮಾಡಿಟು? ಅಂವ ಬದ್ಕಿದೆ ಪುಣ್ಯಂತ. ನಾ ಮಾತ್ರ ಒಂದೇ ಓಟ ಮನೆಗೆ.

ಹೀಂಗೆ ಹಳ್ಳಲಿರುವ ಮಕ್ಕಳಿಗೆ ಬಾಳ ಕಷ್ಟ ಉಟ್ಟು ಏನ್ಮಾಡ್ದು. ಎಷ್ಟ್ ಕಷ್ಟಾದ್ರೂ ಶಾಲೆಗೆ ಹೊಕುಂತ ಒಂದು ಆಸೆ ಇರೋಕೆ; ಅದ್ ಒಳ್ಳೆದ್. ಆದರೆ ನನ್ನಂಗೆ ಪಿಂಡಿಲಿ ನಿಲ್ಲ್‌ಕನ ಆಡ್‌ಗಳ ಕೂಡ್ದು-ಕೋಳಿಗಳ ಮುಚ್ಚಿ ಹಾಕುದು-ತಲೇಲಿಸಿ ಕುಡದ್ವ್ ನಾ ಹಳ್ಳದಾಟ ಕಂಡ್ ಮೊಳೆಂತೆಳ್ದರ ಮರಿಬಡಿ. ಇವ್ಕೆಲ್ಲಾ ಹುಣ್ಸೆ ಅಡ್ರ್‌ಲಿ ಕೊಡೋಕುಂತ ಹೇಳ್ಸಿಕಂಬಡಿ ಬಲರಿಯಾ.

---

## ಬೊಯ್ಗಳ

ಕೋಳಿ ಏನಾರ್ ಉಪದ್ರ ಮಾಡ್ರೆ—"ಕೋಳಿ ನಿನ್ನ ಕುದ್ಕ ಹೊರಿಕೆ"

ನಾಯಿ ಮತ್ತೆ ದನ ಉಪದ್ರ ಮಾಡ್ರೆ—"ನಿನ್ನ ಹುಲಿ ತಿಂಬಕೆ"

ಕೊತ್ತಿ ಏನಾರ್ ಉಪದ್ರ ಮಾಡ್ರೆ—"ನಿನ್ನ ಗುಮ್ಮ ಮೆಟ್ಟಕೆ"

—ಶಾರದಾ, ಮುಂಡೋಡಿ

## ಮಹಾ ಸಾಧನೆಯ ಕಾರಂಜಿ

# ಕುರುಂಜಿಯುವು

—ಶ್ರೀಮತಿ ಕೇವಳ ಶೀಲಾವತಿ ಚಿನ್ನಪ್ಪ



**ಪ್ರತಿ ನಿಮಿಷ ನಿಮಿಷಕ್ಕೂ ಬೆಲೆ ಕಟ್ಟ್‌ವ ಕುರುಂಜಿ ವೆಂಕಟ್ರಮಣ ಗೌಡ್ರು ದ್ ಅಸಾಧರಣ ವ್ಯಕ್ತಿತ್ವ ಮತ್ತೆ ಸರಳ ಜೀವನ, ಬಡ ಜೆನಂಗಳ ಮೇಲೆ ಇವುಕೆ ಬಾಳ ಪ್ರೀತಿ. ಇವರ ಸಾಧನೆನ ಎಷ್ಟ್ ಹೊಗಳ್ರು ಸಾಲ್ದ್. ಇವರ ದಾರಿಲೇ ನಾವೆಲ್ಲ ನಡಿಯುಕ್ಕೆ ಪ್ರಯತ್ನ ಪಡೋಕು.**

" ಧೈರ್ಯದಿಂದ ಧ್ಯೇಯದೆಡೆ ಧಾವಿಸುವುದೇ ಜೀವನ, ಬೆದರಿ ಮುದುಡಿ ಕೊಳ್ಳುವವಗೆ ಜಗ ಭ್ರಾಂತಿ ನಿಕೇತನ". ಹವುದು; ಜೀವನಲಿ ಬಾವ ಕಷ್ಟನಷ್ಟಗಳ ಎದ್‌ರಿಸಿ ಧೈರ್ಯಂದ ಮುಂದೆ ನಡೆವ ಶೂರರ್ ಬಾರೀ ಕಮ್ಮಿ. ಅಂತ ಜೆನಗಳ್ಲಿ ಶ್ರೀ ಕುರುಂಜಿ ವೆಂಕಟ್ರಮಣ ಗೌಡ್ರು ಒಬ್ಬ.

ಶ್ರೀ ವೆಂಕಟ್ರಮಣ ಗೌಡ್ರು ಮಲ್ನಾಡ್‌ನ ಸೆರ್ಗ್ ಆದ ಸುಳ್ಯ ತಾಲೂಕಿನವು. ಇವ್ ಹುಟ್ಟಿದ್ ೧೯೨೯ನೇ ಇಸ್ವಿ ಜನವರಿ ೨೬ರ್ಲಿ. ಇವರ ಅಪ್ಪನ ಹೆಸ್ರ್ ಮಾಲಿಂಗ ಗೌಡಾಂತ, ಅವ್ವನ ಹೆಸ್ರ್ ಲಕ್ಷ್ಮೀಂತ. ಈ ದಂಪತಿಗಳ ಏಳ್ಜೆನ ಮಕ್ಕಳ ಪೈಕಿ ಇವು ಎರ್‌ಡ್ನೆವು. ಇವರ ಅಪ್ಪ ಒಳ್ಳೆ ಮಾಸ್ಟ್ರ ಮಾತ್ರಲ್ಲ ಒಳ್ಳೆ ಯಕ್ಷಗಾನ ಭಾಗವತರ್ ಸಾ ಆಗಿದ್ದೊ. ಅವ್ವ ಸಾತ್ವಿಕ ಪ್ರವೃತ್ತಿಯ ಸದ್ಗುಣೆಯಾಗಿದ್ದೊ. ಇಂತ ಸುಸಂಸ್ಕೃತ ವಾತಾವರ್ಣಲಿ ಬೆಳ್ದ ವೆಂಕಟ್ರಮಣಗೌಡ್ರು ಸಣ್ಣದಿರ್‌ಕನೆ ಒಳ್ಳೆ ದೂರದರ್ಶಿಗ, ಮಹತ್ವಾಕಾಂಕ್ಷಿಗ ಆಗಿದ್ದೊ. ಉದ್ಯಮ ಶೀಲರ್ ಆದ ಇವು ಸಣ್ಣ ಜಂಗ್‌ಡಿ ಸುರು ಮಾಡ್ದೊ; ಮತ್ತೆ ಅದರ್ಲೀ ಮುಂದೆ ಬಂದ್, ಬೇರೆ ಬೇರೆ ಯೋಜನೆಗಳ ಸುರು ಮಾಡಿ ಅಭಿವೃದ್ಧಿ ಆದೊ.

ಇನ್ನೆ ಸತತ ಶ್ರಮ ನಂಬಿಕೆಯ ಮಿತ್ರ ಆಗಿ, ಅನುಭವ ನಮ್ರ ಸಚಿವ ಆಗಿ, ಜಾಗ್ರೂಕತೆ ರಕ್ಷಾ ಕವಚ ಆಗಿತ್ತ್. ಸಮುದ್ರ ಮಥನ ಕಾಲಲಿ ಹುಟ್ಟಿದ ಲಕ್ಷ್ಮಿ, ಅದೇ ಶ್ರೀಮನ್ನಾರಾಯಣ ದೇವ್ರ ಮೊದುವೆ ಆತ್‌ಗಡ. ಹಾಂಗೇ ಕೀರ್ತಿ ಲಕ್ಷ್ಮಿ ಇವರ ವಿವಿಧೋದ್ದೇಶ ಯೋಜನೆಗಳ ಆಲ್ಂಕರಿಸಿತ್.

ಮನ್‌ಸನ ಜೀವನಕ್ಕೆ ಒಂದು ಸೆರಿಯಾದ ಗುರಿ ಇರೋಕು, ಅವೆರ್ಡರ್ಲೂ ಸಾಮರಸ್ಯ ಇರೋಕು; ಆ ಗುರಿಗೆ ಹೊಂದಿಕಂಬ ಯೋಜನೆನೂ ಇರೋಕು, ಇವೆಲ್ಲ ಸೆರಿಯಾಗಿ ಇದ್ದ ಕಾರ್ಣ ತಮ್ಮ ಧ್ಯೇಯಗಳ ತುದಿ ಮುಟ್ಸಕೆ ಸಾಧ್ಯಾತ್‌ಂತ ಹೇಳ್‌ವೆ ವೆಂಕಟ್ರಮಣ ಗೌಡ್ರು.

ಜೀವನದ ಸಾಫಲ್ಯ ಹೇಂಗೆ? ಶ್ರೀಯುತರ ಅಭಿಪ್ರಾಯದ ಸಾರಾಂಶ ಹಿಂಗೂಟ್ಟು. ೧) ಆರ್ಥಿಕ ತಾಪತ್ರೆನ ದೂರ ಮಾಡ್ವಂತದ್ ೨) ಶ್ರಮ ಜೀವನ ೩) ಆರೋಗ್ಯ ಪಾಲನೆ ೪) ಧೂಮಪಾನ, ಮಧ್ಯಪಾನ ಮುಂತಾದ ಹಾಳ್ ಅಬ್ಬೆಸಗಳ ಬುಟ್ಟ್‌ಬುಡ್ವು ೫) ಸಣ್ಣ ಕುಟುಂಬ ೬) ದೊಡ್ಡ ಮನ್ಸ್ ೭) ತ್ಯಾಗ ಮತ್ತೆ ಸೇವಾ ಭಾವನೆಗ.

'ಕೃಷಿತೋ ನಾಸ್ತಿ ದುರ್ಭಿಕ್ಷಂ' ಗೌಡ ಸಮಾಜ

ದವು ಹಿಂದೆಂದಳೀ ಕೃಷಿಕರಾಗಿದ್ದೊ. ಕುರುಂಜಿಯುವು ಅಡಿಕೆ, ಕೊಕ್ಕೋ, ಕಾಯ್‌ಗಳ್ನ ಬೆಳ್ಸ್‌ವ ಕೃಷಿಕರ್. ಕೃಷಿಲಿ ಉಷಾರಾದ ಇವು ತಮ್ಮ ಜೀವನಲಿ ಎದ್‌ರಾದ ಸಮಸ್ಯೆಗಳ ಎದುರಿಸ್ಯೊಳೊ, ಕೊರತೆಗಳ ದೂರ ಮಾಡ್ಯಳೊ.

ಇವು ಸಾರ್ವಜನಿಕವಾಗಿ ಆಸ್ಪತ್ರೆ, ವಿದ್ಯಾ ಸಂಸ್ಥೆ, ಕಲ್ಯಾಣ ಮಂಟಪಗಳ ಕೆಲ್‌ಸ ಮಾಡ್‌ಸ್ತಾ ಒಳೊ. ತಮ್ಮ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಷನ್‌ನ ವತಿಂದ ಸೊಂತ ೬೦ಲಕ್ಷ ರೂ ಖರ್ಚ್‌ಂದ ಒಂದು ಪ್ರಥಮ ದರ್ಜೆ ಕಾಲೇಜ್, ೧೭೫ ಜೆನ ಇರ್ವ ಒಂದು ಹೈದಂಗಳ ಹಾಸ್ಟೆಲ್, ೧೪೦ ಸದಸ್ಯರ ಒಂದು ಗೂಡೆಗಳ ಹಾಸ್ಟೆಲ್‌ನ ಸ್ಥಾಪಿಸೊಳೊ. ಅಷ್ಟೆ ಮಾತ್ರ ಅಲ್ಲ, ಈ ವರ್ಷ ಅಂದರೆ ೧೯೮೪ರ್ಲಿ ಪಾಲಿಟೆಕ್ನಿಕ್ ಕಾಲೇಜಿನ ಯೋಜನೆ ಮಾಡ್ಯೊಳೊ. ಈಗ ಅದರ್ಲಿ ಸಿವಿಲ್, ಆಟೊಮೊಬೈಲ್ ವಿಭಾಗಗ ಒಳೊ. ಇನ್ನ್ ಮುಂದೆ ಇಲೆಕ್ಟ್ರಿಕಲ್, ಮೆಕೇನಿಕಲ್ ವಿಭಾಗಗಳ ತೆರೆವ ಅಭಿಪ್ರಾಯಲಿ ಒಳೊ.

ವೃತ್ತಿಪರ ಶಿಕ್ಷಣದ ಅಗತ್ಯತೆ ಇತ್ತ್ವ ಈ ಕಾಲಲಿ ಇವು ಮಾಡ್ದ ಈ ಕೆಲ್ಸನ ಎಷ್ಟ್ ಹೊಗ್‌ಳ್ರೂ ಸಾಲ್ದ್. ಮುಂದೆ ಸರ್ಕಾರದ ಒಪ್ಪಿಗೆ ಸಿಕ್ಕಿರೆ ಇಂಜಿನಿಯರಿಂಗ್ ಮತ್ತೆ ಮೆಡಿಕಲ್ ಕಾಲೇಜ್‌ಗಳ ತೆರೆವ ಬೃಹತ್ ಯೋಜನೆಗ ಇವರ ಮನ್‌ಸ್ಲಿ ಉಟ್ಟ್. ಶ್ರೀಯುತ ಗೌಡ್ರು ವೈದ್ಯಕೀಯ ನೆಲೆಲಿ ಕುರುಂಜಿಕಾರ್ಸ್ ಆಸ್ಪತ್ರೆನ ಕಟ್ಟ್‌ಸಿ, ಅಲ್ಲಿ ಬೇರೆ ಬೇರೆ ಸೌಕರ್ಯಗಳಿರ್‌ವ ೫೦ ಹಾಸಿಗೆಗ ಇರ್ವ, ಎಕ್ಸ್‌ರೇ, ಹೆರಿಗೆ ವಾರ್ಡ್, ಲೆಬೋರೆಟರಿ ಮುಂತಾದ ಅನ್ಕೂಲತೆಗಳ ಕಲ್ಪಿಸಿಕೊಟ್ಟೊಳೊ.

ಗೌಡ್ರ ವಿವಿಧೋದ್ದೇಶ ಯೋಜನೆಗಳ ಪೈಕಿ ಕಲ್ಯಾಣ ಮಂಟಪಗಳ ನಿರ್ಮಾಣವೂ ಸೇರಿಟು. ಈಗಾಗಲೇ ಮಡಿಕೇರಿ, ಮಂಗ್ಳೂರು, ಮೂನರ್ಾಡ್, ಕುಶಾಲನಗರ, ಕಡಬ, ಸೋಮಾರ್‌ಪೇಟೆ, ಬೆಂಗ್ಳೂರು, ಮೈಸೂರು ಮುಂತಾದ ಊರುಗಳ್ಲಿ ಕಲ್ಯಾಣ ಮಂಟಪಗಳ ಕೆಲ್ಸ ಸುರು ಆವುಟು. ಅಂತಾ ಉದ್ಧೇಶಗಳಿಗೆ ಬೇಕಾಗಿ ನಿರ್ಮಾಣ ಮಾಡ್ವ ಸಮಿತಿಗಳಿಗೆ ಇವು ಉತ್ತೇಜನ ಕೊಟ್ಟ್, ದುಡ್ಡ್ ಸ್ಹಾಯ ಮಾಡ್ತ ಒಳೊ. ಈಗ ಕಲ್ಯಾಣ ಮಂಟಪಗಳ ಕೆಲ್ಸ ಎಲ್ಲಾ ಮುಕ್ಯಂಡ್ ಬರ್ತಾ ಉಟ್ಟ್. ಬೆಳ್ತಂಗಡಿ, ಬಾಗಮಂಡ್ಲ, ಸುಳ್ಯ, ಇಷ್ಟ - ಕಡೆಲಿ ಮಾಡ್ವ ಯೋಜನೆ ಹಾಕಂಡೊಳೊ.

ಸಾರ್ವಜನಿಕವಾಗಿ ಸುಳ್ಯ ತಾಲ್ಲೂಕು ಕಚೇರಿ, ಸರ್ಕಾರಿ ಆಸ್ಪತ್ರೆ, ಕೋರ್ಟ್, ಸರ್ಕಾರಿ ಜೂ॥ ಕಾಲೇಜ್, ನೆಹರೂ ಸ್ಮಾರಕ ಹೈಸ್ಕೂಲ್, ಶಾರದ ಹೈಸ್ಕೂಲ್, ಮುನ್ಸಿಪಾಲ್ಟಿ; ಟ್ರೆಜರಿ ಇಸರ್ಲೆಲ್ಲಾ ಸ್ಥಾಪಕ ಸಮಿತಿ ಅಧ್ಯಕ್ಷ ಆಕಂಡ್ ಸೇವೆ ಮಾಡ್ದ ಹೆಮ್ಮೆ ಇವರ್ದ್, ಸುಳ್ಯದ ಸರ್ವಾಂಗೀಣ ಪ್ರಗತಿಗಾಗಿ ಸಾಕಷ್ಟ್ ಶ್ರಮಿಸೊಳೊ.

ಸುಳ್ಯಲಿ ನೀರ್ ಸರಬರಾಜ್ ಯೋಜನೆ, ಮಾರ್ಗಗ, ದಾರಿ ದೀಪದ ಯುವಸ್ಥೆ, ಬಡ ಜೆನಗಳಿಗೆ ಮನೆ ಕಟ್ಸ್‌ದು, ಈ ರೀತಿ ಜೆನಗಳಿಗೆ ಹತ್ತಾರ್ ನೂರಾರ್ ರೀತಿಲಿ ಪ್ರಯೋಜನ ಆವ ಕಾರ್ಯಗಳ ಮಾಡ್ಯಳೊ. ಕುಟುಂಬ ಯೋಜನೆಲಿ ಬಾಳ ಆಸಕ್ತಿ ಇರ್ವ ಗೌಡರ್ದ್ ಸಂಣ ಸಂಸಾರ. ಇವರ ಹೆಣ್ಣ್ ಜಾನಕಿಯುವು ಕೊಡಗ್‌ನವು. ಇವು ಸುಳ್ಯ ಮಹಿಳಾ ಸಮಾಜದ ಅಧ್ಯಕ್ಷಿಣಿ ಆಗಿದ್ದೊ. ಈಗ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಷನ್‌ನ ಡೈರೆಕ್ಟರ್ ಆಗೊಳೊ. ಇವರ ದೊಡ್ಡ ಮಂಜ ಚಿದಾನಂದ ಕುರುಂಜಿಕಾರ್ಸ್ ಆಸ್ಪತ್ರೆನ ಪ್ರಧಾನ ವೈದ್ಯರಾಗಿದ್ದ್ ಸದ್ಯಕ್ಕೆ ಮದ್ರಾಸ್‌ನ ಸ್ಟಾನ್ಲೀ ಮೆಡಿಕಲ್ ಕಾಲೇಜ್‌ಲಿ ಜರ್ನಲ್ ಸರ್ಜರಿ ವಿಭಾಗಲಿ ಯಂ. ಯಸ್. ಮಾಡ್ತ ಒಳೊ. ಸಣ್ಣಂವ ರೇಣುಕಾ ಪ್ರಸಾದ್ ಕಸ್ತೂರ್ ಬಾ ಮೆಡಿಕಲ್ ಕಾಲೇಜ್‌ಲಿ ಯಂ.ಬಿ.ಬಿ.ಯಸ್, ನಾಕನೇ ವರ್ಷದ ವಿದ್ಯಾರ್ಥಿ. ಮಗ್ಳು ಗೋವರ್ಧಿನಿ ಬಿ.ಎ. ಹೋಮ್ ಸೈನ್ಸ್ ಪದವೀಧರೆ; ಇವರ ಯಜ್‌ಮಾನ್ರ ಯಂ.ಬಿ.ಬಿ.ಯಸ್. ಯಂ.ಡಿ. ಯಂ. ಆರ್. ಸಿ. ಎ., (ಯು.ಕೆ.) ಇವು ತಮ್ಮ ಕೂಸ್‌ನೊಟ್ಟಿಗೆ ಈಗ ಇಂಗ್ಲೆಂಡ್‌ಲಿ ಒಳೊ. ವೆಂಕಟ್ರಮಣ ಗೌಡ್ರುಗೆ ಒಬ್ಬ ಅಂಣ ಮತ್ತೆ ಮೂರ್ಜನ ತಮ್ಮಂದರ್ ಎರ್‌ಡ್ನೆ ತಮ್ಮ ಗೋಪಾಲಕೃಷ್ಣನವು ಮಾದರಿ ಕೃಷಿಕ ಮಾತ್ರ ಅಲ್ಲ ಇವರ ಕಾಯ್ದ್ ತೋಟ ದಕ್ಷಿಣ ಕನ್ನಡ ಜಿಲ್ಲೆಲೇ ಪ್ರಸಿದ್ಧಿ ಪಡ್ದುಟು.

ಹುಟ್ಟ್‌ಕನೇ ಯಾರಿಗೂ ದೊಡ್ಡಸ್ತನ, ಬಡಸ್ತನ ಉಡ್ಗರೆ ಆಗಿ ಬಾದುಲೆ. 'ನಹಿಸಿ ಹಸ್ತ ಸುಪ್ತಸ್ಯ ಪ್ರವಿಶಸ್ತಿ ಮುಖೇ ಮೃಗಾಃ' ಕಷ್ಟ ಪಟ್ಟವಂಗೆ ಒಂದಲ್ಲ ಒಂದಿನ ಯುಸಸ್ಸ್ ಸಿಕ್ಕೇ ಸಿಕ್ಕಿದೆ; ಆದರ್ಲಿ ಸೊಂಸಯನೇ ಇಲ್ಲೆ. ಇದಿಕೆ ಒಳ್ಳ ಉದಾಹ್ರಣೆ ಆಗಿಒಳೊ ಶ್ರೀ ಕುರುಂಜಿ ವೆಂಕಟ್ರಮಣಗೌಡ್ರು.

# ಇಳಿ ವಯಸ್ಸಲೂ ಸಮಾಜ ಸೇವೆ

# ಪೇರಿಯನ ಎಂ. ಪೂವಯ್ಯನವು

—ಸಿ. ಜಿ. ಅಂಬೆಕಲ್, ಚೆಟ್ಟಳ್ಳಿ



ಕೊಡಗ್‌ನ 'ನಂದನವನ'ಂತ ಕರೆವ ಚೆಟ್ಟಳ್ಳಿಲಿ ಮಡಿಕೇರಿ-ಸಿದ್ಧಾಪುರ ಮಾರ್ಗದ ಕರೆಲಿ ಸಣ್ಣ ಗುಡ್ಡೆನ ಮೇಲೆ ತಲೆ ಎತ್ತಿ ನಿತ್ತುಟ್ಟು ಚೆಟ್ಟಳ್ಳಿ ಹೈಸ್ಕೂಲು. ಈ ಹೈಸ್ಕೂಲ್‌ನ ಹೆಸ್ರ್ ಹೇಳ್ದ ಕೂಡ್ಲೆ ನಾವ್‌ಗೆ ಮುಂದೆ ನೆನ್‌ಪಾವ ಹಾಂಗೂ ನೆನ್ಪ್ ಮಾಡಕಾದ ಹೆಸ್ರ್ ನಮ್ಮ ಶ್ರೀ ಪೇರಿಯನ ಎಂ. ಪೂವಯ್ಯನವರ್ದ್. ದಿ॥ ಪೇರಿಯನ ಮುದ್ದಯ್ಯ ಮತ್ತೆ ದಿ॥ ಚಿಣ್ಣಮ್ಮನವರ ಎರ್‌ಡ್ನೆ ಮುಂಜ ಆಗಿ ತಾ. ೩-೧೧ ೧೯೧೧ರಲ್ಲಿ ಶ್ರೀ ಪೂವಯ್ಯನವು ಜನ್ಮ ತಾಳ್ದೊ. ಇವು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸನ ಮರ್ಗೋಡು ಶಾಲೆಲಿ ಮತ್ತೆ ಚೆಟ್ಟಳ್ಳಿ ಕೈಸಂಬಳ ಶಾಲೆಲಿ ಮುಗ್ಸಿ, ಆ ಮೇಲೆ ಮೆಟ್ರಿಕ್‌ವರೆಗೆ ಮಡಿಕೇರಿ ಸೆಂಟ್ರಲ್ ಹೈಸ್ಕೂಲ್‌ಲಿ ಓದಿದೊ. ಹೈಸ್ಕೂಲ್‌ಲಿ ಇವು 'ಕಮರ್ಷಿಯಲ್' ಪಾಠಗಳ ಮತ್ತೆ ಸಂಸ್ಕೃತ ಬಾಸೆನೂ ಕಲ್ತೊ.

೧೯೩೪ರಲ್ಲಿ ದಂಬೆಕೋಡಿ ಬೋಪಯ್ಯನವರ ಮಗ್ಳ ಪೂವಮ್ಮನವರ ಮೊದುವೆ ಆದ ಪೂವಯ್ಯನವು ತುಂಬಿದ ಸಂಸಾರಲಿ ಆದರ್ಶ ಸತಿಪತಿಗ್ಳಾಗಿ ಬಾಳ್‌ದೊ. ಮೂರ್ ಗಂಡ್, ಮೂರ್ ಹೆಣ್ಣ್ ಮಕ್ಕಳ ಪಡ್ದ್ ಪಿಳ್ಳೆಕಳ ಆಡ್ಸಿದ ಇವುಕ್ಕೆ ಮರಿ ಪಿಳ್ಳೆಕಳ್ನ ಆಡ್ಸುವ ಭಾಗ್ಯ ಬರ್ಲಿ.

ಚೆಟ್ಟಳ್ಳಿ ಪ್ರಾಥಮಿಕ ಶಾಲೆಲಿ ಮಾಸ್ಟ್ರಾಗಿ ಕೆಲ್ಸಕ್ಕೆ ಸೇರ್ದ ಇವು ಮಡಿಕೇರಿ ಪಿಯರ್‌ಲೆಸ್ ಕಂಪೆನಿ, ಸಿಂಕೋನ ಕಂಪೆನಿಗಳ್ಲಿ ಕ್ಲಾರ್ಕ್ ಕೆಲ್ಸನೂ ಮಾಡಿಯೊಳೊ ಭೂತನಕಾಡ್, ಪಾಲಿಬೆಟ್ಟ, ಎಮ್ಮೆಗುಂಡಿ ಕಾಫಿತೋಟಗಳ ರೈಟ್ರಾಗಿ ಕೆಲ್ಸ ಮಾಡ್ದ ಇವು 'ರೀಜನಲ್ ಟ್ರಾನ್ಸ್‌ಪೋರ್ಟ್ ಅಥಾರಿಟಿ' ಆಗಿ, ಮೂರ್ ವರ್ಷ ಜ್ಯೂರಿ (ಎಸ್ಸೆಸ್ಸರ್) ಆಗ್ಯೂ ಸೇವೆ ಸಲ್ಲಿಸಿಯೊಳೊ. ೧೯೩೭ರಲ್ಲಿ ಉದ್ಯೋಗ ಬುಟ್ಟ್ ಮನೆ ಯವಹಾರ ನೋಡಿಕಂಡ್ ಒಳ್ಳೆ ಯವಸಾಯಗಾರ ಆಗಿ ಆದರ್ಶ ಕೃಷಿಕ ಆಗಿ ಜೀವನ ಸಾಗ್ಸಿಕಂಡೊಳೊ.

'ಜನ ಸೇವೆನೇ ಜನಾರ್ಧನನ ಸೇವೆ'ಂತೇಳ್‌ವ ಗಾದೆನ ಹಾಂಗೆ ಶ್ರೀ ಪೂವಯ್ಯನವು ಊರ್, ಪರಊರ್‌ಗಳ ಹತ್ತಾರ್ ಸಂಗ ಸಂಸ್ಥೆಗಳ್ಲಿ ಸೇವೆ ಸಲ್ಲಿಸಿಯೊಳೊ. ಚೆಟ್ಟಳ್ಳಿ ಗ್ರಾಮ ಸಹಕಾರಿ ಸಂಘದ ಮೆಂಬರ್ ಆಗಿ, ಸೆಕ್ರೆಟ್ರಿ ಆಗಿ, ಅಧ್ಯಕ್ಷ ಆಗಿ ಸುಮಾರ್ ವರ್ಷ ದುಡ್ದೊಳೊ. ೧೯೪೭ರ್‌ದ ಅಂದ್‌ನ ಕಾಂಗ್ರೆಸ್ ಪಾರ್ಟಿಗೆ ಸೇರಿಕಂಡ್ ರಾಜಕೀಯಲೂ ಕೆಲ್ಸ ಮಾಡ್ದೊ. ದೇವ್ರ, ಧರ್ಮದ ಬಗ್ಗೆ ನಂಬುಕೆ ಇರ್ವ ಇವು ಚೆಟ್ಟಳ್ಳಿ ಭಗವತಿ ದೇವಸ್ಥಾನದ ಉದ್ಧಾರಕ್ಕೆ ಕೆಲ್ಸ ಮಾಡ್ದೊ. ತಮ್ಮ ಕಾಲಲಿ ವಿದ್ಯೆಗೆ ಹೆಚ್ಚಿನ ಉತ್ತೇಜನ ಇಲ್ಲದ್ದರ ತಿಳ್ದ ಪೇರಿಯನವು ಚೇರಳ ಶ್ರೀಮಂಗಲ ಕಿರಿಯ ಪ್ರಾಥಮಿಕ ಶಾಲೆ, ಚೆಟ್ಟಳ್ಳಿ ಮಾದರಿ ಪ್ರಾಥಮಿಕ ಶಾಲೆಗಳಿಗೆ ದುಡ್ಡ್‌ನ ಸಾಯ ಮಾಡಿಯೊಳದಲ್ಲದೆ ಚೆಟ್ಟಳ್ಳಿಲಿ ಹೈಸ್ಕೂಲ್ ಮಾಡಿಕೆ ಒಂದನೇವ ಆಗಿ ಹಗ್ಲ್ ಇರ್ಲ್ ದುಡ್ದ್ ಗರೀಬ ಮಕ್ಕ ಓದುವ ಹಾಂಗೆ ಮಾಡಿ ಪುಣ್ಯ ಕಟ್ಟಿಕಂಡೊ. ಚೆಟ್ಟಳ್ಳಿ ವಿದ್ಯಾ ಸಂಘ ಸ್ಥಾಪನೆ ಆದರ್‌ಂದಳೇ ಅದರ ಗೌರವ ಸೆಕ್ರೆಟ್ರಿ ಆಗಿ ಶಾಲೆನ ಕರೆಸ್ಪೋಂಡೆಂಟ್ರಾಗಿ ಸುಮಾರ್ ಹದ್ನಾಲ್ಕ್ ವರ್ಷ ದುಡ್ದ್ ಶಾಲೆನ ಎಲ್ಲಾ ರೀತಿನ ಅಭಿವೃದ್ಧಿಗೆ ಕಾರಣರಾದೊ. ನಮ್ಮ ಜೆನಂಗ ಮುಂದೆ ಬರೊಕುಂತೇಳ್ವ ಪ್ರೀತಿ ಮತ್ತೆ ಅಭಿಮಾನಂದ ಕೊಡಗ್ ಗೌಡ ವಿದ್ಯಾ ಸಂಘದ ಗೌರವ ಕಾರ್ಯದರ್ಶಿಗ ಆಗಿ ಸುಮಾರ್ ೧೫-೧೭ ವರ್ಷ ಸೇವೆ ಸಲ್ಲಿಸಿಯೊಳೊ. ಮೈಸೂರ್‌ಲಿ ಕಟ್ಟ್‌ಸಿದ 'ವೆಂಕಟೇಶ್ವರ ವಿದ್ಯಾರ್ಥಿ ನಿಲಯ'ದ ಕಟ್ಟಡ ಸಮಿತಿನ ಅಧ್ಯಕ್ಷ ಆಕಂಡ್ ಮಾಡ್ದ ಕೆಲ್ಸನ ಯಾರೂ ಮರಿಯಕಿಲ್ಲೆ. ಈಗ ಮಡಿಕೇರಿಲಿ ಕಟ್ಟ್‌ಸುವ "ಕಲ್ಯಾಣ ಮಂಟಪ" ಸಮಿತಿನ ಡೈರೆಕ್ಟ್ರಾಗಿ ಸಾ ಶ್ರಮ ಪಡ್ತಒಳೊ.

ತನ್ನ ಅಪ್ಪನಕ್ಕಲೆ ಇದ್ದ ಜನಾಂಗ ಪ್ರೇಮ, ಛಲ: ಅವ್ವನ ಪ್ರೀತಿ, ಶ್ರಮದ ದುಡ್‌ಮೆ, ಕೈ ಹಿಡ್ದ ಹೆಣ್ಣ್‌ನ ಸಮಾಜ ಸೇವೆನ ಉತ್ತೇಜನ ನನ್ನ ಈ ಕೆಲ್ಸಗಳಿಗೆ ಪ್ರೇರಣೆಂತ ಹೆಮ್ಮೆಂದ ಹೇಳ್‌ವ ಶ್ರೀ ಪೇರಿಯನ ಪೂವಯ್ಯನವು ಮುಂದೆನ ಜನಾಂಗಕ್ಕೆ ದಾರಿ ದೀಪ.

## ಸೋಮಾರಿ ಹೈದಂಗಳಿಗೆ ದಾರಿ ದೀಪ

# ದಂಬೆಕೋಡಿ ಬಿ. ಸುಬ್ರಾಯನವು

—ಪಿ. ಜಿ. ಅಂಬೆಕಲ್



ಪ್ರಾಯ ಹೋದ ಕಾಲಲಿ ತೊಟ್ಲ್‌ಲಿ ಕುದ್ದ್ ತನ್ನ ಮಕ್ಕ, ಪಿಳ್ಳೆಕಳ್‌ಂದ ಒಚ್ಚ್‌ಸಿಕಂಬ ಯೋಗ ಕೆಲವು ಜೆನಕ್ಕೆ ಮಾತ್ರ ಇರಿಕ್ಯು ಸಾಕ್! ಅಂತ ಯೋಗ ಪುರ್‌ಸ ನಮ್ಮ ಶ್ರೀ ದಂಬೆಕೋಡಿ ಬಿ. ಸುಬ್ರಾಯನವು. ಇವು ಮಡಿಕೇರಿ ತಾಲ್ಲೂಕು ಬಿಳಿಗೇರಿ ಗ್ರಾಮಲಿ ತಾರೀಕ್ ೨೪-೮ ೧೯೦೭ರಲ್ಲಿ ಹುಟ್ಟಿದೊ. ದಿ|| ದಂಬೆಕೋಡಿ ಬೋಪಣ್ಣ ಮತ್ತೆ ದಿ|| ನೀಲಮ್ಮನವು ಇವರ ಅಪ್ಪ, ಅವ್ವ.

ಶ್ರೀ ಸುಬ್ರಾಯನವು ಹಾಕತ್ತೂರು ಮತ್ತೆ ಮೂರ್ನಾಡ್‌ಲಿ ತಮ್ಮ ಪ್ರಾಥಮಿಕ ವಿದ್ಯೆನ ಮುಗ್ಸಿ ಮಡಿಕೇರಿ ಸೆಂಟ್ರಲ್ ಹೈಸ್ಕೂಲ್‌ಲಿ V ಫಾರ್ಮ್‌ನವರೆಗೆ ಓದಿ ಸಂಸಾರದ ಬಡತನಂದ ಅರ್ಧಲೇ ಹೈಸ್ಕೂಲ್ ವಿದ್ಯಾಭ್ಯಾಸನ ನಿಲ್ಸಿದೊ.

ಹದ್‌ನೈದ್ ರೂಪ್ಯಾ ಸಂಬಳಕ್ಕೆ ಕುಸುಬೂರ್ ತೋಟಲಿ ರೈಟ್ರಾಗಿ ಕೆಲ್ಸಕ್ಕೆ ಸೇರ್ದ ಇವು ಯುರೋಪಿಯನ್ ತೋಟ, ಕುಪೆಸಿ ತೊಟಗಳ್ಲೊ ಕೆಲ್ಸ ಮಾಡ್ದೊ. ಇಪ್ಪತ್ತೆಂಟ್ ವರ್ಷ ಕನ್ಸಾಲಿಡೇಟೆಡ್ ಕಾಫಿ ತೋಟಲಿ ಕೆಲ್ಸ ಮಾಡ್ದೊವು ಇವು. ಇವು ತನ್ನ ಉದ್ಯೋಗಲಿ ಬಡ್ತಿ ಆಗ್‌ತಾ 'ಸಿನಿಯರ್ ಸಿಲೆಕ್ಷನ್ ಗ್ರೇಡ್ ಸುಪರಿಂಟೆಂಡೆಂಟ್ ಆಗಿ ಭಾರತಲೇ ಬಾರೀ ಹೆಚ್ಚ್‌ನ ಕಾಫಿ ಬೆಳೆ ತೆಗ್ದ ಕೀರ್ತಿ ಇವರ್ದ್.

೧೯೩೪ರಲ್ಲಿ ದಿ|| ಬಡ್ಡನ ಬೆಳ್ಳಪ್ಪ ಮಾಸ್ತ್ರ ಮಗ್ಳ್ ಸೌ|| ರಾಮಕ್ಕನವರ್ನ ಮೊದುವೆ ಆದೊ. 'ಇಬ್ರೊರಾಗಿ ಸಂಸಾರ ಪ್ರಾರಂಬ ಮಾಡ್ದ ನಾವು ಕೆಲ್ಸಂದ ಪೆನ್ಸನ್ ಆಕನ ಹದ್ನಾಲ್ಕ್ ಜೆನ ಆಕಂಡ್ ಬಂದೊ'ಂತ ಹೆಮ್ಮೆಲಿ ಹೇಳ್‌ವ ಸುಬ್ರಾಯನವರ್ದ್ ತುಂಬು ಸಂಸಾರ. ಪ್ರಾಯಕ್ಕೆ ಬಂದ ಮಕ್ಕಳ ದೋಸ್ತಿಗಳ ಹಾಂಗೆ ಕಾಣೊಕುಂತೇಳ್‌ವ ಹಿರಿಯರ ಮಾತ್ ನಾಂಗೆ ಜೀವನಲಿ ನಡ್‌ಕಂಡ್ ಬಂದೊಳದ್ ಒಳ್‌ದೊವುಕ್ಕೆ ಒಂದ್ ಮಾದರಿ. ತನ್ನ ಮೂರ್ ಮಕ್ಕಳ ಪರದೇಶಕೆ ಕಳ್ಸಿದ ಕೀರ್ತಿನೂ ಶ್ರೀ ಸುಬ್ರಾಯನವರ್ದ್. ಬರೀ ಒಂದ್ ಎಕ್ರೆ ಪಿತ್ರಾರ್ಜಿತ ಆಸ್ತಿ ಇದ್ದ ಇವು ಇಂದ್ ಸುಮಾರ್ ೧೯೦ ಎಕ್ರೆ ತೋಟ, ಭೂಮಿ ಇರ್‌ವ ಒಬ್ಬ ಆದರ್ಶ ಕಾಫಿ ತೋಟಗಾರ.

ತನ್ನ ಸೊಂತ ಸ್ರಮಂದ ದೊಡ್ಡಂವ ಆದ ಹಾಂಗೆ, ತನ್ನ ಕೈಲಾದಷ್ಟ್ ಸಮಾಜ ಸೇವೆನೂ ಮಾಡ್ತವೊಳೊ. ತಮ್ಮ ಆಸ್ ಪಾಸ್‌ನ ಶಾಲೆಗಳಿಗೆ ದುಡ್ಡ್‌ನ ಸಾಯಮಾಡ್ದ್ ಅಲ್ಲದೆ ಕೊಡಗ್ ಗೌಡ ವಿದ್ಯಾಸಂಘದ ಡೈರೆಕ್ಟ್ರ ಆಕಂಡ್ ಬಾಳ ಕೆಲ್ಸ ಮಾಡಿಯೊಳೊ. ಮೈಸೂರ್‌ನ 'ವೆಂಕಟೇಶ್ವರ ವಿದ್ಯಾರ್ಥಿ ನಿಲಯ'ಕ್ಕೆ ಒಂದ್ ಕೋಣೆ ಕಟ್ಟ್‌ಸಿಕೊಟ್ಟೊಳೊ. ಮಡಿಕೇರಿಲಿ ಕಟ್ಟ್‌ಸುವ ಕಲ್ಯಾಣ ಮಂಟಪಕ್ಕೂ ಸಾಯ ಮಾಡಿಯೊಳದಲ್ಲದೆ ಅದರ ಕಜಾಂಚಿ ಆಗಿ ಈ ಪ್ರಾಯಲೂ ಚಂದ ವಸ್ಲ್ ಮಾಡಿಕೆ ಹೋದು ನೋಡ್ರೆ ಅವ್‌ಕೆ ಇರುವ ಜನಾಂಗ ಪ್ರೀತಿ ಅಭಿಮಾನ ಬಾಕಿಯೊವು ಅನ್‌ಸರ್‌ಸ್‌ವಂತದ್. ಇಂದ್‌ಗೂ ಪ್ರಾಯದ ಹೈದಂಗಳಾಂಗೆ ಕೆಲ್ಸ ನಡ್‌ಸುವ ಇವು ನೂರಾರ್ ವರ್ಸ ಬಾಳಿ, ಮರಿ ಪಿಳ್ಳೆಕಳ್‌ಂದೊಳೂ ತೊಟಗಿಲಿ ಒಚ್ಚ್‌ಸಿಕಂಬ ಯೋಗ ಬರ್ಲಿ.

# ಸಾಹಿತ್ಯಲಿ ಮಿಂಚಿದ
# ಟಿ. ಜಿ. ಮುಡೂರು

—ಶ್ರೀಮತಿ ಕನಕ ಪಿ. ಅಂಬೆಕಲ್, ಚೆಟ್ಟಳ್ಳಿ



'ಕಾಡಮಲ್ಲಿಗೆ' ತೇಳ್ವ ಸಣ್ಣ ಮಕ್ಕಳಿಗಾಗಿ ಬರ್ದ ಕವನ ಸಂಕಲ್ನಂದ ಸಾಹಿತ್ಯರಂಗಕ್ಕೆ ಪ್ರವೇಶ ಮಾಡ್ದ ಶ್ರೀ ಟಿ. ಜಿ. ಮುಡೂರವು ಕಾಡ್‌ನ ಮಲ್ಲಿಗೆನಾಂಗೆ ಜೀವನನೂ ಸಾಗ್ಸ್‌ತ್ತಾ ಇರೊವು. ಮುಡೂರು ತೇಳ್ವ ತಮ್ಮ ಮನೆ ಹೆಸ್ರ್‌ಂದಳೇ ಸಾಹಿತ್ಯ ಲೋಕಲಿ ಚಿರಪರಿ ತರಾದ ಶ್ರೀ ತಮ್ಮಯ್ಯಗೌಡ ಮುಡೂರವು ತಾ॥ ೧-೨-೧೯೩೦ರ್ಲಿ ಹುಟ್ಟಿದೊ. ಇವರ ಅಪ್ಪ ಶ್ರೀ ಸುಬ್ಬಪ್ಪಗೌಡ ಹಾಂಗು ಅವ್ವ ಶ್ರೀಮತಿ ಬಾಲಕ್ಕ. ಕೇರಳ ಕನ್ನಡ ನಾಡ್‌ನ ಗಡಿಲಿ ಅಡೂರು ದೇವಸ್ಥಾನಕ್ಕೆ ಹಕ್ಕಲೆ ಲಿರುವ ಇವರ ಮನೆತನ ಮುಡೂರು.

೧೯೪೮ರ್ಲಿ ಪ್ರಾಥಮಿಕ ಶಾಲೆಯ ಮಾಸ್ಟ್ರಾಗಿ ಉದ್ಯೋಗಕ್ಕೆ ಕಾಲಿಸಿದ ಇವು ೧೯೫೨ರ್ಲಿ ಮದ್ರಾಸ್ ವಿಶ್ವವಿದ್ಯಾನಿಲಯಲಿ ಕನ್ನಡ ವಿದ್ವಾನ್ ಪದವಿ ಪಡ್ದೊ. ಆ ಮೇಲೆ ಕೆಲ್ವು ವರ್ಷ ಹೈಸ್ಕೂಲ್‌ಗಳ್ಲಿ ಕನ್ನಡ ಪಂಡಿತ ಆಗಿ ಸೇವೆ ಸಲ್ಸಿದ ಈ ಪ್ರತಿಭಾವಂತ, ಮೈಸೂರು ವಿಶ್ವವಿದ್ಯಾನಿಲಯಂದ ಬಿ.ಇಡಿ. ಮತ್ತೆ ಎಂ.ಎ. ಪದವಿ ಗಳ್ನೂ ಪಡ್‌ಕಂಡೊ. ಸರ್ಕಾರಿ ಉದ್ಯೋಗಂದ ಪಿಂಚಣಿ ಆಕೆ ಮುಂಡೆ ಒಂದ್ ವರ್ಷ ಹೈಸ್ಕೂಲ್ ಹೆಡ್‌ಮಾಸ್ಟ್ರಾಗಿ, ಆಮೇಲೆ ಜೂನಿಯರ್ ಕಾಲೇಜಿಲಿ ಕನ್ನಡ ಲೆಕ್ಚರ್ ಆಗಿ ಸೇವೆ ಸಲ್ಲಿಸಿದೊ. ಮೊಯಿಸಂಗೆ ಜೀವನಲಿ ಛಲ ಇದ್ದರೆ ಹೇಂಗೆ ಬಾಳಕ್‌ತೇಳ್ದಕ್ಕೆ ಇವು ನಾವ್‌ಗೆ ದಾರಿ ದೀಪ.

೧೯೪೮ರ್‌ಂದಳೇ ಸಾಹಿತ್ಯ ಸೇವೆಗೆ ನಾಂದಿ ಹಾಡ್ದ ಇವು ಇತ್ತೀಚೆಗೆ ಪತ್ರಿಕೆಗಳಿಗೆ ಬರೆದು ಕಮ್ಮಿ ಮಾಡೆಳೊ. ಹಿಂದೆ-ಜಯಂತಿ, ಜೀವನ, ಪ್ರಬುದ್ಧ ಕರ್ನಾಟಕ, ಚಿತ್ರ ಗುಪ್ತ, ಕನ್ನಡ ನುಡಿ ಈ ಪತ್ರಿಕೆಗಳ್‌ಲಿ ಇವರ ಲೇಖನಗ ಪ್ರಕಟ ಆಗ್‌ತ್ತಿದ್ದೊ. ಕಾದಂಬರಿ ಒಂದರ ಬುಟ್ಟ್, ಸಾಹಿತ್ಯದ ಎಲ್ಲಾ ಪ್ರಕಾರಗಳ್ಲಿ ಕೃತಿ ರಚನೆ ಮಾಡ್ದ ಹೆಗ್ಗಳಿಕೆ ಇವರ್ದ್. ಶಾಲೆ ಮಕ್ಕಳಿಗೆ ವಾರ್ಷಿಕೋತ್ಸವಕ್ಕೆ ಆಡಿಕೆ ಒಳ್ಳೆ ನಾಟಕ ಸಿಕ್ಕಿತ್ಲರೆ ಹಿಂಬೊತ್‌ಂದ ಬೊಳ್ಪಾಕನ ಒಂದು ನಾಟಕ ಬರ್ದ್ ತಾವ ಇವು ಪ್ರಕಟ್ಸಿದ ಕೃತಿಗಳ್ಲಿ ಹೆಚ್ಚಿದ್ದ್ ನಾಟಕವೇ. ಈ ನಾಟಕಗಳ ಹೆಚ್ಚಿನ ಕಡೆ ಆಡಿಕೂ ಆಡ್ಯೊಳೊ. ಸಖಿ, ಶಿವಕುಮಾರಿ ಇವರ ಮಕ್ಕಳ ನಾಟಕ ಗಾದ್ರೆ, ಮುಕುಟೋರು ಭಂಗ, ಸಾವೊಲಿದ ಸಾವಿತ್ರಿ ಛಂದೋ ನಾಟಕಗ. ಮರಳಿ-ಮನೆಗೆ, ಸಾಮಾಜಿಕ ನಾಟಕಗ, ಜೋಕುಲೆ ಬುದ್ಧಿ ಇವರ ತುಳು ಪ್ರಹಸನ. ಇದಲ್ಲದೆ 'ಪ್ರಥಮ ಸ್ವಾತಂತ್ರ್ಯ ಸಂಗ್ರಾಮ' ತೇಳ್ವ ಐತಿಹಾಸಿಕ ಯಕ್ಷಗಾನ ಬಯಲಾಟ ಬರ್ದ ಕೀರ್ತಿ ಇವರ್ದ್.

೧೯೫೨ರ್‌ಂದಳೇ ಜಾನಪದ ಸಾಹಿತ್ಯ ಸಂಗ್ರಹದ ಕಾರ್ಯ ಮಾಡ್ದ ಇವು ಬರ್ದ 'ಹೊಸ ಕೆರೆಯ ಹೊನ್ನಮ್ಮ' ತೇಳ್ವ ಜಾನಪದ ಗೀತಾ ಸ್ಪರ್ಧೆಲಿ ಮೊದಲ್ನೇ ಇನಾಮು ಸಿಕ್ಕಿಟು. ಗುರುವನ ಗುಡಿ, ಶಿವ ಸಂಸಾರ ಇವರ ಬಾಕಿ ಜಾನಪದ ಗೀತಾ ರೂಪಕಗ. ಜೀವದಯಾಷ್ಟಮಿ ಇವರ ಗದ್ಯಾನುವಾದ ಆದರೆ-ಅಬ್ಬಿಯ ಮಡಿಲು ಕಣ್‌ಕವನು ತೆರೆದಾಗ ಕತಾ ಸಂಕಲನಗ, ಕಾಡ ಮಲ್ಲಿಗೆ, ಹೊಸತು ಕಟ್ಟು, ಶಿಶುಗೀತೆ, ಗಾದೆ, ನವದಿಗಂತ ಕವನ ಸಂಗ್ರಹ. ಇಷ್ಟಲ್ಲದೆ ಇನ್ನೂ ಬಾಳಷ್ಟ್ ಪ್ರಿಂಟ್ ಆಗದ ಕೃತಿಗ ಒಳೊ. ಬಾರಿ ಸಮೆಂದ 'ಅಮರ ದಂಗೆ' (ಕಲ್ಯಾಣಪ್ಪನ ಕಾಟ ಕಾಯಿ) ತೇಳಿ ಗೌಡ ಕನ್ನಡಲಿ ನಾಟಕವೊಂದು ಬರಿಯೊಕು ತೇಳ್ವ ಇವರ ಕನ್‌ಸ್ ಆದಷ್ಟ್ ಬೇಗ ನನ್‌ಸ್ ಆಗಲಿ.

ಕೃತಿ ರಚನೆಯೊಟ್ಟಿಗೆ ಪ್ರಕಾಶನ ಹೊರೆನೂ ಹೊತ್ತ್‌ಕಂಡ ಇವು ಸಂಗಮ ಕಲಾ ಸಂಘ, ಕಲ್ಮಡ್ಕ, ಕಾಜಾಣ ಸಾಹಿತ್ಯ ಬಳಗ-ಬೆಳ್ತಂಗಡಿ ನೊಡ್ಲಾದ ಸಾಹಿತ್ಯ ಸಂಘಗಳ ದೋಸ್ತಿಗಳೊಟ್ಟಿಗೆ ಕಟ್ಟಿದೊ. ಈಗ ಪ್ರತಿಮಾ ಪ್ರಕಾಶನ-ಪಂಜದ ಮೂಲಕ ಸಾಹಿತ್ಯ ಪ್ರಕಾಶನ ಮಾಡ್ತಾ ಒಳೊ. ದಕ್ಷಿಣಕನ್ನಡ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತ್‌ನ ಪ್ರತಿನಿಧಿ ಆಗಿ ಈಗೊಳೂ ಕೆಲ್ಸ ಮಾಡ್ತ ಒಳದ್ ನೋಡ್ರೆ ಪಿಂಚಿಣಿ ಸಿಕ್ಕಿದೂ ಸಾಹಿತ್ಯ ಸಂಗಲಿ ಪಿಂಚಿಣಿ ಪಡಿಯಕಿಲ್ಲೆ ತೇಳ್ದ್ ಅವರ ಹಟ ಕಂಡದೆ. ಚುರುಕು ನಡಿಗೆನ ತೀಕ್ಷ್ಣ ಕಣ್ಣ್‌ಗಳ ಇವರ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದ್. ಇವರ್‌ಂದ ಕನ್ನಡ ಸಾಹಿತ್ಯಕ್ಕೆ ಇನ್ನೂ ಕೆಲ್ವು ಅಮೂಲ್ಯ ಕೊಡುಗೆ ಸಲ್ಲಲಿ, ಆ ಮೂಲಕ ನಮ್ಮ ಜನಾಂಗದ ಕೀರ್ತಿ ಪತಾಕೆ ಹಾರಲಿ.

---

# ಸರಸತಿ ಅಕ್ಕ

ಅಕ್ಕರೆಯಕ್ಕ ಬಂದೊಳೊ ಮಕ್ಕ ನಿನ್ನ ಕಾಂಬಕೆ
ಸಕ್ಕರೆ ತುಪ್ಪ ತಂದೊಳೊ ನಾವು ನಿಂಗೆ ಕಾಣಿಕೆ
ಸರಸತಿಯಕ್ಕ ಬರಸತದಕ್ಕ ಸಾರದ ಚಿನ್ನಕ್ಕ
ರಸ ಬರ್‌ವಕ್ಕ ನವರಸದಕ್ಕ ಮಾತ್‌ನ ಮಲ್ಲಕ್ಕ
ತಿಳ್‌ದವರಕ್ಕ ಶಾರದೆಯಕ್ಕ ಸುಜನರ ಸುಬ್ಬಕ್ಕ
ಬೊಮ್ಮನ ಹೆಣ್ಣೆ ಎಲ್ಲರ ಕಣ್ಣೆ ಬಣ್ಣಲಿ ಮೇಲಾಗಿ
ನಿನ್ನಾ ಬಣ್ಣಕ್ಕೆ ಎಂತದ್ ಬ್ಯಾಡಾ ಸಂತೆಲಿ ಏನಿಲ್ಲೆ
ವೀಣೆ ಬಾರ್ಸ್‌ದೊಂದ್ ಕೈಲಿ ಕೇಳಿಕೆ ಪೊರ್ಲೆಷ್ಟ್
ಇನ್ನೊಂದ್ ಕೈಲಿ ಪುಸ್ತಕ ಇದ್ರ್ ಕಾಂಬಕೆ ಲ್ಯಾಕೆಷ್ಟ್
ಅಕ್ಕರ ವಿದ್ಯೆ ಬೇಕೊಂತೇಳಿ ನಿನ್ನ ಕಾಂಬಕೆ
ಮಕ್ಕ ನಾವು ಬಂದೊಳೊ ನೋಡು ಬಿದ್ದ್ ಬೇಡಿಕೆ
ಅಕ್ಕರೆಯಕ್ಕ ಎಲ್ಲವರಕ್ಕ ಅಕ್ಕರಕೊಡ್ ಬ್ಯಾಗ
ಅಕ್ಕರೆಯಕ್ಕ ನಾಲಿಗೆ ಮ್ಯಾಲೆ ಅಕ್ಕರ ದಯಮಾಡ್
ಅಕ್ಕರೆಯಕ್ಕ ಬಂದೊಳೊ ಮಕ್ಕ ನಿನ್ನ ಕಾಂಬಕೆ
ಸಕ್ಕರೆ ತುಪ್ಪ ತಂದೊಳೊ ನಾವು ನಿಂಗೆ ಕಾಣಿಕೆ.

—ಡಾ|| ಬೇಕಲ್ ಸೋಮನಾಥ, ಕರಿಕೆ

# ವಕೀಲ ವೃತ್ತಿಲಿ ಹೆಸ್ರ್ ಪಡ್ದ ಮಾವಜಿಯವು

—ಶ್ರೀಮತಿ ಅನುರಾಧ ಬಾಲಕೃಷ್ಣ, ಕಡ್ಯ



ಗೌಡ ಜನಾಂಗಲಿ ಮಾವಾಜಿಯವರ್ದ್ ಹೆಸ್ರ್ ಪಡ್ದ ಮನೆತನ. ಕೊಡಗ್ ಜಿಲ್ಲೆ ಮಡಿಕೇರಿ ತಾಲ್ಲೂಕುನ ಪೆರಾಜೆ ಗ್ರಾಮದ ಮಾವಾಜಿ ಮನೆತನಲಿ ಹುಟ್ಟಿದ ಕೂಸು ಪ್ರೊ॥ ಜನಾರ್ಧನನವು. ಇವರ ಅಯ್ಯಪ್ಪನ ಹೆಸ್ರ್ ರಾಮಣ್ಣಗೌಡ ಮತ್ತ ಚಿನ್ನಮ್ಮಾತ. ಇವರ ಅಪ್ಪ ಗೌರವಸ್ತ ಜಮೀನ್ದಾರರಾಗಿದ್ದವು. ಅವ್ವ ಚಿನ್ನಮ್ಮನವು ಗುಣ ನಡ್ತೆಲಿ ತುಂಬಾ ಒಳ್ಳೆವು. ಈ ದಂಪತಿಗಳ ಹಿರಿ ಮಂಜ ಆಗಿ ಹುಟ್ಟಿದ ಇವುಕೆ ಇಬ್ಬೊರ್ ತಮ್ಮಂದ್ರ್ ಮತ್ತೆ ಮೂರ್ಜ ನ ತಂಗೆಕ ಒಳೊ.

ಪ್ರೊ॥ ಯಂ. ಆರ್. ಜನಾರ್ಧನನವು ಮಡಿಕೇರಿನ ಸೆಂಟ್ರಲ್ ಹೈಸ್ಕೂಲ್ಲಿ ಎಸ್.ಎಸ್.ಎಲ್.ಸಿ.ನ ೧೯೪೮ರಲ್ಲಿ ಪಾಸ್ ಮಾಡಿ ೧೯೪೯-೫೦ರಲ್ಲಿ ಮೈಸೂರು ಸೈಂಟ್ ಫಿಲೋಮಿನಾ ಕಾಲೇಜಿಲಿ ಇಂಟರ್ ಮೀಡಿಯಟ್‌ನ ಮುಗ್ಸಿ ಅಲ್ಲಿನ ಮಹಾರಾಜ ಕಾಲೇಜಿಲೆ ೧೯೫೦-೫೨ರಲ್ಲಿ ಬಿ. ಎ. ಪಾಸ್ ಮಾಡ್ದೊ. ಓದಿಕೆ ಬಾಳ ಉಸರಾಗಿದ್ದ ಇವ್ಕೆ ಈ ಸಂದ್ರ್‌ಪಲಿ ಮೂರು ಚಿನ್ನದ ಪದಕ ಇನಾಮು ಆಗಿ ಸಿಕ್ತ್. ಮುಂದೆ ವಿಶ್ವವಿದ್ಯಾಲಯದ ಪ್ರತಿಯೊಂದು ಪರೀಕ್ಷೆಲೂ ಸುರುನ ಸ್ಥಾನನ ಪಡ್ಕಂಡೇ ೧೯೫೨-೫೪ರಲ್ಲಿ ಬಿ.ಎಲ್ ಮಾಡಿ ೧೯೬೦-೬೨ರಲ್ಲಿ ಬೆಂಗ್ಳೂರ್ನ ಗೌರ್ಮೆಂಟ್ ಕಾಲೇಜಿಲಿ ಎಂ.ಎಲ್. ಮಾಡಿ ಒಂದು ಚಿನ್ನದ ಪದಕನ ಪಡ್ಕಂಡೊ.

ಬೆಂಗ್ಳೂರ್ಲಿ ಲಾಯರ್ ಆಗಿ ಕೆಲ್ಸ ಸುರು ಮಾಡ್ದ ಇವು ಹಣ ದಿನಲೇ ಹೆಸ್ರ್‌ವಾಸಿ ಲಾಯರ್‌ಂತೇಳಿ ಜೆನಂಗಳ ಪ್ರೀತಿ ಗಳ್ಸಿದೊ. ಬೆಂಗ್ಳೂರ್‌ಲೇ ಕಳ್ದ ೨೮ ವರ್ಷಗಳ್‌ಂದ ಲಾ ಕಾಲೇಜಿನ ನ್ಯಾಯ ಸಿದ್ಧಾಂತದ ಪ್ರೊಫೆಸರ್ ಆದ ಇವ್ ಈಗ ಬೆಂಗ್ಳೂರ್ನ ವಿವೇಕಾನಂದ ಲಾ ಕಾಲೇಜಿನ ಪ್ರಿನ್ಸಿಪಾಲ್ ಆಕಂಡ್ ಕೆಲ್ಸ ಮಾಡ್ತೊಳೊ. ಸೂಕ್ಷ್ಮ ವಿಚಾರಧಾರೆ ಮತ್ತೆ ಉಪನ್ಯಾಸಗಳ್‌ಂದ ಮಕ್ಕಳ (ವಿದ್ಯಾರ್ಥಿಗಳ) ಅಚ್ಚಿಮೆಚ್ಚಿನ ಗುರು. ೧೯೬೭ರಲ್ಲಿ ಅಮೇರಿಕಾ, ಇಂಗ್ಲೆಂಡ್, ಇಟಲಿ, ಕೆನಡಾ, ಪ್ರವಾಸಗಳ್ನೆಲ್ಲಾ ಮಾಡ್ದ ಇವು ಅಮೇರಿಕಾ ವಿಶ್ವವಿದ್ಯಾಲಯಲಿ ನ್ಯಾಯ ವಿಚಾರಗಳ ಬಗ್ಗೆ ಬಾಸಣ ಮಾಡಿ ಅಲ್ಲಿನವರ ಪ್ರೀತಿನ ಗಳ್ಸಿದಲ್ಲದೆ ಒಳ್ಳೆ ಲಾಯರ್‌ಂತೇಳಿ ಹೊರ್ದೇಶದವರ್‌ಂದ ಬೆನ್ನ್ ತಟ್ಟಿಸಿಕಂಡೊಳೊ "A word for Beginners" ಎಂಬ ಪುಸ್ತಕ ಅಲ್ಲದೆ ನ್ಯಾಯ ಶಾಸ್ತ್ರಗಳ ಬಗ್ಗೆ ಬರ್ದ ಪುಸ್ತಕಗ ಒಳೊ. ಸಾಹಿತ್ಯ ವಿಮರ್ಶೆ, ತತ್ವ, ಧರ್ಮಗಳ ಬಗ್ಗೆ ಇವುಕೆ ಬಾಳ ಆಸಕ್ತಿ.

ಜನಾರ್ಧನನವರ ಸಣ್ಣ ತಂಗೆ ಶ್ರೀಮತಿ ಸುಗಂಧಿಯವು ಇಂದ್ ಅಮೇರಿಕಾಲಿ ಪ್ರಸಿದ್ಧ ವಿಜ್ಞಾನಿ ಆಕಂಡ್ ಇದರ್ದ ನಮಿಗೆಲ್ಲಾ ಹೆಮ್ಮೆನ ಸಂಗ್ತಿ. ಇವರ ತಮ್ಮ ಬಾಲಕೃಷ್ಣನವು, B.Sc , (Ag) ಪದ್ವಿ ಪಡ್ದದಲ್ಲದೆ ಒಳ್ಳೆ ಮಾರ್ಕ್ ತೆಗ್ದ್ ಚಿನ್ನದ ಪದಕನ ಗಳ್ಸಿಯೊಳೊ. ಬಾಲಕೃಷ್ಣನವು ಒಳ್ಳೆ ಮಾತ್‌ಗಾರ ಅಲ್ಲದೆ ಕೃಷಿ ವಿಚಾರಗಳ ಬಗ್ಗೆ ಜೆನಂಗಳಿಗೆ ತುಂಬಾ ಸ್ಹಾಯ ಮಾಡ್ತ ಒಳೊ. ಇವು ಸಮಾಜ ಸೇವಕನೂ ಹವುದು. ಜನಾರ್ಧನನವರ ಹೆಣ್ಣ್ ಲಲಿತಾ ಜನಾರ್ಧನನವು ಕೂಡಾ ಗಂಡನಂಗೆ ವಕೀಲ್ರ್ ಆಕಂಡೊಳೊ. ಜನಾರ್ಧನವರ ಮತ್ತೊಬ್ಬ ತಮ್ಮ ಅಚ್ಯುತನವು ಬೆಂಗ್ಳೂರ್ಲಿ ಬಿ. ಇ. ಎಲ್. ಲಿ ಇಂಜಿನಿಯರಾಗಿ ಕೆಲ್ಸ ಮಾಡ್ತ ಒಳೊ. ಪ್ರೊ॥ ಮಾವಜಿ ಜನಾರ್ಧನನವು ಇಂದ್‌ನ ಹೈದಂಗಳಿಗೆ ಮಾರ್ಗದರ್ಶಕ; ಇವರ ಹೆಸ್ರ್ ಮತ್ತಸ್ಟ್ ಮುಂದೆ ಬಂದ್ ನಮ್ಮ ಸಮಾಜಕ್ಕೆ ಕೀರ್ತಿ ತರುನಂತಾಗಲಿ. ನಮ್ಮ ಸಮಾಜಕ್ಕಾಗಿ ತುಂಬಾ ಚಿಂತನೆ ಮಾಡ್ವ ಜನಾರ್ಧನನವು ಸರಳ ವ್ಯಕ್ತಿ.

## ಇಳಿ ವಯ್ಸ್‌ಲಿ ಸಾಹಿತ್ಯಕ್ಕೆ ದಾಪುಗಾಲ್ ಹಾಕಿದ

# ಕೆದಂಬಾಡಿ ಜತ್ತಪ್ಪ ರೈಗ

—ಜ. ಬ. ಚೆಟ್ಟಿಮಾಡ, ಸುಳ್ಯ



ಗಿನ್ನೆಸ್ ದಾಖಲೆಗೆ ಸೇರಕಾದಂತ ಒಂದು ಹೆಸ್ರ್ ಶ್ರೀ ಕೆದಂಬಾಡಿ ಜತ್ತಪ್ಪ ರೈಗಳ್ದ್‌ಂತೇಳ್ರೆ ತೊಪ್ಪಾಕಿಲ್ಲೆಂತ ಕಂಡದೆ. ಯಾಕೆಂತೇಳ್ರೆ ಸಾದಾರ್ಣದ ಜೆನಗಳ, ಅರ್ವತ್ತ್ ವರ್ಸದ ನಂತ್ರ ಕೇಳವೆ ಇರ್ದುಲೆ. ಅಂದರೆ ಆ ವಯ್ಸ್ ನಿವೃತ್ತ ಪ್ರಾಯಂತ ಅರ್ತ. ಆ ಪ್ರಾಯಲಿ ಬರಿಯಕೆ ಹೊರ್ಟ್, ಸುರುನ ಪುಸ್ತಕಕ್ಕೆ "ರಾಜ್ಯ ಸಾಹಿತ್ಯ ಎಕಾಡೆಮಿಯ ಪ್ರಶಸ್ತಿ" ಪಡ್ದೊವು ಇವು. ಇಂದ್ ಕನ್ನಡದ ಬೇಟೆ ಸಾಹಿತ್ಯಲಿ ಕೇಳಿ ಬಾವ ಒಂದೇ ಹೆಸ್ರ್ ಕೆದಂಬಾಡಿ ಜತ್ತಪ್ಪ ರೈಗಳ್ದ್. ಆ ಕಾರ್ಣಂದಳೇ ರಾಷ್ಟ್ರಕವಿ ಕುವೆಂಪು ಅವ್ರ್ದ "ಬಂಟ್ರ್‌ಲಿ ಒಬ್ಬ ಬಂಟಾತ" ಹೇಳ್ಸ ಕೊಂಡೊಳೊ.

ಮಲ್ನಾಡ್‌ನ ಪುತ್ತೂರ್ ತಾಲ್ಲೂಕ್ ಬಂಟ್ರ ಗ್ರಾಮದ ಪಿಲಿಮಜಲ್‌ಲಿ ೧೯೧೯ರ್ಲಿ ದಾಸ ರೈ ಮತ್ತೆ ಸೀತಮ್ಮ ದಂಪತಿಗಳ ಕೂಸಾಗಿ ಜತ್ತಪ್ಪರೈಗ ಹುಟ್ಟಿದೊ. ಅಯ್ಯೆಪ್ಪಂಗೆ ಇವು ಎರ್ಡ್ನೆ ಮಂಜ. ಇವರ ಅಂಣ ದಿ॥ ನಾರಾಯಣ ರೈಗ ಪ್ರಸಿದ್ಧ ಕ್ರಿಮಿನಲ್ ವಕೀಲ್ರ್ ಆಗಿದ್ದೊ. ಜತ್ತಪ್ಪರೈಗ ಹೇಳ್ವಂತ ಪದ್ವಿಗಳ (ವಿದ್ಯೆ) ಪಡೆಯದಿದ್ದರೂ–ಇಂದ್ ಪದವಿ ತರ್ಗತಿಗೆ ಪಾಟ ಮಾಡ್ವಷ್ಟ್ ಜ್ಞಾನ ಪಡ್ದೊಳೊ. ಸ್ವಾಧ್ಯಾಯ ನಿರತನಾದ ಇವು ಇಂದ್ ಸುಖ ಕಾಂಬೊದು ಓದುದರ್ಲಿ–ಬರಿಯೊದರ್ಲಿ. ಹೀಂಗೆ ಸೊಂತ ಓದಿ ಅಬ್ಬೆಸ ಮಾಡಿ, ಅದೆಲ್ಲರ ಅರ್ಗಿಸಿ ಕಂಡ ಮೇಲೆ ವೃದ್ಧಾಪ್ಯಕ್ಕೆ ಕಾಲಿಡುವ ಪ್ರಾಯಲಿ ಬರ್ದೊ. ಆದರ್ಂದಳೇ ಅವರ ಬರೆಹ ಅರೆ–ಬರೆ ಬೆಂದ ಬರೆಹ ಅಲ್ಲ; ಪಕ್ವತೆನ ರಸಗ ವಳೊ. ಇದಿಕೆ ಸಾಕ್ಷಿ ೧೯೭೯ರ್ಲಿ ಇವು ಬರ್ದ ಸುರುನ ಪುಸ್ತಕ "ಬೇಟೆಯ ನೆನಪುಗಳು" ೧೯೮೦ರ್ಲಿ ರಾಜ್ಯ ಪ್ರಶಸ್ತಿ ಪಡ್ದುಟು. ಇದ್ ವಿಶ್ವ ಸಾಹಿತ್ಯ ಸಮ್ಮೇಳನಕ್ಕೆ ವಿಚಾರ ಸಾಹಿತ್ಯಾಂತ ಆಯ್ಕೆ ಆಗಿ ತ್ರೀತಿಯ ಮುದ್ರಣದ ಅಚ್ಚಾಗುಟು. ಸುರುನ ಪುಸ್ತಕಕ್ಕೆ ಇಂತ ಗವುರವ ಪಡ್ದ ಸಾಹಿತಿಗ ಬೇರೆ ಯಾರಾರ್ ಒಳೊನಾ ?

---

**ತುಳು ನಾಡ್‌ನ ಸಾಹಿತಿ ಜತ್ತಪ್ಪರೈಗ ಸಾಹಿತ್ಯಕ್ಕೆ ಕಾಲಿಡಿದ್ ತನ್ನ ಅರ್ವತ್ತ್ ವರ್ಸ ಪ್ರಾಯಲಿ! ಇವರ ಸಾಧನೆ ಹೆಮ್ಮೆಪಡ್‌ವಂತದ್. ಸಮಾನ ಬಾವನೆವುಳ್ಳ ಇವುಕೆ ಗೌಡ ಜನಾಂಗದವರ ಬಗ್ಗೆ ಬಾಳ ಅಬಿಮಾನ ಮತ್ತೆ ವಿಶ್ವಾಸ.**

---

ಇವರ ಇನ್ನೊಂದು ಕೃತಿ "ಈಡೊಂದು ಹುಲಿಯೆರಡ್" ಸಾ 'ಬೇಟೆಯ ನೆನಪುಗಳು' ಜಾಡ್‌ಲೇ ಬರ್ದದ್ ಇದ್ ಸಾ ಅಷ್ಟೆ ಸ್ವಾರಸ್ಯವಾಗಿಟ್ಟ್. ಮೂರ್ನೆ ಪುಸ್ತಕ "ಬೇಟೆಯ ಉರುಳು" ಈಗ ನಾಕ್ ವರ್ಸಂದ ಕೇರಳ ವಿಶ್ವ ವಿದ್ಯಾನಿಲಯದ ಉಪಪಠ್ಯ ಆಗುಟು. ಈ ಮೂರು ಕೃತಿಗ 'ಕನ್ನಡ ಮೃಗಯಾ ಸಾಹಿತ್ಯೋಪನಿಷತ್ತ್'ಂತ ಕನ್ನಡ ಸಾಹಿತ್ಯ ಕ್ಷೇತ್ರಲಿ ಮನ್ನಣೆ ಪಡ್ದುಟು.

ಇವರ ಅನುವಾದ ಸಾಮರ್ಥ್ಯದ ಪತಾಕೆ ಎತ್ತಿದ ಪುಸ್ತಕ "ಜೋಮನ ದುಡಿ". ಬೇರೆ ತುಳು ಅನುವಾದಗ, ವರಕವಿ ಕುವೆಂಪು ಅವರ "ಯಮುನ ಸೋಲು" ನಿರಂಜನರ "ಚಿರಸ್ಮರಣೆ" "ಮದಿಪ್ಪಂದಿ ನೆಂಪು" ಆಗುಟು. "ತುಳು ಗೀತಾರ್ಥಧಾರೆ"ಗೀತೆನ ತುಳು ಅನುವಾದ 'ಬೆಟ್ಟದ ತಪ್ಪಲಿಂದ ಕಡಲ ತಡಿಗೆ" "ತಬ್ಬಲಿ" "ಬದುಕು-ಬರೆಹ" ಇವರ ಇನ್ನುಳ್ದ ಅಚ್ಚ್‌ಲಿರ್‌ವ ಪುಸ್ತಕಗ.

ಇವರ ಬರವಣಿಗೆಲಿ ಅವರ್ದ್ದೇ ಒಂದು ಶೈಲಿನ ಬಳ್ಸಿ ಕಂಡೊಳೊ. ಹೆಂಗೆ ಕುವೆಂಪು ಮತ್ತೆ ಕಾರಂತರ ಶೈಲಿ-ಹಾಂಗೆ ಕೆದಂಬಾಡಿ ಜತ್ತಪ್ಪ ರೈಗಳ ಶೈಲಿ ಬಂದುಟು. ಬೇರೆ ಆರ್ ವರ್ಸಲಿ ಅವು ಮಾಡ್ದ ಸಾಹಿತ್ಯ ಸೇವೆ ಆಶ್ಚರ್ಯ ಪಡುವಂತದ್ದ್. ಶ್ರೀ ರೈಯೊವ್ಕೆ ಇನ್ನೂ ಸಾ ಬರೆವ ಶಕ್ತಿ ಹೆಚ್ಚಾಗಲಿ. ಶ್ರೀ ರೈಗಳ ಕೀರ್ತಿ ಪತಾಕೆ ಆಕಾಶಕೆ ಹಾರ್ಲಿ.

---

## ಬಾಚೆ ಇಲ್ಲೆ!

ಒಂದ್ ಮನೇಲಿ ಮೂರ್ ಗೂಡೆಗ, ಆ ಗೂಡೆಗಳಿಗೆ ಲಾಯ್ಕ್‌ಲಿ ಮಾತಾಡಿಕೆ ಬಾದುಲೆ. ಒಂದಿನ ಆ ಗೂಡೆಗಳ ಮನೆಗೆ ಅವರ ನೋಡಿಕೆ ನೆಂಟ್ರ್ ಬಂದೊ. ನೆಂಟ್‌ರೊಟ್ಟಿಗೆ ಮಾತ್ರ ಯಾರ್ ಮಾತಾಡಿಕೆ ಬೊತ್ತ್‌ಂತ ಗೂಡೆಗಳ ಅಯ್ಯೆ ಸುರುಲೇ ಹೇಳಿಬುಟ್ಟಿತ್!

ನೆಂಟ್ರ್‌ಗೆ ಪುಂಡಿ (ಕಡ್‌ಂಬು) ಇಕ್ಕಿಕೆ ಗೂಡೆಗಳ ಹತ್ರ ಹೇಳ್ದೊ. ಪುಂಡಿ ಇಕ್ಕಿಕಾಕನ ನೆಂಟ್‌ರೊಬ್ಬರ ಬಾಳಲೆಂದ ಒಂದ್ ಪುಂಡಿ ಉರ್‌ಳಿ ಹೋತು. ಆಗ ಒಂದ್ ಗೂಡೆ "ನೆಂತ್ರ ಬಾಲಲೆಂದ ಪುಂದಿ ಹೊಂಕಿತ್"ತ ಹೇಳ್ತ್. ಅಷ್ಟೊತ್ತಿಗೆ ಇನ್ನೊಂದ್ ಗೂಡೆ "ನಿಂಗೆ ಮಾತಾದ್ ಬದತ ಹೇಲ್ದ್ ಅಲಾ"ತ ಹೇಳ್ತ್. ಆಗ ಮತ್ತೊಂದ್ ಗೂಡೆ ಅದಿಕೆ ಹೇಳ್ರಿ ಬಾಚೆ ಇಲ್ಲೆ"ತ ಹೇಳ್ತ್. ಇದರ್‌ಂದಾಗಿ ನೆಂಟ್ರ್‌ಗಳಿಗೆ, ಈ ಗೂಡೆಗಳಿಗೆ ಲಾಯ್ಕ್‌ಲಿ ಮಾತಾಡಿಕೆ ಬಾದುಲೆಂತಾ ಗೊತ್ತಾಗಿ ಅವು ಗೂಡೆ ಬುಟ್ಟ್ ಸೀದಾ ಹೋದೊ.

— ಕೊಡೆಕಲ್ಲು ಶಶಿಧರ



# ಗವುಡ ಕನ್ನಡದ ಬೆಳ್ಕ್

**—ಶ್ರೀಮತಿ ನಂಗಾರ್ ಲಲಿತ, ಪುತ್ತೂರು**

**ಬರ್ದವರ ನುಡಿ :-** ಬರೀ ಆಡ್ ಮಾತಾಗಿ ಇರ್ಕ್ನ ಗವುಡ ಕನ್ನಡನ ಬರೆಹ ರೂಪಕ್ಕೆ ತಾದು ಬಾರಿ ಕಸ್ಟದ ಕೆಲ್ಸ. ಯಾಕೆನ್ತ್ಹೇಳ್ರೆ ಇನ್ದ್‌ನ ಹೊಸಗನ್ನಡ ಬಾಸೆನ ರೂಡಿ ಎಲ್ಲೋವ್ಕೆ ಇರ್ಕ್ನಾನ ಗವುಡ ಕನ್ನಡಲಿ ಸುದ್ದ ಕನ್ನಡದ ಬರೀ ಮೂವತ್ತೆರ್ಡ್ ಅಕ್‌ಸರಗಳ ಬಳ್ಕೆನ್ದ ಎಲ್ಲೋವ್ಕೆ ಬಾರಿ ತಮಾಸೆ ಕಾವ್ಬೊದು. ನನ್ನ ಬರೆಹದ ಗವುಡ ಮಾತ್‌ಗಲ್ಲಿ ಸಂಸ್ಕೃತ ಬಾಸೆನ್ದ ಕನ್ನಡಕ್ಕೆ ಸೇರ್ದ ಅಕ್‌ಸರಗಳ ಬುಟ್ಟ್ ಬರ್ದೊವ್ಳೆ. ಅದರ್‌ಲ್ಯೂ ಅನುಸ್ವಾರ ಇಲ್ಲದಿರ್ದು ವಿಸೇಸ. ಕೆಲ್ವು ಕಡೆ ಮಹಾ ಪ್ರಾಣಾಕ್ಷರಗಳ, ಕೆಲ್ವು ಕಡೆ ಅನುಸ್ವಾರನ ಸೇರ್ಸಿ ಬರ್ದರೆ, ಬರ್ದದ್ ಇನ್ದ್‌ನ 'ಚಾ ಚಾ'ತಿನ್ಸ್‌ನ ಹಾನ್ಗೆ ಆದೆ. ಆದ್ದರ್‌ನ್ದ ನಮ್ಮ ಗವುಡ ಬಂದುಗ ಎಲ್ಲಾ ನಮ್ಮ ಬಾಸೆನ ಮೇಲೆ ಪ್ರೀತಿ ಇಸಿ, ಒಸಿ ತಾಳ್ಮೆ ಸೇರ್ಸ್‌ಕನ್ಡ್ ವಿಚಾರ ಮಾಡ್ಕ್ಯಣೊಕು ಅನ್ತ ಕೇಳ್ಕಣೆ. ಆಡ್ ಮಾತ್‌ನ ಉಚ್ಚಾರ ಬೇರೆ. ಆದರ ಬರ್ಕಾನ ತೋರ್ಸಿಕೆ ವಿಜ್ಞಾನದ ಕೆಲ್ವು ಗುರ್ತುಗಳ ಹಾಕೋಕಾದೆ. ಉದಾ :- ಅವ, ಬೇಕ್, ಹೇಳ್‌ಕನ್ಡ್, ಕಮ್ಮಿ ಆಡ್, ಬಾ, ಬಂದೊ, ಇವೇ ಕೆಲ್ವು ನಮ್ಮ ಬಾಸೆ ಉಚ್ಚಾರಲ್ಯೂ ಸಬ್ದಗಳ್ಲೂ ಬೇರೆ ಬೇರೆ ಕಡೆ ಬೇರೆ ಬೇರೆ ಇದ್ದರೂ, ಅದ್ ಕನ್ನಡ ಹುಟ್‌ಕನ್ಡ ಕಾಲನ್ದಳೇ ಇದ್ದ್ ಕನ್ನಡ ಬಾಸೆನ ಆಡ್ ರೂಪುನ ಹೆಚ್ಚಾಗಿ ಉಳ್ಸ್‌ಕನ್ಡ್ ಉಟ್ಟು ಅನ್ತ ಹೇಳುದರ ಎಲ್ಲೋವ್ ಒಪ್ಪ್‌ಕಣಕಾದೆ.

—ಲಲಿತಾ

> ಶ್ರೀಮತಿ ಎನ್. ಲಲಿತಾ ಅವ್ರು ಎಂ. ಎ, ಎಂ. ಎಡ್. (ಕನ್ನಡ) ಕಲ್ತ್ ಪುತ್ತೂರ್ನ ಸರಕಾರಿ ಜೂ|| ಕಾಲೇಜಿಲಿ ಉಪನ್ಯಾಸಕಿ ಆಗಿ ಕೆಲ್ಸ ಮಾಡ್ತ ಒಳೊ. ಹುಟ್ಟು ಬಾಸೆನ ಮೇಲೆ ಇವ್ರುಕೆ ಬಾಳ ಪ್ರೀತಿ. ನಾವು ದಿನ ನಿತ್ಯ ಮಾತಾಡುವ 'ಗೌಡ ಕನ್ನಡ'ನ ಬರೆಹ ರೂಪಕ್ಕೆ ತಾಕುತಾದರೆ ಕನ್ನಡದ ಅಕ್ಷರಗಳ ಅನರ್ದೇ ಆದ ರೀತಿಲಿ ಬರ್ದ್ ಈ ರೀತಿ ಉಪಯೋಗ್ಸಿರೆ ಸರಿ ಆದೆತೇಳಿ ಇವರ ಅಬಿಪ್ರಾಯ. ಹಂಗೇ ಇವ್ರು ಸಂಬಾಸಣೆ ರೂಪಲಿ ಒಂದು ಲೇಖನನ ಬರ್ದ್ ಓದುವವರ್ಲಿ ಆಸಕ್ತಿ ಮತ್ತೆ ಕುತೂಹಲನ ಮೂಡಿಸಿಯೊಳೊ!
>
> — ಸಂ.

[ಮನೆ ಹಕ್ಕಲೆನ ಊರ್ ಚಾವ್ಡಿ ಕಟ್ಟೇಲಿ ಊರ್ ಗವುಡ ಗುಡ್ಡಪ್ಪಜ್ಜ ಎಲ್ಯಾಡ್ಕೆ ತಿನ್ದ್‌ಕಂಡ್ ಒಳೊ. ಹಕ್ಕಲೇ ದಾರಿ, ದಾರಿಲಿ ಕೆಳಮನೆ ರವೀಂದ್ರ, ಸುಮಾರ್ ನಲ್ವತ್ ವರ್ಸ ಪ್ರಾಯದವ ಬಾತಿತ್ತ್]

ರವೀಂದ್ರ:- ಓss ದೊಡಪ ಹೇಸ್ಗೊಕೊರಿ ಸವ್ರುಕ್ಯನಾ?

ಗುಡ್ಡಪ್ಪ :- ಯಾರ್? ಓs ರವಿನಾ, ಬಾ ಬಾ ಬಾರಿ ಅಪ್ರೂಪ. ಮನೇಲ್ಯೆಲ್ಲಾ ಸವ್ರುಕ್ಯನಾ?... ನಿನ್ನ ಅಪ್ಪ ದೇರಣ್ಣನೂ ನಾನೂ ಒಟ್ಟಿಗೇ ಕಾನಬಾಣೆ ಓಡ್ಯಾಡಿದೊವು, ಒಟ್ಟಿಗೇ ಸಾಲೆಗೆ ಹೋಗ್ತಿದ್ದೊವು. ನೀ ಊರ್ಬುಟ್ಟ್ ಹೋದ್ ಮೇಲೆ ಈಗ ನನ್ಗೆ ಸಿಕ್ಕಿದ್

ಬಾರಿ ಹರ್ಸ ಆತ್. ನಿನ್ನ ಅಪ್ಪ, ಅವ್ವ, ಹೆಣ್ಣ್, ಮಕ್ಕ ಎಲ್ಲಾ ಹೇನ್ಗೊಳೊ ?

ರವಿ :- ಎಲ್ಲಾ ಸವುಕ್ಯಲಿ ಒಳೊ ನಾವ್ ನಮ್ಮ ಇಲ್ಲಿನ ಆಸ್ತಿ ಮಾರಿ ಬೆಂಗ್ಳೂರ್ಲೇ ಇದ್ದ್ ಈ ಕಡೆ ಬಾದೇ ಕಮ್ಮಿ. ಇಲ್ಲಿ ಈ ಕಡೆ ಕುಶಾಲ್‌ನಗರದೋವು ಗವುಡ ಕನ್ನಡದ ಮೇಲೆ ಬಾರಿ ಕೆಲ್ಸ ಮಾಡುವೇನ್ತ ತಿಳ್ದಿ. ಹಾನ್ಗೇ ಗವುಡುಗಳ ಬಾರಿ ಒನ್ದು ಸಮ್ಮೇಳನ ನಡ್ಡದೆಗಡ. ಅದರೆಲ್ಲಾ ತಿಳ್ಕನ್ಡ ಹಾನ್ಗೂ ಆತ್ ಮತ್ತೆ ನಮ್ಮವರ ಎಲ್ಲಾ ನೋಡಿ ಮಾತಾಡಿ ಹೋದಾನ್ಗೂ ಆತ್ ಅನ್ತ ಕೆಲ್ವು ದಿನ ರಜೆ ಹಾಕಿ ಬನ್ದೊಳೆ.

ಗುಡ್ಡಪ್ಪ :- ನೀ ಬೆಂಗ್ಳೂರ್ಲೇ ಇದ್ದ್ ಹತ್ತಿಪ್ಪತ್ತ್ ವರ್ಸ ಆದರೂ ನೀ ನಮ್ಮ ಅರೆಬಾಸೆ ಬುಟ್ಟಿತ್ಲಲ್ಲಾ ; ಅದೇ ವಿಸೇಸ. ಇಲ್ಲಿನ ನಮ್ಮೊವು ಹಣ ಕಲ್ತರೆ ಸಾಕ್, ಸಾಲೆಗೆ ಹೋಗೊವುನ್ತ ಸಾಲೆ ಕನ್ನಡನೇ ಮನೇಲೂ ಮಾತಾಡ್ದು. ಹಣ ಇದ್ದೊವು ಅನ್ತ ಆದರೆ ಆತ್ ಮತ್ತೆ ಮಕ್ಕಳಿಗೆಲ್ಲಾ ಇಂಗ್ಲೀಸ್ ಸಾಲೆ; ಮನೇಲಿ ಮಾತಾಡುದೇ ಇಬ್ಲಿಸ್. ಅವ್ಕೆ ಒನ್ದೂ ಸರಿಯಾದ ಬಾಸೆ ಇಲ್ಲೆ ಅಲ್ಲಾ, ನೀ ಕಲ್ತವ; ಆದರೂ ನಮ್ಮ ಅರೆ ಬಾಸೆನ ಲಾಯಕ್ ಮಾತಾಡ್ಯ.

ರವಿ :- ಅಯ್ಯೋ ದೊಡಪ್ಪ, ನಮ್ಮಬಾಸೆ ಬುಟ್ಟರೆ ನಾವ್ಗೆ ಇನ್ನೇನುಟ್ಟು, ಆಸೆ ಹೇಳಿ! ನಾವ್ ಗವುಡ ಜೆನ, ನಮ್ಮ ಬಾಸೆ ಗವುಡ ಕನ್ನಡ. ಸತ್ತ ಸೊರ್ಗಲಿ ಒಳೊ ಇಲ್ಲಿನ ಮುಂಗ್ಲಿ ಮನೆ ಮರಿಯಪ್ಪ ಬಟ್ರು, ನೀವ್ಗೆ ಗೊತ್ತುಟ್ಟಲ್ಲಾ; ಅವು ನಮ್ಮ ಬಾಸೆನ 'ಗೌಡ ಕನ್ನಡ' ಅನ್ತ ಕರ್ದೊಳೊ.

ಗುಡ್ಡಪ್ಪ :- ಅದೇ ಹೇಳ್ದು, ಹಿತ್ಲ ದೆಯಿ ಮದ್ದಲ್ಲನ್ತ. ನಮ್ಮೊದಕ್ಕೆ ಏನ್ ಮಯಿಮೆ ಉಟ್ಟುನ್ತ ನಾವ್ಗೆ ಗೊತಾದ್ಲೆ. ಬೇರೆವು ಹೇಳೊಕು.

ರವಿ :- ನಾವ್ಗೆ ನಮ್ಮೊದೇ ಬಾಸೆ, ನಮ್ಮೊದೇ ಸಂಸ್ಕೃತಿ ಉಟ್ಟು. ನಮ್ಮ ಬುಡಕಟ್ಟ್ ಬಾರಿ ಹಿನ್ದೆನ್ದಳೇ ಬನ್ದುಟ್ಟು. ನಮ್ಮಲ್ಲಿ ದೊಡ್ಡ ಕುಳವಾರ್ಗ ಈಗೊಳೂ ಒಳೊ. ನಮ್ಮ ಎಲ್ಲಾ ಕೂಡು ಕಟ್‌ಗಳ್ಗೆ ಊರ್ ಗವುಡ ಬೇಕ್. 'ಗವುಡ' ಅನ್ತೇಳ್ರೆ ಯೆಜಮಾನ-ಬುದ್ದಿವಂತ – ಗುರ್‌ಕಾರ್– ಅನ್ತ ಅರ್ತ ಉಟ್ಟು. ತಿಳ್ದೊವು ಹೇಳ್ವ–'ಗ್ರಾಮವೃದ್ಧ' ಸಬ್ದ ಗಾವುನ್ದ–ಗಾವುಡ-ಗವುಡ-ಗೌಡ ಅನ್ತ ಆಗ್ಯುಟ್ಟು. ಆನುಬೋಲಿ ಹಿರಿಯುವ, ಬುದ್ದಿವನ್ತ ಗವುಡ. ಇನ್ತಾ ಹಿರಿ ಜನಾನ್ಗದೊವು ಮಾತಾಡುದ್ದೆ.

ಬರೆವ ಕನ್ನಡ ಬಾಶೆ ಪುಸ್ತಕಗಳ್ಲಿ ಬಾಕೆ ಮುನ್ದೆನೇ ಕನ್ನಡ ಬಾಸೆ ಮಾತಾಡ್ವ ಜೆನಾನ್ಗದೊವು ಇದ್ದೊ. ಆಗ ಕನ್ನಡ ಆಡ್ ಮಾತಾಗಿತ್ತ್. ಆ ಆಡ್ ಮಾತ್ ಬೇರೆ ಬೇರೆ ಊರ್ಗೆ ತಕ್ಕ ಹಾನ್ಗೆ ಬೇರೆ ಬೇರೆನೇ. ಬೆಂಗ್ಳೂರು, ಮೈಸೂರ್ ಕಡೆ ಹಳ್ಳಿಗಳ್ಲಿ ಈಗೊಳೂ ಕನ್ನಡ ಬಾಸೆ ಗ್ರಾಮ್ಯ ರೂಪಲಿ ಉಟ್ಟು. ಹಾನ್ಗೇ ಜಾತಿಗೆ ತಕ್ಕ ಮಾತ್–ಗವುಡ ಕನ್ನಡ. ಹವ್ಯಕ ಕನ್ನಡ, ಬಯಿರ್‌ಗಳ ಕನ್ನಡ ಓಡಾರಿಗಳ ಕನ್ನಡ ಅನ್ತ ಬೇರೆ ಬೇರೆ ಬಾಸೆಗ ಇದ್ದರೂ ಎಲ್ಲಾ ಕನ್ನಡದ ಮೂಲ ರೂಪನ್ದಳೇ ಬೆಳ್ದೊವು.



" ಕಾಗದಗಳ ಓದಿಬುಟ್ಟ್ ಕೊಡ್‌ವ
ಹಂದಿ ಮುಸುಂಡುನ ಪೋಸ್ಟ್‌ಮೇನ್
ಈಗೊಳೂ ಉಟ್ಟಾಂತ ನನ್ನ ದೋಸ್ತಿ ಬರ್ದಕೆ
ಇಸ್ಟ್ ಕೋಪ ಕಂಡದೆ..."

ನಮ್ಮ ಗವುಡ ಕನ್ನಡದ ಮಾತ್‌ಗಳ ಹಳೆಗನ್ನಡ ಪುಸ್ತಕಗಳ್ಲಿ ನೋಡಕ್; ಅಲ್ಲಿ ಅದರ ದೇಸಿ ಅನ್ತ ಕರ್ದವೆ. ಅನ್ತೂ ಗವುಡರ ಕನ್ನಡ, ಕನ್ನಡ ಬಾಸೆನ ಒನ್ದು ಉಪ ಬಾಸೆಯಾಗುಟ್ಟು. ಕನ್ನಡ ಬಾಸೆಗೆ ಸುಮಾರ್ ಎರ್ಡ್ ಸಾವಿರ ವರ್ಸದ ಕತೆ ಇರ್‍ಯಾನ ಅಸ್ಟೇ ಹಿನ್ದೆನ್ದ ಗವುಡ ಗನ್ನಡ ಬೆಳ್ಕನ್ಡ್ ಬನ್ದುಟ್ಟು. ಬೇರೆ ಬಾಸೆನ ಜೆನಗಳೊಟ್ಟಿಗೆ ಬೆರ್ತ್ ನಮ್ಮ ಬಾಸೆಗೂ ಬೇರೆ ಬಾಸೆಗಳ ಶಬ್ದಗ ಸೇರ್ಕೊಳೊ. ಹಾನ್ಗೆ ನಮ್ಮ ಮಾತ್‌ಗ ಬೇರೆ ಬೇರೆ ಜಾಗೆಗೆ ತಕ್ಕ ಹಾನ್ಗೆ ಉಟ್ಟು. ಕೊಡ್ಗ್‌ನ ಗವುಡ ಕನ್ನಡದ ಮೇಲೆ ಕೊಡ್ಗ್ ಬಾಸೆನ ಗಾಳಿ ಬೀಸ್ಯುಟ್ಟು. ಕೊಲ್ಲಮೊಗ್ರು, ಸುಬ್ರಮಣ್ಯ ಕಡೆ ಬಾರಿ ಗ್ರಾಮ್ಯ.

ಶುದ್ಧ ಕನ್ನಡಕ್ಕೆ ಬರೀ ಮೂವತ್ತೆರ್ಡ್ ಅಕ್‌ಸರಗ ಸಾಕ್, ಹಾನ್ಗೇ ನಮ್ಮ ಬಾಸೆಲೂ ಬರಿ ಮೂವತ್ತೆರ್ಡ್ ಅಕ್‌ಸರಗ ಒಳಾದ್. ಋ, ೠ, ಐ, ಔ, ಖ, ಛ, ಠ, ಥ, ಫ, ಘ, ಝ, ಢ, ಧ, ಭ, ಶ, ಷ, ಅನುಸ್ವಾರ (ಂ) ಮತ್ತೆ ವಿಸರ್ಗ (:)-ಇವು ಸಂಸ್ಕೃತದೊವು; ಗವುಡ ಕನ್ನಡಲಿ ಇಲ್ಲೆ. ೧೩ನೇ ಸತಮಾನದ ಕೇಶಿರಾಜ, 'ಗಾಬ' ಎನ್ಬು ಪದನೇ 'ಗಾಂಡ' ಆಗುಟ್ಟು ಅನ್ತ ಹೇಳಿದೆ. ಅದ್ ಅಲ್ಲದೆ ನಾವ್ ಅನುಸ್ವಾರ ಇಲ್ಲದೆ- ಮುನ್ಸ್, ಮನ್‌ದ್ರಿ, ಮಞ್ಚು, ಚೊಮ್ಬು, ಕೊಮ್ಮು (ಕನ್ನಡ-ಕವುಂಗು-ಕೌಂಗು), ಚೀನ್ಸ್ಟ್ ಅನ್ತ ಹೇಳ್‌ತಿದ್ದೊ.

ಗುಡ್ಡಪ್ಪ :- ಅಬ್ಬ ! ಹೀನ್ಗಿದ್ದ್ ನಮ್ಮ ಬಾಸೆನ ಅರೆ ಬಾಸೆ ಅನ್ತ ಕರ್ರ್ಯೋವುಕ್ಕೆ ಬಾಸೆ ಉಟ್ಟಾ ?

ರವಿ :- ನಮ್ಮ ಮಾತ್ ಕೇಳ್ಯಾನ ಬೇರೆ ಜೆನಗಳ್ಗೆ ಆಸ್‌ಚರಿಯ ಆದೆ, ನಿಮ್ಮೊದ್ ಯಾವ ಬಾಸೆ? ಸಾಲೆ ಕನ್ನಡ ಅಲ್ಲ. ಅನ್ದರೂ ಕನ್ನಡದ ಹಾನ್ಗೇ ಉಟ್ಟು, ಅದೆನಾ ಬಾಸೆ? ಅನ್ತ ಕೇಳ್ಯಾನ ನಮ್ಮ ಬೋದಲ್ರ ಕೆಲ್ವು ಆದ್ ಅರೆಬಾಸೆ ಅನ್ತ ಹೇಳ್ಬುಟ್ಟವೆ. ಬಾಸೆ ಅರೆ (=ಅರ್ಧ) ಅನ್ತ ಒಪ್ಪನ್ಡ್ರೆ ನಮ್ಮ ಬುದ್ದಿನೂ ಅರೆ ಅನ್ತ ಹೇಳ್ದಾನ್ಗೆ ಆದೆ. ಬಾಸೆ ಇರ್ರ್ದು ನಮ್ಮ ವಿಚಾರನ. ಬೇರೊವ್ಕೆ ಸರಿ ತಿಳ್ಯವ್ಬು ಹಾನ್ಗೆ ಹೇಳಕೆ ಇರ್‌ವ ಮಾತ್ ಅಲ್ಲ ದೊಡಪ; ನೀವೇ ನೋಡಿ, ಬೇರ್ರ್ಯೊವು ಏನಾರ್ ಹೆಡ್ಡ್ ಕೆಲ್ಸ ಮಾಡ್ಯಾನ ನಿನ್ಗೇನ್ ಬಾಸೆ ಉಟ್ರೋ ಇಲ್ರ್ಯೊ? ಅನ್ತ ಬೊಯ್ಯೊದಿಲ್ಲಾ? ಹೀನ್ಗಿರ್ಯಾನ ನಮ್ಮೊದ್ ಅರೆ ಬಾಸೆ ಅನ್ತ ಹೇಳ್ರೆ ನಾವ್ಗೇ ನಾಚಿಕೆ. ತಿಳ್ಕಂಡ್ ನಾವ್ ನಮ್ಮ ಬಾಸೆನ ಗವುಡ ಕನ್ನಡ ಅನ್ತ ಹೇಳೊಕು. ನೀವು ಹೇಳ್ದಹನ್ಗೆ ನಮ್ಮ ಕೆಲೊವ್ಕೆ ಗವುಡ ಕನ್ನಡನ ಮಾತಾಡ್ಕೆ ನಾಚಿಕೆ. ಹಬ್ಬಲಿ, ಮದ್ವೆಲಿ ಎಲ್ಲಾ ಕ್ರಮಗಳ ಬುಟ್ಕನ್ಡ್ ಬನ್ದ ಹಾನ್ಗೆ ಬಾಸೆನೂ ಬುಟ್ರೊ, ಎಲ್ಲೊವು ನಮ್ಮ ಬಾಸೆನ ವಿಸೇಸಗಳ ಹಞ ತಿಳ್ಕನ್ಡರೆ ಒಳ್ಳೊದ್.

ಗುಡ್ಡಪ್ಪ :- ಆ ವಿಸೇಸಗಳ ಹಞ ಹೇಳಣ್ಣ

ರವಿ : ನೋಡಿ ದೊಡಪ, ನಮ್ಮ ಬಾಸೆನ ಬೇರ್ರ್ಯೊವು 'ಗಡ ಗಡ' ಬಾಸೆ ಅನ್ತ ತಮಾಸೆ ಮಾಡುವೆ, ಅಲ್ಲೋ? 'ಗಡ' ಅನ್ತ ಹೇಳ್ರೆ ಹಳೆ ಕನ್ನಡಲಿ ಕಣ್ಡಿತ ಇರ್‍ವ ಸನ್ಗತಿನ ಹೇಳ್ಯಾನ ಹೇಳುದು. ನಾವೂನು ಹಾನ್ಗೇ ಕಣ್ಡಿತ ಇರ್‍ವ ಸನ್ಗತಿನ ಬೇರೆವರ್‌ನ್ದ ತಿಳ್ದ್ ಇನ್ನೊಬ್ಬನ್ಗೆ ತಿಳ್ಸಕಾನ ಗಡ ಅನ್ತ ಸೇರ್ರುವೆ. ಹವ್ಯಕ ಕನ್ನಡಲಿ 'ಡ' ಮಾತ್ರ ಹೇಳುವೆ. ಹೀನ್ಗೆ ಹಳೆಕನ್ನಡ ಸಬ್ದಗ ಅದೇ ಅರ್ತಲಿ ನಮ್ಮ ಬಾಸೆಲಿ ಸಾಕಸ್ಟ್ ಒಳೊ. ಹಂದಿ ಕುರ್ಲೆ, (ಹನ್ದಿಕುರ್ಲೆ, ಬಾಳೆ ಕುರ್ಲೆ) ಪಿಳ್ಳೆ (ಕೋಳಿ ಪಿಳ್ಳೆ) ಕೂಸು, ಬನ, ಸನ್ಕಟ, ಅನ್ನಯ, ವರ್ಸ, ಮೋಡೆ,(ಮಾಡ್ಯ-ಸಂ) ಗೆಳ್‌ಸ್, ಹುಗ್ಗೆ, ಹೊತ್ತು (ಸೂರ್ಯ, ಸಮಯ) ಚಕ್ಕಳ (ಚರ್ಮ) ಬಲಿಕೆ, ಗುಮ್ಮ, ಎಯ್‌ಪನ್ನಿ, ಬಡಿಗೆ, ಕಾನ (ಕಾನನ) ಬಾನ್ (ಆಕಾಶ) ಸೊಲ್ಲ್ (ಮಾತ್) ಚಟ್ಟೆ, ತಿನಸ್, ವಲ್ಲಿ, ಓಲೆ (ಕೆಬಿನ ಚಿನ್ನ) ಎಕ್ಕಡ, ಬಳಿ, (=ವಂಶ, ಗೋತ್ರ) ಸೇಸೆ, ಹಸೆ, ಹಡ್‌ಪ, ವೀಳ್ಯ, ಪಲ್ಲಿ, ಹಿಮ್ಬೊತ್ತು. ಕಿಚ್ಚಿ, ಕೊತ್ತಿ, ಪಸ್‌ವ್ಬೆ ನೀರ್-ಹೀನ್ಗೆ ಸುಮಾರ್ ಸಬ್ದಗ ಹಳೆಕನ್ನಡದೋವೇ.

ಗುಡ್ಡಪ್ಪ :- ಇದರೆಲ್ಲಾ ತಿಳ್ಕಣದಿದ್ದರೆ ಹೇನ್ಗೆ ಗೊತ್ತಾದು ? ತಿಳ್ದೊವು ಹೇಳ್ಯಾನ ತಿಳ್ಕಣೊಕು.

ರವಿ :- ಇದೆಲ್ಲಾ ನಂಗೊತ್ತಿತ್ತೆಲ್ಲೆ ದೊಡಪ, ನಾ ಬಾಸೆಗಳ ಸಾಸ್ತ್ರನ ಕಲ್ತೆಕಾನ ಇದರೆಲ್ಲಾ ತಿಳ್ಕಾತ್ ನೋಡಿ. ಹಾನ್ಗೆ ನಾವು ಮನೆಲಿ ಮಕ್ಕ ಎಲ್ಲಾ ಇದರ್ನೇ ಮಾತಾಡುದು. ಅದ್ ಮಾತ್ಲಿ ನಾವು ಆದಸ್ಟ್ ಹೆಚ್ಚ್ ಅಬಿಪ್ರಾಯನ ಆದಸ್ಟ್ ಕಮ್ಮಿ ಹೊತ್ಲಿ ಸುಲ್ಬ ಮಾಡಿ ಹೇಳುವೆ. ಅದಿಕೆ ಕನ್ನಡಲಿ 'ಸೌಲಭ್ಯಾಕಾಂಕ್ಷೆ' ಅನ್ತ ಹೇಳ್‌ವೆ. ಹಾನ್ಗೆ ಹೋಗುತ್ತೇನೆ (ಕ)-ಹೋನೆ, ಬರುತ್ತೇನೆ-ಬನ್ನೆ, ಮಾಡುತ್ತೇನೆ-ಮಾಡಿನೆ, ಆಯಿತೋ-ಆತೋ, ಆಗುವಾಗ-ಆಕಾನ, ಹಾಗಾದರೆ-ಹನ್ಗರೆ, ಅನ್ತ ನಮ್ಮ ಬಾಸೆಲಿ ಆದೆ. ಇದರ್ನೇ ನೋಡಿ ಆಗಿರೊಕು ನಮ್ಮೊವು ಅರೆ ಬಾಸೆ, ಅರೆ ಕನ್ನಡ ಅನ್ತ ಹೇಳುದು. ನಾವು ಕನ್ನಡನಾದರೂ ಎಲ್ಲಿ ಅರೆ ಮಾಡ್ರ್ಯೊಳೊ? ಕನ್ನಡಲೇ ಹೆಚ್ಚಾಗಿ ಸಂಸ್ಕೃತ ಮತ್ತೆ ಬೇರೆ ಬಾಸೆನ ಸಬ್ದಗ ಇರ್ರು. ಬಾಸೆ ಬೆಳ್ಯಕಾನ "ತಾಲವ್ಯೀಕರಣ" ಅನ್ತ ಆದೂ ಉಟ್ಟು. ಹಾನ್ಗೆ ನಮ್ಮ ಬಾಸೆಲಿ ಕಿರುಚು-ಚೀರ್, ಸುರುಟು (ಕ) - ಚುರುನ್ಸು, ಚಿರ್‌ನ್ಸ್, ಸೀನ್ಸ್, -ಚೀನ್ಸ್, ತೋಡು-ಚೋಡಿ, ತಾಳೆ-ಚಾಳೆ, ಕೆಸರ್-ಚೋಳು ಹೀನ್ಗೇ ಬದಲಾಗಿ ಬೆಳ್ದದೂ ಉಟ್ಟು.

ಗುಡ್ಡಪ್ಪ :- ನೋಡ್ ರವಿ, ನಮ್ಮ ಬಾಸಲಿ ಇರ್‌ವ ಕೆಲ್ವು ಸಬ್ದಗ ತುಳು ಬಾಸೆನ್ದ ಬನ್ದದ್ ಅನ್ತ ತುಳು ಜೆನಗ ಹೇಳ್ತನ್ಡವೆಲ್ಲಾ, ಅದ್ ಹೇನ್ಗಾದೆ ಹೇಳ್.

ರವಿ :- ನಮ್ಮ ಬಾಸೆ ಬೆಳ್ಯೊತಾ ಉಟ್ಟು ದೊಡಪ, ಇದ್

ದ್ರಾವಿಡ ಬಾಸೆಗಳ ಹಿಂಡ್‌ಗೆ ಸೇರ್‌ದೆ. ಹೆಣ್ಣ್ ಕೊಡುದು-ತಾದು ಇದರ್‌ನ್ದ ಸವ್ಬನ್ದ ಬೆಳ್ದ ಹಾನ್ಗೆ ನಮ್ಮ ಬಾಸೆಗೆ ಮಾತ್‌ನ ಸವ್ಬನ್ದ ಹೆಚ್ಚಿ ಬೇರೆ ಬೇರೆ ಬಾಸೆಗಳ್‌ನ್ದ ಎಸ್ಟೋ ಸಬ್ದಗ ಸೇರ್‍ಯೊಳೊ. ಹಾನ್ಗೇ ನಮ್ಮದರ್‌ನ್ದಲೂ ಬೇರೆ ಬಾಸೆಗೆ ಹೋಗುಟ್ಟು. ಆದರ್ಲಿ ತುಳು ಅನ್ತ್ರೆಳಿ ಏನ್, ಹಿಂದಿ ಬಾಸೆನ್ದ ಸೇರ್‌ದ ಸಬ್ದಗ ಕೆಲ್ವು ಒಳೊ. ಅಕಲ್, ಕುಸಾಲ್ ಕೋವ್ಬರೆ (ಕಮುರೆ) ಕುಡ್ತ (ಕುರ್ತ) ಲಾಯಕ್ ತುಳುಲ್ಯೂ ನಮ್ಮ ಬಾಸೆನ ಸಬ್ದಗ. ಬೊಳ್ಪು, ಪುನ್ಡಿ, ಬಿತ್ತ್, ಚೋಲಿ, ಅವ್ಬರ್ಸ್, ಪುಳ್ಳಿ, (ಪಿಳ್ಳಿ) ಪೊರ್ಲು, ಪುದೆಲ್, ಬಲ್ಲೆ, ಕೆಬಿ, ಬೈಪಣೆ, ಕೆವ್ಡಿ ಕಾಯ್, ಪಟ್ಲಕಾಯ್, ತಡ್ಪೆ, ಪೋಯಿ, ಬಙ-ಇನ್ತೊವು ಬಾರಿ ಒಳೊ. ನಮ್ಮ ಸಬ್ದಗ-ಕುಞ, ಕುಞ, ಮಞ-ಇವು ಹೀನ್ಗೆ ಒಳೊ, ಮಲ್ಯಾಳಲ್ಯೂ ಒಳೊ. ಕೆಲ್ವು ಸಬ್ದಗ ತಮಿಳ್, ತೆಲುಗ್ ಬಾಸೆಲ್ಯೂ ಒಳೊ. ಬಾಸೆ ಹೀನ್ಗೆ ಸಬ್ದಗಳ ಸೇರ್‌ಸ್ಕನ್ಡ್ ಬೆಳ್ಯ ಕ್ಯಾಗದ್ ಅನ್ತ ಹರ್‍ಯೊವ ನೀರ್ಗೆ ಕಟ್ಟ ಹಾಕಿದನ್ಗೆ ಬಾಸೆಗೆ ಹಾಕಿಕ್ಯಾದೋ ದೊಡಪ? ಬೆಳ್ಯೊವ ಬಾಸೆಗೆ ಯಾವ ಕಟ್ಟ್ ಕಟ್ಲೆಗ ಇರುದುಲ್ಲೆ.

ಕನ್ನಡದ ಸಬ್ದಗ ರೂಪ ಎತ್ಯಾಸ ಆಗಿ ನಮ್ಮ ಬಾಸೆಲಿ ಹೀನ್ಗಾಗೊಳೊ ನೋಡಿ, ಬೀಸಿ+ಇಡ್-ಬಿಸಾಡ್ ಹನಿ+ಈಸು-ಹನೀಸ್, ಇಷ್ಟ-ಈಸ್, ಅಷ್ಟ-ಆಸ್, ಇಡು, ಮಡಗು-ಇಸ್, ಅಹಂಕಾರ-ಹನ್ಕಾರ, ಜನ್ಮ-ಜಲ್ಮ, ಭ್ರಮೆ-ಬಿರಮೆ, ಆರ್ಯ-ಅಯ್ಯ, ಬಡಿಸು-ಬಳ್ಸ್, ಹೊಟ್ಟೆಹಸಿದಿದೆ-ಹೊಟ್ಟೆ ಇಸಿದೆ, ಅಬ್ಬೆ-ಅವ್ವೆ ಅವ್ವ, ಮನುಷ್ಯ-ಮೊಯಿಸ, ಮಾಂಸ-ಮಾಸ, ಎಲುಬು -ಎಲ್ವು, ಎಲು, ಮಗಳ್-ಮಗ, ಗ್ರಹಚಾರ-ಗ್ರಾಚಾರ, ತುಪ್ಪಳ-ತೊಪ್ಪು, ಸ್ವರೂಪ-ಸುರ್ಪ.

ಇನ್ ಕೆಲ್ವು ಕನ್ನಡ ಸಬ್ದಗಳ ಅರ್ತ ಬದ್ಲಾಯಿಸಿ ನಾವು ಉಪಯೋಗ್ಸುವೆ. ಗಯಿಪು, ಅವ್ಬ್ರ (ಅಮ್ರ (ಕ) ಹುಳಿ ಮಾವು) ಹಿಟ್ಟ್ (ಕನ್ನಡಲಿ ಧಾನ್ಯಗಳ ಹೊಡಿ) ಮೈ ಮುರ್ಪ್ (ಆವೇಶನ್ದ ಕೂಡುದು) ಸೊಕ್ಕುದು (ಆಟ ಆಡಿ ಮೆಯ್ ಬೆಳ್ಸುದು) ಇಕ್ಕ್ (ಇಡು) ಎಳ್ಪ್ (ನೆಲ ಆಗ್ಯೊದು) ಕುರೆ (ಕೋತಿ) ಒರ್‌ನ್ಗುಸು (ಓರೆ ಮುಸುನ್ಡ್ ಮಾಡುದು.

ಗುಡ್ಡಪ್ಪ:- ರವಿ ಇಕ್ಕ್ ಅನ್ತ ಹೇಳ್ನನ ನಿನ್ಗೆ ಊಟಕ್ಕೆ ಇಕ್ಕಿತ್ತ್ಯಲ್ಲೋ, ಕುಡ್ಯಕೆನೂ ಕೇಳತ್ಲೆ.

ರವಿ:- ಅದೇನೂ ಈಗ ಬೇಡ ದೊಡಪ, ಈಗ ಉಂಬಕೆ ಕುಡ್ಯಕೆ ಹೊತ್ತೂ ಅಲ್ಲ. ನಾ ಹೇಳುದರ ಇಸ್ಟ ಆಸಕ್‌ತ್ಲಿ ಕೇಳುವ ನೀವ್ ಸಿಕ್ಕಿದೇ ನನ್ಗೆ ಉನ್ಡ್ನನ್ಗೇ ಆತ್. ನಮ್ಮ ಬಾಸೆನ ಕೆಲ್ವು ಸಬ್ದಗ ಹೇನ್ಗೆ ಬನ್ದೊಳೊ ನೋಡಿ.

ಗೂಡೆ:- (ಗುಡ್ಲು ಕೂಡ್ಸಕವ್ಬ ಕಾರ್ಯನ್ದ ಮೇಲೆ ಹೆಣ್ಣ್ ಕೂಸುನ ಗೂಡೆ ಅನ್ತ ಕರ್‍ಯೊದು. ಗುಡ್ಲು-ಗುಡಿಸಲ್. ಪ್ರಾಯಕ್ಕೆ ಬಾಕಾನ ಮನೆನ್ದ ಹೊರಗೆ ಕುದ್ರ್ಸಿ ಆ ಮೇಲೆ ಮನೆಗೆ ಸೇರ್‌ಸ್ಕಣ್‌ತಿದ್ದೊ.) ಹಾನ್ಗೆ ಗೂಡೆ-ಕನ್ನೆ ಅನ್ತಳೇ ಅದಕ್ಕೆ ಮುನ್ದೆ ಹೆಣ್ಣ್ ಅನ್ತಳೇ ಕೂಸು ಹೇಳುದು.

ಮುರ್ಡ್- (ಮುರ್ಕನ (ಮುರುಕನ) ಮುರ್ಕುಸುವ ದೊನಿ; ಅಳುದು.)

ಹೊದ್ರಿ- (ಕನ್ನಡಲಿ ಹೊದರೇಳು ಅನ್ದರೆ ಹೆಚ್ಚಾದು. ದಾನ್ಯಗಳ ಹೊರ್ಯಕಾನ ಅರ್‌ಳಿ ಹೆಚ್ಚಾದೆ.)

ನಗುರ್ಳಿ-(ದಾನ್ಯಗಳ ನುರಿಯುವ ಕುಳಿ)

ಹೊಡ್ಕು-(ತಡ್ಪೆಲಿ ಕಾಳ್‌ನ ಹೊಣ್ಕ್‌ಸಿ ಹೊಡ್ಯೊದು)

ಮೂಕುತ್ತಿ-(ಮೂಕುಲಿ ಕುತ್ತಿ ಇಸುವ ಚಿನ್ನ)

ಮಙ, ಬಙ, ಗಾಣಿಙ, ಮೊದುಮಙ-ಇಲ್ಲಿ 'ಕ' ವರ್ಗಾಕ್ಷರದ ಅನುನಾಸಿಕ ಙ 'ಗ' ಅಕ್ಷರದ ಬದ್ಲಾಗಿ ಬನ್ದುಟು.

ಗುಡ್ಡಪ್ಪ:- ನಮ್ಮ ಬಾಸೆ ವಿಸೇಸ ಅನ್ತ ಹೇಳ್ಯಾನ ನೆವ್ಪೊತ್. ನಮ್ಮಲ್ಲಿ ಎಲ್ಲೊವು ಹೆಣ್‌ಗಳ್ಗೆ ಮರ್ಯಾದೆ ಕೊಡುಕೂನ್ತ ಹೇಳಿ ಅವ್ ಇವ್ ಅನ್ತ ಹೇಳ್‌ವೆ, ನಾ-ಅದ್, ಇದ್ ಅನ್ತ ಹೇಳ್ಯರೆ ಹುಡ್ಗರ್ಗ ಎಲ್ಲಾ ನೆಗಾಡುವೆ. ಇದರ್ಲಿ ಯಾವ್ದ ಸರಿ ಹೇಳ್.

ರವಿ:- ನೋಡಿ ದೊಡಪ ನಮ್ಮೊದ್ಕೆ ಮದ್ಯ ದ್ರಾವಿಡ ಬಾಸೆ ಮೂಲ; ಈ ಹಿಂಡ್‌ಗೆ ಸೇರ್ದ ಬಾಸೆಲಿ ಎರ್ಡ್ ಲಿನ್ಗಗ ಒಳಾದ್. ಪುಲಿನ್ಗ ಮತ್ತೆ ನಪುಂಸಕ ಲಿನ್ಗ. ಏಕ ವಚನಲಿ ಹೆಣ್ಣ್‌ಗ ನಪುಂಸಕ ಲಿನ್ಗಕ್ಕೆ ಸೇರುವೆ. ಸ್ತ್ರೀ ಲಿನ್ಗ ಅನ್ತ ನಮ್ಮ ಮದ್ಯ ದ್ರಾವಿಡ ಬಾಸೆಲಿ ಇಲ್ಲೆ. ಹೆಣ್ಣ್‌ಗಳ ಅದ್ ಇದ್ ಅನ್ತ ಹೇಳ್ದ್ ಸರಿ, ಆದರೆ ಕನ್ನಡದ ಸವ್ಬನ್ದಲಿ ಅವ್ ಇವ್ ಅನ್ತ ಹೇಳಕ್. ಮದ್ಯ ದ್ರಾವಿಡ ಬಾಸೆಲಿ ದೇವ್ರ ಸಾ

ಏಕವಚನಲಿ ಕರ್ದವೆ. ಹೆಚ್ಚ್ ಮರ್ಯಾದೆ ಕೊಟ್ಟ್ ಹೇಳೊಕಾದರ್ರೂ ಏಕ ವಚನನೇ ಬಾದು ಉಟ್ಟು. ಹಾನ್ನಾಗಿ, ಅವ್ವ, ಅಪ್ಪನ ಕೆಲ್ಸು ಕಡೆ ಗನ್ನನ ಸಾ ಏಕ ವಚನಲೇ ಹೇಳ್‌ವೆ. ವಚನ ನೋಡ್ಯರೆ, ದೇವ್ರು, ಅಪ್ಪ, ಅವ್ವ, ಗನ್ಡ ಎಲ್ಲಾ ಒಬ್ಬೊಬ್ಬನೇ, ಹಾನ್ನಿರ್ರ್ಯಾನ ಏಕ ವಚನನೂ ತಪ್ಪಾದ್ಲೆ; ಬಹು ವಚನನ್ನೂ ಹೇಳಕ್. ಕನ್ನಡದ ಬಹುವಚನ ಪ್ರತ್ಯಯ ಗಳ್-ಕಳ್, ಇವುಗಳ್ಲಿ ಕಡೇ ಅಕ್‌ಸರ ಹೋಗಿ ನಾವು ಹೀನ್ಗೆ ಹೇಳ್‌ವೆ-ಮಕ್ಕ, ಮರಂಗ.

ಗುಡ್ಡಪ್ಪ :- ಇನ್ನೊಂದು ನೋಡಣ್ಣ, ಏನ್‌ನ್ತ ಹೇಳ್ಯರೆ, ಮೊನ್ನೆ ನನ್ನ ಸೊಸೆ ಬನ್ದ್ ಒಗ್ಯಕೆ ನಿಮ್ಮ ಸೀರೆ ಕೊಡಿ ಮಾವ ಅನ್ತ ಕೇಳಿತ್. ಸಾಲೆಗೆ ಹೋವ ಪಿಳ್ಳೆಕ ಸೇರ್‍ಕನ್ಡ್ 'ಉಗ್ಗಪ ಸೀರೆ ಉಟ್ಟವೆ' ಅನ್ತ ಹೇಳಿ ನೆಗಾಡಿ ಬುಟ್ಟೊ, ಸೀರೆ ಅನ್ತ ಹೇಳುದು ತಪ್ಪಾ ಹಯಿದ?

ರವಿ:- ತಪ್ಪಲ್ಲ ದೊಡಪ; ನಮ್ಮ ಬಾಸೆನ ಎಲ್ಲಾ ಸಬ್ದಕ್ಕೂ ಅರ್ತ ಉಟ್ಟು. ಹಳೆ ಕನ್ನಡಲಿ 'ಚೀರ' ಅನ್ನೇಳ್ಯರೆ 'ಬಟ್ಟೆ'. ಅದೇ ಅರ್ತಲಿ ಸೀರೆ ಅನ್ನೇಳುದು ಸರಿ- ಚೀರ ಎಮ್ಬ ಸಬ್ದ ಸೀರೆ ಅನ್ತ ರೂಪಾನ್ತರ ಆಗಿ ಈಗ ಕನ್ನಡಲಿ ಇರುದು. ಈಗನ ಮಕ್ಕ ಕನ್ನಡದ ಸೀರೆ, ಇಂಗ್ಲಿಷ್‌ನ 'ಸಾರಿ' ಸಬ್ದನ್ದಲೇ ಬನ್ದದ್ ಅನ್ತ ತಿಳ್ಕೊನ್ಡೊಳೊ. ಉಗ್ಗಪ ಅನ್ತ ಎಲ್ಲೊವು ಯಾಕೆ ಕರ್ದವೆ ಅನ್ತ ಗೊತ್ತುಟಾ? ನೋಡಿ ಹುಗ್ಗೆ ಕೊಟ್ಟ ಅಪ್ಪ ದೊಡ್ಡೊವು, ದೇವ್ರಿಗೆ ಸಮಾನ – ಕೂಸ್ನ ತೊಟ್ಲಗೆ ಹಾಕ್ಯಾನ 'ಉಗ್ಗ' ಉಗ್ಗ, ಉಗ್ಗೊ ಅನ್ತ ಹೇಳಿ ಹಾಲನ್ನನ ಕೂಸ್ನ ಬಾಯ್ಗೆ ಹಿರಿಯೊವು ಅನ್ದರೆ ಕೂಸ್ನ ಅಜ್ಜ ಅಜ್ಜಿಕ ಮುನ್ದೆ ಕೊಟ್ಟವೆ ನೋಡಿ. ಹಾನ್ಗೆ ಉಗ್ಗ ಕೊಟ್ಟ ಅಪ್ಪ-ಉಗ್ಗಪ ಉಗ್ಗಪ್ಪ ಅನ್ತ ಆಗ್ಯುಟ್ಟು. (ಕೈಲಿಪ್ಪ ವಾಚ್ ನೋಡಿ)

ಹೋ-ಗನ್ನೆ ಸುಮಾರಾತ್, ಮಾತ್ತೇ ಮೊದ್ವೆ ಆತ್ ಅನ್ತ ಹೇಳ್ವಿಲ್ಲಾ ಹಾನ್ಗೆ ಬೇಗ ಬನ್ನೆತ್ತ ಬಾವನ್ಗೆ ಹೇಳದ್ದೆ. ಕಾಯಕಂಡ್ ಇರುವೊ, ಆತ್... ನಾ ಈಗ ಹೋನೆ ದೊಡಪ ಇನ್ನೊವ್ಮೆ ಬನ್ನೆ.

ಗುಡ್ಡಪ್ಪ :- ಮಾತ್ಲೆ ಮೊದ್ವೆ ಅನ್ನೇಹ್ಳ್ಯರೆ, ಕಾರ್‍ಯ ಮಾಡದೆ ಬಾಯ್ಲೇ ಕೊಟ್ಟ್‌ಕೊವ್ದೊದಕ್ಕೆ ಹೇಳ್‌ವ ಗಾದೆ ಅದ್. ಆದರೆ ಮೊದ್ವೆ ಮಾಡ್ದು ಸುಲ್ಬನಾ ಹಯಿದ? ಈಗ ನೀ ಹೇಳ್ದ್ ವಿಚಾರೆಲ್ಲಾ ಸುಲ್ಬಲಿ ಸಿಕ್ಕಿದ್ಯಾ? ಮೊದ್ವೆ ಅನ್ದರೆ ಹೆಣ್ಗ್-ಗನ್ಡ್‌ನ ಬಾಳ್ವೆಗೆ ಬೆಳ್ಕ ತಾವ ಮನ್ಗಳ ಕಾರ್‍ಯ, ನೀ ಈಗ ಹೇಳಿ ತೋರ್‍ಸದ ನಮ್ಮ ಬಾಸೆ ಗವುಡ ಕನ್ನಡವ ಬೆಳ್ಕ ನನ್ನ ಅರೆ ಮನ್ಸ್ಸನ್ಯ ಅರೆ ಬಾಸೆನ ಬೆಳ್ಗಿತ್. ಹಾನ್ನಾಗಿ ಇದೂ ಒನ್ದು ಮನ್ಗಳ ಕಾರ್‍ಯನೇ. ನೀ ವಯ್ಸ್ಸಲಿ ಸಣ್ಣವ, ಆದರೂ ಸಾಕಸ್ಟ ತಿಳ್ಕೊನ್ಡೊಳ. ನಮ್ಮ ಜನಾನ್ಗದ ಮಕ್ಕ ಬೋದಾಳ್ರಾಗದೆ ನಿನ್ನ ಹಾನ್ಗೇ ಉಸಾರಾದರೆ ನಮ್ಮ ಜನಾನ್ಗನೇ ಬೆಳ್ಕ ಕಾವ್ದೊದು. (ಹೊರ್‍ಟ್ ಎದ್ದ್ ನಿನ್ತ ರವಿನ ನೋಡಿ) ಆತ್ ಹೋಕೂನ್ತ ಹೇಳ್ಯ ನೀ, ಬನ್ದದೆ ಬಾರಿ ಹರ್ಸ ಆತ್. (ರವಿ ಗುಡ್ಡಪ್ಪಜ್ಜನ ಕಾಲ್ ಹಿಡ್ದ್ ಆಸೀರ್ವಾದ ತಕ್ಕಮ್ಬಕ್ಕೆ ಬಗ್ಗದೆ, ಗುಡ್ಡಪ್ಪಜ್ಜ ಅವನ ತಲೆ ಮುಟ್ಟ ಕೈ ಮುಗ್ದ್) ಕಾಲ್ ಹಿಡ್ಕವ್ದೊದರ್ರೂ ನೀ ಬುಟ್ಟತ್ಲೆ ಅಲ್ಲಾ; ಅತಪ್ಪಾ ಹೋಗಿ ಬಾ ಒಳ್ಳೆದಾಗಲಿ ಬರ್‍ತಾ ಇರ್ ಏನ್. ನಮ್ಮ ಬಾಸೆನ ಮಯಿಮೆನ ನಮ್ಮೊವು ಎಲ್ಲಾ ತಿಳ್‌ಕಮ್ಬ ಹಾನ್ಗೆ ಪುಸ್ತಕಲಿ ಬರಿ ಬಲಾ!

ರವಿ :- ಅಕ್ಕ್ ದೊಡಪ ಬನ್ನೆ ಹಿರಿಯವ್‌ರ ಆಸೀರ್ವಾದದ ಬಲ ಇಲ್ಲದೆ ಸಣ್ಣೊವ್ಕೆ ಏನ್ ಮಾಡಿಕ್ಯಾದೆ? ಬನ್ನೆ-ಹೊರ್‍ಟ್ ಹೋದೆ.



# ಗಟ್ಟದ ಕೇಸರಿ

# ದಿ॥ ನಿಡ್ಯಮಲೆ ಮುದ್ದಪ್ಪ ಜಡ್ಜಿ

—ಎನ್. ಬಿ. ಅನಂತ, ಪೆರಾಜೆ



ಕಣ್ಮರೆಯಾದ ನಮ್ಮ ಹಿರಿಯೊವು

ಒಂದು ಕಾಲಲಿ ಬಾಳ ಹಿಂದೆ ಬಿದ್ದಿದ್ದ ಗೌಡ ಜನಾಂಗದವರ ಮುಂದೆ ತಾಕೆ ಬಾರೀ ಪ್ರಯತ್ನ ಪಟ್ಟ ವ್ಯಕ್ತಿಗಳ್ಲಿ ದಿ॥ ನಿಡ್ಯಮಲೆ ಮುದ್ದಪ್ಪನವುಕೆ ಮೊದಲ ಸ್ಥಾನಂತೇಳ್ರೆ ತೊಪ್ಪಾಕಿಲ್ಲೆ. ಮುದಪ್ಪನವು ಇಂದ್ ಬೊದ್ಕಿ ಕಲ್ಲದರೂ, ಅವು ಮಾಡ್ದ ಸಮಾಜ ಸೇವೆ ಮತ್ತೆ ಮಾರ್ಗದರ್ಶನಗ ಮಾತ್ರ ಜಿವಲೇ ಇಂದಿಗೂ ಉಟ್ಟು. ಆದರೆ ಇವು ಬೇರೀ ಜನಾಂಗಕ್ಕೆ ಮಾತ್ರಲ್ಲ; ಜಿಲ್ಲೆನ ಉದ್ಧಾರಕ್ಕಾಗಿ ಹಗ್ಲ್ ರಿಳ್ಲ್ ದುಡ್ದ ವ್ಯಕ್ತಿ. ಮುದ್ದಪ್ಪನವುಕೆ ಆಗ ಅವರ ಅಂಣ ದಿ। ಬೆಳ್ಯಪ್ಪನವು ದಾರಿದೀಪನಂಗೆ ಇದ್ದೊ.

---

ನರ ಜಲ್ಮ ಇರ್ದು ನಾಕೆ ದಿನ; ಪ್ರಾಣಿಗಳಂಗೆ ಹುಟ್ಟಿ, ತಿಂದ್-ಬೊದ್ಕಿ ಸತ್ತರೆ ಯಾವ ಸುಖ?

ನಿಡ್ಯಮಲೆ ಮುದ್ದಪ್ಪ ಜಡ್ಜಿ ಇಂದಿಗೆ ತೀರಿಹೋಗಿ ಮೂವತ್ತ್ ವರ್ಸ ಕಳ್ತ್. ಆದರೆ ಅವು ಹೋಕಾಕನ ಹೊತ್ಸಿಟ್ಟ ದೀಪ ಮಾತ್ರ ಆರದೆ ಇಂದಿಗೂ ಹಂಗೆ ಹೊತ್ತಿಕಂಡೆ ಉಟ್ಟು.

---

ಸಂಪಾಜೆ ಹಕ್ಕಲೆಲಿರ್‌ವ ಪೆರಾಜೆ ಗ್ರಾಮಲಿ ೧೮೯೫ರಲ್ಲಿ ನಿಡ್ಯಮಲೆ ರಾಮಪ್ಪ ಮತ್ತೆ ತಂಗವ್ಮ ದಂಪತಿಗಳ ಸುಪುತ್ರ ಆಗಿ ಮುದ್ದಪ್ಪನವು ಜಲ್ಮ ತಾಳ್ದೊ. ನಿಡ್ಯಮಲೆ ರಾಮಪ್ಪನವು ಬ್ರಿಟೀಸ್ ರಾಜಬಾರಲಿ ಬಾಗಮಂಡ್ಲ ಲಿ ಪಾರ್ತೆರ (ಪಾಕ್ಪತ್ತೆಗಾರ)ರಾಗಿದ್ದೊ. ನಿಸ್ಪೆ ನಿಸ್ವಾರ್ಥಂದ ಸೇವೆ ಮಾಡ್ದ ಜೆನಗಳಂಗೆ ರಾಮಪ್ಪನವು ಸಾ ಒಬ್ಬ. ಇವರ್ದ್ ಬಡ ಕುಟುಂಬ ಆಗಿತ್ತ್; ಆದರೆ ಆಗ ಕೆಲು ಜಾತಿ ರಾಜಕೀಯಂದಾಗಿ ಅವರ ಮನ್ಸ್‌ಗೆ ಬೇಜಾರ ಆಗಿ ಕೆಲ್‌ಸನೇ ಬುಡುವ ಪ್ರಸಂಗ ಬಾತ್ ಇವುಕೆ. ಇದ್ರಂದಾಗಿ ಇವರ ಮನೆನ ಸ್ತಿತಿಗತಿ ಮತ್ತೆ ಹದಗೆಡ್ತ್; ಆಸ್ತಿ ಸಾ ಬಾಳ ಕಮ್ಮಿ ಇತ್ತ್. ಇವರ ಸುರುನ ಮಂಙ ಬೆಳ್ಯಪ್ಪನವು ಕಸ್ಟಪಟ್ಟ್ ಇಂಟರ್ ಮೀಡಿಯೆಟ್ ವರೆಗೆ ಕಲ್ತ್, ಮಡಿಕೇರಿಲಿ ಚೀಪ್ ಕಮೀಷನರ್ ಕಛೇರ್ಲಿ ಹೆಡ್‌ಕ್ಲಾರ್ಕ್ ಚಾಕ್ರಿಗೆ ಸೇರ್ದೊ. ಇದ್ರಂದಾಗಿ ಸಂಸಾರದ ಪೂರಾ ಹೊಣೆಗಾರಿಕೆ ಬೆಳ್ಯಪ್ಪನವರ ತಲೆ ಮೇಲೆ ಬೀತ್. ಸಂಸಾರದ ಹೊರೆ ಹೊತ್ತ ಮೇಲೆ ಬೆಳ್ಯಪ್ಪನವು ಹಿಂಗೆ ನ್ಯೆನ್ಸಿದೊ; ಇರ್ವ ಅಂಗೈ ಅಗಲ ಆಸ್ತಿಗೆ ಇಬ್ಬೊರು ತಮ್ಮಂದ್ರ್ ಕೆಲ್‌ಸ ಮಾಡ್ದು ಸೆರಿ ಅಲ್ಲ, ನಡುನಂವ ಮುದ್ದಪ್ಪ ಗದ್ದೆ, ತೋಟದ ಕೆಲ್ಸ ಮಾಡ್ಕಂಡ್ ಮನೆಲೇ ಇರ್ಲಿ; ಸಂಣವ ಸೋಮಣ್ಣನ ಓದ್ಸಿಕೆ ಕಳ್ಸದೊಂತ. ಹಿಂಗೆ ಸೊಲ್ಪ ವರ್ಸ ಕಳ್ತ್; ಸಂಣವ ಸೋಮಣ್ಣ ಶಾಲೆಗೆ ಹೋಗ್ತಾ ಇತ್ತ್ - ಮುದ್ದಪ್ಪ ಮನೆಲಿ ಬೇಸಾಯ ಮಾಡ್ಕಂಡ್ ಇತ್ತ್. ಆದರೆ ನಾಟಿ ನೆಡ್ಕನ, ಕಮ್ಮಿಗೆ ಹತ್ತಿ ಅಡಿಕೆ ಕೊಯ್ಯಕನ, ಮುದ್ದಪಂಗೆ ಮಾತ್ರ ಬರ ಕಲಿಯಕುಂತೇಳೇ ಒಂದು ಆಸೆ. ನಾ ಹೆಂಗಾರ್ ಮಾಡಿ ವಿದ್ಯೆ ಪಡೆಕೊಂತ ಇವು ಈ ವಿಸಯನ ಅಂಣ ಬೆಳ್ಯಪ್ಪನವರೊಟ್ಟಿಗೆ ಹೇಳ್‌ಕನ ಬೆಳ್ಯಪ್ಪನವು ಅಸ್ಟ್ ಸುಲಬಲಿ ಒಪ್ಪಿಕಂಡತ್ಲೆ; ಕಾರ್ಣ ಮುದ್ದಪ್ಪನವು ಓದಿಕೆ ಹೋದರೆ ಮನೆ ಆಸ್ತಿ ನೋಡ್ಕಂಬಕೆ ಯಾರ್‌ತಾ ಆಲೋಚನೆ. ಓದ್ಸಿಕೆ ದುಡ್ಡ್ ಕಾಸ್‌ನ ತಾಪತ್ರೆನೂ ಮತ್ತೊಂದು ಕಡೆ. ಆದರೆ ಹಟ ಬುಡದ ಮುದ್ದಪ್ಪನವು ಅಂಣನೊಟ್ಟಿಗೆ, ನಂಗೆ ನೀವು ಓದಿಕೆ ದುಡ್ಡು ಕೊಡುದು ಬೇಡ, ನಾನ್ ಸಿದ್ದಾಪುರಕೆ ಹೋಗಿ ಕಾಫಿ ತೋಟಲಿ ಕೆಲ್ಸ ಮಾಡಿ ದುಡ್ಡು ಮಾಡ್ಕಂಡ್ ಮತ್ತೆ ಓದಿನೆಂತ ಹೇಳ್ದೊ. ಆಗ

ಮುದ್ದಪ್ಪನನ್ನೆ ಹದ್ನೆಂಟ್ ವರ್ಷ ಪ್ರಾಯ. ತಮ್ಮನ ಗಟ್ಟೆ ಮನ್ಸ್‌ನ ತಿಳ್ವ ಬೆಳ್ಯಪ್ಪನನ್ನೆ ಇವನ ಓದ್ಸೊಕು ತೇಳಿ ಮನ್ಸಾತ್. ಅಲ್ಲಿಂದ ಅವು ತಮ್ಮನ ಮಡಿಕೇರಿ ಕಾನ್ವೆಂಟ್‌ಲಿ ನಾಕ್ನೆ ಕ್ಲಾಸಿಗೆ ಸೇರ್ಸಿದೊ. ಓದುದರ್ಲಿ ಬಾಕಿಯವುಕಿಂತ ಮುದ್ದಪ್ಪನವು ಬಾಳ ಚುರ್ಕು ಇದ್ದ ರ್‌ಂದ ಇವ್ನೆ 'ಡಬಲ್' ಪ್ರಮೋಷನ್ ಸಿಕ್ತ್. ಬಾಳ ಬೇಗ ಇವು ಇಂಟರ್‌ಮೀಡಿಯೆಟ್‌ನ ಮುಗ್ಸಿದೊ. ಅಷ್ಪೊತ್ತಿಗೆ ದ. ಕ. ಜಿಲ್ಲೆ ಐವರ್‌ನಾಡ್ ಗ್ರಾಮದ ಮಡ್ತಿಲ ಬೆಳ್ಯಪ್ಪನವರ ಒಬ್ಬೆ ಮಗ್ಳ್ ದೇವಮ್ಮನ ಮುದ್ದಪ್ಪನನ್ನೆ ಮದುವೆ ಮಾಡಿಕೊಡ್ದು ಮತ್ತೆ ವಿದ್ಯಾಭ್ಯಾಸನ ಮುಂದ್ವರ್ಸಿಕೆ ಸಾಯ ಮಾಡ್ವಂತ ಒಪ್ಪಚಾರ ಆತ್. ಈ ರೀತಿಲ ಮುಂದೆ ಇವು ಮಂಗ್ಳೂರ್ನ ಸೆಯಿಂಟ್ ಅಲೋಸಿಯಸ್ ಕಾಲೇಜ್‌ಲಿ ಬಿ. ಎ ಓದಿದೊ. ಅಲ್ಲಿಂದ ಮದ್ರಾಸ್ ವಿಶ್ವ ವಿದ್ಯಾಲಯಲಿ ಕಾನೂನು ಅಬ್ಬೆಸ ಮಾಡಿ ಬಿ. ಎಲ್. ಪದ್ವಿನ ಪಡ್ದೊ. ಹದ್ನೆಂಟ್ ವರ್ಷ ಪ್ರಾಯಕೆ ವಿದ್ಯೆ ಕಲಿಯಕೆ ಹೊರ್ಟ್ ಪದ್ವಿ ಪಡೆದೂಂತೇಳ್ರೆ ಅದ್ ಸಾಮಾನ್ಯ ಸಂಗತಿನ !

ಓದಿ ಆದಂಗೆ ಸುರುನ ಒಪ್ಪಚಾರದಂಗೆ ಮಡ್ತಿಲ ಬೆಳ್ಯಪ್ಪನವರ ಮಗ್ಳ್ ದೇವಮ್ಮನವರ ಇವು ಮದುವೆ ಆದೊ. ಮತ್ತೆ ಮಡಿಕೇರಿಲೆ ಲಾಯರ್ ಕೆಲ್ಸನ ೧೯೨೪ ರ್‌ಂದ ಸುರು ಮಾಡಿ ಹಂಞ ಸಮೆಲೇ ಬಾರಿ ಹೆಸ್ರ್ ಪಡ್ದ್ ವಿರಾಜ್‌ಪೇಟೆ ಮುನ್ಸಿಫ್ ಕೋರ್ಟ್‌ಲಿ ಮುನ್ಸಿಫ್ ಆಗಿ ೧೯೩೨ರ್ಲಿ ಆಯ್ಕೆ ಆದೊ. ಮತ್ತೆ ಸೊಲ್ಪ ಸಮೆಲಿ ಕೊಡಗ್ ಜಿಲ್ಲೆನ ಸೆಷನ್ಸ್ ಕೋರ್ಟ್‌ನ ಜಡ್ಜ್ ಆಗಿ ೧೯೪೦ರ್ಲಿ ಅಧಿಕಾರ ವಯ್ಸಿಕಂಡೊ. ದಿ|| ಮುದ್ದಪ್ಪನವರ್ದ್ ಬಾಳ ತೀಕ್ಷ್ಣ ಬುದ್ಧಿ, ಮತ್ತೆ ನೇರ ಸೊಬಾವದೊವು ಆಗಿದ್ದೊ. ಹಿಂದೊಂದು - ಮುಂದೊಂದು ತೇಳಿ ಇತ್ಲೆ. ಕಾನೂನ್‌ನ ದಿಷ್ಟಿಲಿ ಮಾತ್ರ ಎಲ್ಲವೂ ಒಂದೆಂತ ಬಾವನೆನ ಇಸಿ ಕಂಡಿದ್ದೊ. ಬ್ರಿಟಿಸ್‌ನವರ ರಾಜಬಾರಲಿ ಇದ್ದ ಜಾತಿ ರಾಜಕೀಯಂದಾಗಿ ಗೌಡ ಜನಾಂಗದೊವು ಮೂಲೆಗಂಡಿದ್ದ ಸಂಗತಿ ಇವರ ಹೂಲ್ನಂತ ಮನ್ಸ್‌ಗೆ ಬಾಳ ಬೇಜರ ಮಾಡಿತ್. ಅವರ ಅಪ್ಪ ರಾಮಪ್ಪನವು ಸಾ ಜಾತಿ ರಾಜಕೀಯಂಗಳ್ದಾಗಿ ತುಂಬಾ ಬ್ಯಾನೆ ತಿಂದದ್ ಇವರ ಮನ್ಸ್‌ಲಿ ಮಾಸದೆ ಇತ್ತ್. ಈ ಸ ಮೆ ಲಿ ಮುದ್ದಪ್ಪನವು ಗೌಡ ಜನಾಂಗಕ್ಕೆ ಆಗ " ಹಿರಿಯಣ್ಣನಂಗೆ " ಇದ್ದ್ ಜನಾಂಗದ ಉದಾರಕ್ಕೆ ಸಾಕಷ್ಟ್ ಶ್ರಮ ಪಟ್ಟೊಳೊ. ಕೊಡಗ್‌ಲಿ ಗೌಡ ವಿದ್ಯಾ ಸಂಘನ ಸ್ಥಾಪನೆ ಮಾಡಿಕೆ ಕಾರ್ಯಕರ್ತ ಆದವರ್ಲಿ ಇವು ಒಬ್ಬ ಆಗಿದ್ದ್, ಇದರ ಅಧ್ಯಕ್ಷ ಸಾ ಆಕಂಡ್ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಬೇಕಷ್ಟ್ ದುಡ್ಡ್ ಸಾಯ ಮಾಡ್ಯಳೊ. ಅಂತೂ ಸಾಕಷ್ಟ್ ಜೆನಂಗ ಇವರ ಮಾರ್ಗ ದರ್ಶನನ ಅಲ್ಸಿ ಅವರ್ನ ಹಿಂಬಾಲಿಸ್ಯೊಳೊ. ಹರಿಜೆನ್ರ ಉದ್ಧಾರ ಮಾಡಿಕಂತೂ ಶಕ್ತಿ ಮೀರಿ ಕೆಲ್ಸ ಮಾಡ್ದ ಇವು ಸಾಕಷ್ಟ್ ಹರಿಜೆನ ಮಕ್ಕಳ್ನ ತಮ್ಮ ಸೊಂತ ಮನೆಲೇ, ಅನ್ನ, ನೀರ್, ಬಟ್ಟೆ ಕೊಟ್ಟ್ ತನ್ನ ಸೊಂತ ಮಕ್ಕಳಂಗೆ ಸಾಂಕಿ ನೋಡಿಕಂಡದರ ಈಗೋಳು ಸಾ ಬಾಳ ಜೆನ ಹೆಮ್ಮೆಂದ ಹೇಳ್ಕಂಡ್ ಅವರ ಸ್ಮರಿಸ್ತಾ ಒಳೊ. ೧೯೨೯ರ್ಲಿ ಬ್ರಿಟಿಸ್ ದೊರೆಗಳ ವೈಸ್ರಾಯಿ ಲಾರ್ಡ್ ಇರ್ವಿನ್ ಕೊಡ್ಗ್‌ಗೆ ಬಂದಿರ್ಕನ ಮುದ್ದಪ್ಪನವು ತನ್ನ ಇತರ ಜೊತೆಗಾರರ್ನ ಸೇರ್ಸಿಕಂಡ್ ಗೌಡ ಜನಾಂಗದ ಮೂಲ ಉಡ್ಗೆಲಿ ಬೇಟಿ ಮಾಡಿ ಜನಾಂಗದವರ ಪರಾಗಿ 'ಬಿನ್ನವತ್ತಳೆ' ಅರ್ಪಿಸೊಳೊ.

ಮುದ್ದಪ್ಪನವರ ಕೈ ಹಿಡ್ದ ಗೃಹಲಕ್ಷ್ಮಿ ದೇವಮ್ಮನವು ಇವರ ಒಳ್ಳೆ ಕೆಲ್ಸ ಕಾರ್ಯಕ್ಕೆ ಹೆಗ್ಲ್ ಕೊಟ್ಟ್, ಸಮಾಜ ಸೇವೆಲಿ ಗಂಡನಷ್ಟೆ ಸೇವೆಮಾಡ್ದ ಪುಣ್ಯ ಕಾಯಿ. ಮುದ್ದಪ್ಪನೊನ್ನೆ ಮೂರ್ ಗಂಡ್ ಮತ್ತೆ ಎಂಟ್ಜನ ಹೆಣ್ಮಕ್ಕ ಸೇರಿ ಒಟ್ಟು ಹನ್ನೊಂದು ಮಕ್ಕ. ಆಗ ಇವರ ವಾಸ ಇಂದ್‌ನ ಮಡಿಕೇರಿನ ಚರ್ಚ್‌ಸೈಡ್ ಹೋಟ್ಲ್‌ನ ಕಟ್ಟಡಲಿ. ಮುಂದೆ ಮಡಿಕೇರಿಲೇ ಏಳ್ ಎಕ್ರೆ ಜಾಗೆ ಮತ್ತೆ ಮನೆನ ಸೊಂತಕ್ಕೆ ತಕಂಡ್ ' ದೇವಿ ಮಂದಿರ ' ತೇಳ್ವ ದೊಡ್ಡ ಮನೆಲಿ ವಾಸ ಮಾಡ್ತಿದ್ದೊ. ಮುದ್ದಪ್ಪನವರ ಸಮಾಜ ಸೇವೆ ಮತ್ತೆ ಏಳಿಗೆನ ನೋಡ್ದ ವಿಧಿಗೆ ಸಯಿಸಿಕಾತ್ಲೆ ಕಂಡದೆ: ೧೯೪೬ರ್ಲಿ ಇವರ ಹೆಣ್ಣ್ ದೇವಮ್ಮ ಶಿವನ ಪಾದ ಸೇರ್ದೊ. ಮನ್ಸ್ ತುಂಬಿದ ಹೆಣ್ಣ್ ತೀರ್ದ ಮೇಲೆ ಮುದ್ದಪ್ಪನವರ ಬಾಳ್ "ಒಂಟೆ ಎತ್ತ್‌ನ ಗಾಡಿ"ನಂಗಾತ್. ಇದೇ ಕೊರ್ಗ್‌ಂದ ಏನೋ ಇವ್ನೆ ಕ್ಯಾನ್ಸರ್ ಕಾಯ್ಲೆ ತಗ್‌ಲ್ತ್. ಯಾಕೆಂತೇಳ್ರೆ ಮನಿಸಂಗೆ ಚಿಂತೆಗಿಂತ ಚಿತೆಯಿಲ್ಲೆ, ಕ್ಯಾನ್ಸರ್ ಕಾಯ್ಲೆ ಗುಣ ಪಡ್ಸಿಕ್ಕಾಗಿ ಮದ್ರಾಸ್, ಬೊಂಬಾಯಿತ ಸುಮಾರ್ಕಡೆ ಸುತ್ತಾಡ್ರೂ ಯಾವ ಪ್ರಯೋಜನ ಕಾಣ್ದೆ ಇವು ಜಡ್ಜ್ ಕೆಲ್ಸಲಿ ಇರ್ಕನೇ ಅಂದರೆ ೧೯೫೪ರ್ಲಿ ತೀರ್ಯೊದೊ.

ನಿರ್ಧಾರ ಮಾಡ್ರೆ ಯಾವ ಕೆಲ್ಸನ ಬೇಕ್ರೂ ಸಾಧನೆ ಮಾಡಕ್‌ಂತೇಳಿ ತೋರ್ಸಿ ಕೊಟ್ಟೊವೂ ಇವು.

## ಹಳ್ಳಿಂದ—ಡೆಲ್ಲಿಗೆ

# ದಿ॥ ನಿಡ್ಯಮಲೆ ಸೋಮಣ್ಣನವು

—ಎಡಿಕೇರಿ ಜಿ. ವಿಶ್ವನಾಥ್



ಕಣ್ಮರೆಯಾದ ನಮ್ಮ ಹಿರಿಯುವು -

ಕಣ್ಣಿಗೆ ತುಂಪು ಮೂಡ್ವ ಕಾಡ್, ಬೆಟ್ಟ ಗುಡ್ಡೆಗಳ್‌ಂದ ಕೂಡಿ; ಕಾಫಿ, ಕಿತ್ತ್ಳೆ, ಬತ್ತ್, ಯಾಲಕ್ಕಿನ ಬೆಳ್ಸುವ ನಮ್ಮ ಪೊಲ್ರ್‌ನ ನಾಡ್ ಕೊಡಗ್ ಜಿಲ್ಲೆ-ಕಾವೇರಿ ಮಾತೆನ ತವುರೂರು. ಇಂತ ಪುಣ್ಯ ಜಿಲ್ಲೆಂದ ಸ್ವತಂತ್ರ ಭಾರತದ ಸುರೂನ ಲೋಕಸಭೆಗೆ ಎಂ. ಪಿ. ಆಗಿ ಗೆದ್ದ್ ಹೋದ ಕೀರ್ತಿ ದಿ॥ ನಿಡ್ಯಮಲೆ ಸೋಮಣ್ಣನವರ್ದ್.

೧೯೦೫ನೇ ಇಸ್ವಿ ಎಪ್ರಿಲ್ ೧೫ರಂದ್ ಭಾಗಮಂಡ್ಲ ನಾಡ್ಲಿ ಪಾರ್ಪತ್ತೆಗಾರ ಆಗಿದ್ದ ರಾಮಪ್ಪನವರ ಮೂರ್ನೆ ಮಂಜ ಆಗಿ ಸೋಮಣ್ಣನವು ಜಲ್ಮ ತಾಳ್ರೊದ್. ಸಣ್ಣದಿರ್‌ಕನೆ ಚೂಟಿಯಾಗಿದ್ದ ಸೋಮಣ್ಣನವು ಪ್ರೌಢ ವಿದ್ಯಾಭ್ಯಾಸನ ಮಡಿಕೇರಿ ಸೆಂಟ್ರಲ್ ಹೈಸ್ಕೂಲ್‌ಲಿ ಮುಗ್ಸಿ, ನಂತ್ರ ಮಂಗ್ಳೂರ್ನ ಸೆಯಿಂಟ್ ಎಲೋಸಿಯಸ್ ಕಾಲೇಜಲಿ ಬಿ.ಎ. ಪದ್ವಿ ಪಡ್ತ್,ಮದ್ರಾಸ್ ವಿಶ್ವ ವಿದ್ಯಾನಿಲಯಲಿ 'ಲಾ' ಪದ್ವಿನ ೧೯೩೦ರ್ಲಿ ಗಳ್ಸಿದೊ. ಅಂದ್‌ನ ಕಾಲಲಿ ಓದುಬರ ಕಲ್ತ್ ಆದಂಗೆ ಸರ್ಕಾರಿ ಚಾಕ್ರಿಗೆ ಸೇರ್ದುಂತೇಳ್ರೆ ಬಾಳ ಗವುರವ ಇತ್ತ್‌ಗಡ! ನಮ್ಮ ದೇಶ ಆಗ ಬ್ರಿಟಿಷ್‌ನವರ ಕೈ ಕೆಳಗೆ ಇದ್ದರ್‌ಂದ ಸೋಮಣ್ಣನವರ ಮನ್ಸ್‌ಲಿ ಬ್ರಿಟಿಷರ್ನ ನಮ್ಮ ದೇಶಂದ ಒಡ್ಸ್ಬೇಕು ತೇಳಿ ಒಂದೇ ಒಂದು ಗುರಿ ಮಾತ್ರ ಇತ್ತ್. ಇವರ್ಲಿ ಸ್ವಾರ್ಥತೆ ಮಾತ್ರ ಒಂದು ಚೂರು ಇತ್ಲೆ. ಆಗನ ಕಾಲಲೇ ತುಂಬಾ ಓದಿದ ಇವು ಮನ್ಸ್ ಮಾಡಿದ್ದರೆ ಬಾಳ ದೊಡ್ಡ ಚಾಕ್ರಿಗೆ ಸೇರಕಾಗಿತ್ತ್. ಸ್ವಾತಂತ್ರ್ಯ ಇಲ್ಲದ ದೇಶಲಿ ಯಾವ ದೊಡ್ಡ ಹುದ್ದೆ ಇದ್ದರೇನ್? ಯಾರ ಹಂಗ್‌ಲೇ ಇಲ್ಲದಿರುವ್ದೆ ದೊಡ್ಡ ಹುದ್ದೆಂತೇಳಿ ತಿಳ್ಕಂಡ ಸೋಮಣ್ಣನವು ಓದು ಮುಗ್ದಂಗೆ ಸ್ವಾತಂತ್ರ ಹೋರಾಟಕೆ ಇಳ್ರೊ.

ಬರ ಕಲ್ತಾದಂಗೆ ಇವು ಕಾಂಗ್ರೆಸ್ ಪಾರ್ಟಿಗೆ ಸೇರ್ರೊ.; ಇಲ್ಲಿಂದ ಅವರ ರಾಜಕೀಯ ಜೀವನ ಸುರಾತ್. ಮುಂದೆ ಇವು ತಮ್ಮ ರಾಜಕೀಯ ಜೀವನಲಿ ಒಳ್ಳೆ ಹೆಸ್ರ್ ಪಡ್ದ್ ಕೊಡಗ್ ಜಿಲ್ಲಾ ಕಾಂಗ್ರೆಸ್ ಸಮಿತಿನಾ ಉಪಾದ್ಯಕ್ಷರಾದೊ. ಸೈಮನ್ ಕಮಿಷನ್ ಬಾರತಕ್ಕೆ ಬಂದಿರ್‌ಕಾಕನ ಅವನ ವಿರುದ್ಧ ಚಳುವಳಿಲಿ ಬಾಗವಯಿಸಿ, ೧೯೪೨ರ್ಲಿ 'ಭಾರತ ಬಿಟ್ಟು ತೊಲಗಿರಿ'(ಕ್ವಿಟ್ ಇಂಡಿಯಾ ಚಳುವಳಿ) ಸತ್ಯಾಗ್ರಹಲಿ ಬಾಗಿಯಾಗಿ ಸೆರೆ ಸಿಕ್ಕಿರೂ ಸಾ ಬ್ರಿಟಿಷರ ಕಣ್ಣಿಗೆ ಮಣ್ಣಾಕಿ ತಪ್ಸಿಕಂಡ್ ಬಂದ್, 'ಭೂಗತ ಚಳುವಳಿಗಾರನಂಗೆ' ಕೆಲ್ಸ ಮಾಡಿದ್ರೊ.

ದಿ॥ ಸೋಮಣ್ಣನವು ೧೯೪೫ರ್ಲಿ ಕೊಡಗ್‌ನ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯ ಆಗಿ ರಾಜ್ಯದ ದುಡ್ಡ್ ಕಾಸ್‌ನ ಜೋಪಾನ, ಯೋಜನೆಗಳ ತಯಾರ್ ಮಾಡ್ದು, ಹರಿಜನ-ಗಿರಿಜನಗಳ ಮುಂದಕೆ ತಾದು, ಇಂತ ಕೆಲ್ಸಗಳ್ಲಿ ಬಾಳ ಪ್ರಯತ್ನ ಪಟ್ರೊಳೊ.

ಇವು ಗಾಂಧೀಜಿಯುವರ ಶಿಷ್ಯರ್ ಆಗಿದ್ದ್ ಅವರ ತತ್ವಗಳ ಪಾಲ್ಸ್‌ತ್ತಿದೊ. ಖಾದಿ ಬಟ್ಟೆನ ತಯಾರ್ ಮಾಡ್ದು ಮತ್ತೆ ಉಟ್ಕಂಬದರ ಬಗ್ಗೆ ಪ್ರಚಾರ ಮಾಡ್ತಿದ್ರೊ. ಪರ್ದೇಶಗಳ ಬಟ್ಟೆನ ಭಾರತದವು ಉಪಯೋಗ್ಸಿಕೆ ಬೊತ್ತ್‌ಂತೇಳಿ ಪ್ರಚಾರ ಮಾಡಿದ್ರೊ. ಕೃಷಿನ ಬಗ್ಗೆ ಇವುಕೆ ತುಂಬಾ ಮುತ್ವರ್ಜಿ ಇತ್ತ್. ಲಂತಾನ ಕಮಿಟಲೂ ಸಾ ಇವು ಬಾಳ ಕೆಲ್ಸ ಮಾಡ್ಯೊಳೊ. ಬೊಂಬಾಯಿ ಸರಕಾರ ಇವರ ಕರ್ನಾಟಕ ವಿಶ್ವ ವಿದ್ಯಾಲಯ-ಧಾರವಾಡ, ಇದರ ಸಮಿತಿ ಸದಸ್ಯ ಆಗಿ ಆಯ್ಕೆ ಮಾಡಿತ್ತ್. ೧೯೪೯ರ್ಲಿ ಸರ್ದಾರ್ ವಲ್ಲಬಾಯಿ ಪಟೇಲ್ರ್,

ಇವರ ಕೊಡಗ್ ಜಿಲ್ಲೆನ ಭವಿಷ್ಯತ್ತ್‌ನ ಚರ್ಚೆ ಮಾಡಿಕ್ಕಾಗಿ ಡೆಲ್ಲಿಗೆ ಕರ್‍ಸಿಕಂಡಿದ್ದೊ.

ಸೋಮಣ್ಣನವು ೧೯೫೨ರ್ಲಿ ನಡ್ದ ಭಾರತದ ಸುರುನ ಲೋಕಸಭೆಗೆ ಕೊಡಗ್ ಜಿಲ್ಲೆನ ಪ್ರತಿನಿಧಿ ಆಗಿ (ಎಂ. ಪಿ.) ಚುನಾಯಿತರಾದೊ. ಲೋಕಸಭೆಲಿ — 'ಯೋಜನಾ ಮಂಡಳಿ' ಮತ್ತೆ 'ಗೃಹ ವಿಷಯಗಳ' ಸಮಿತಿದ್ ಸದಸ್ಯ ಆಗಿದ್ದೊ. ಬರೀ ಕೊಡಗ್‌ಗೆ ಸಮ್ಮಂದ ಪಟ್ಟದಲ್ಲದೆ, ದೇಶದ ರಕ್ಷಣೆ ಮತ್ತೆ ಭಾರತದ ವಿಮಾನ ಬಲ, ನೌಕಾ ಬಲದ ಬಂದೊ ಬಸ್ತ್ ಮಾಡೊಕುಂತೇಳಿ ಸರ್ಕಾರನ ಒತ್ತಾಯ ಮಾಡಿದ್ದೊ. ಕೊಡಗ್ ಜಿಲ್ಲೆ 'ಸಿ' ಪ್ರಾಂತ ಆಗಿದ್ದದ್ ಇವುಕೆ ಇಷ್ಟ ಆಗದೆ 'ಎ' ಪ್ರಾಂತಕೆ ಸೇರ್‍ಸೊಕೊಂತ ಬಾಳ ಪ್ರಯತ್ನ ಪಟ್ಟೊಳೊ.

ಸರಳ ಸೊಬಾವದ ಸುದ್ದ ಮನಸ್ಸ್‌ನ ಸೋಮಣ್ಣನವು ಒಳ್ಳೆ ಮಾತ್‌ಗಾರ ಆಗಿದ್ದೊ. ಗೌಡ ಜನಾಂಗದ ಏಳಿಗೆಗೆ ಇವು ಬಾಳಸ್ಟ್ ದುಡ್ದೊಳೊ. ಆದರೆ ದುರಾದೃಷ್ಟಂದ ಇವುಕೆ ಪಕ್ಷವಾತ (ಪಾರ್ಶ್ವವಾಯು) ಕಾಯಿಲೆ ತಗ್ಲಿ ಇವರ ರಾಜಕೀಯ ಜೀವನ ಕುಂಠಿತ ಗೊಂಡರ್‌ಂದ ೧೯೫೭ನೇ ಇಸ್ವಿಲಿ ಮೈಸೂರು ರಾಜ್ಯದ ವಿಧಾನಸಭೆಗೆ ಪಿರಿಯಾಪಟ್ನಂದ ಆರಿಸಿ ಬಂದೊ. ತ್ಯಾಗಿ ಜೀವಿಗಳಿಗೆ ದೇವ್ರು ಜಾಸ್ತಿ ಆಯಿಸನ ಕೊಡ್ದುಲೆಂತೇಳ್ರೆ ತೊಪ್ಪಲ್ಲ. ತನ್ನ ಇಡೀ ಜೀವಮಾನನ ಸಮಾಜ ಸೇವೆಗಾಗಿ ಅರ್ಪಿಸಿದ ಸೋಮಣ್ಣನವು, ತನ್ನ ೫೩ನೇ ವಯಸ್ಸ್‌ಲಿ (೧೯೬೦ರ್ಲಿ) ತೀರಿಹೋದೊ.

ಕುಕ್ಕುನೂರು ಸುಬ್ಬಮ್ಮನವರ ಮೊದುವೆ ಆದರಿ. ಸೋಮಣ್ಣನವುಕೆ ನಾಲ್ ಜನ ಗಂಡ್ ಮತ್ತೆ ಐದ್ ಜನ ಹೆಣ್ಮಕ್ಕ. ಈಗ ಸೊಲ್ಪ ದಿನದ ಹಿಂದೆ ಇವರ ದೊಡ್ಡ ಮಂಜ ದಯಾನಂದನವು ತೀರಿಹೋದೊ. ಸುಬ್ಬಮ್ಮನವು ಈಗ ಮಡಿಕೇರಿಲಿ ಇವರ ಮನೆಲಿ ವಾಸ ಒಳೊ.

---

# ಗಾದೆಗ

- ದೊಡ್ಡವರ ಮಾತ್ ಲಾಯಿಕ ಬಡವರ ಊಟ ಲಾಯಿಕ
- ಸತ್ತ ಎಮ್ಮೆಗೆ ಹತ್ತ್ ಕೊಂಡೆ ಹಾಲ್
- ಊರಿಗೆ ಬಂದ ಗೂಡೆ ನೀರಿಗೆ ಬಾಕಿಲೆನೋ ?
- ಸರಿ ಸಮಾರ ಎಡೇಲಿ ಮುಪ್ಪೇಕೆ ಗೊಣಗುಟ್ಟೋಕು ?
- ಎಲಿ ಹೋದಲ್ಲಿ ಹುಲಿ ಹೋತ್‌ಂತ ಹೇಳ್‌ವ ಜೆನ
- ಪಾಪಿ ಹೋದಲ್ಲಿ ಮೊಣ್ಕಾಲ್‌ಗೆ ನೀರ್ ಗಡ
- ಕಳ್ಳ ಕದಿಯಕನ ಕೊಂಬಚೇಳ್ ಕಚ್ಚಿದಂಗೆ
- ಕೆಮ್ಮು ಮತ್ತೆ ಹಾದರ ಅಡ್‌ಂಗಿಸಿರೆ ಹೊರಬೀಳ್ದು ಜಾಸ್ತಿ ಗಡ
- ಮಲ್ಲಿಗೆದೊಟ್ಟೆಗೆ ಬಾಳೆ ನಾರಿಗೆ ಕ್ರಯ
- ತಣ್ಣೀರಿಲೇ ಗುಳ್ಳೆ ಬಾಕನ ಬಿಸಿ ನೀರ್‌ಲಿ ಹೇಂಗೆ ಆದು
- ಮರಕೆ ಹೊಡ್ದ್ ಗೆಲ್ಲಿಗೆ ತಾಗ್‌ಸುದು ಬೇಡ

—ಪಡ್ಡಂಬೈಲು ಡಿ. ಶೇಷಪ್ಪ

